# ಸಂಪೂಜನ

(ಪ್ರೊ. ಯಾಮುನಾಚಾರ್ಯ ಸಂಸ್ಮರಣ ಸಂಪುಟ)






ಸಂಪಾದಕರು

**ಎಸ್. ಎಸ್. ರಾಘವಾಚಾರ್**

**ಕೆ. ಬಿ. ರಾಮಕೃಷ್ಣರಾವ್**

**ಯಾಮುನಾಚಾರ್ಯ ಸಂಸ್ಮರಣ ಸಂಪುಟ ಸಮಿತಿ**

ರಮಾವಿಳಾಸ ರಸ್ತೆ, ಮೈಸೂರು–1.

SAMPUJANA

( Prof. Yamunacharya Commemoration Volume )



Editors

**S. S. Raghavachar**

**K. B. Ramakrishna Rao**





Price Rs. 25/-

Published by : Gandhi Peace Foundation, Bangalore.

For

Prof. Yamunacharya Samsmarana Samputa Samithi

Ramavilas Road, Mysore.

Printed at : Mayura Enterprises, Mysore-1

# ಪರಿವಿಡಿ

## ENGLISH SECTION

# ಅರಿಕೆ

ಮೈಸೂರಿನ ಜನಕ್ಕೆ ಪ್ರೊ|| ಯಾಮುನಾಚಾರ್ಯರು ತಮ್ಮ ಬದುಕಿನುದ್ದಕ್ಕೂ ಸಂಪೂಜ್ಯರಾಗಿದ್ದವರು. ಅವರ ಶಿಷ್ಯಕೋಟಿ ಅಪಾರ. ಅವರ ಸ್ನೇಹವೃಂದ ಅಸಂಖ್ಯಾತ. ಸರ್ವಸಾಮಾನ್ಯರಲ್ಲಿ ಸಾಮಾನ್ಯರಾಗಿ ಅತ್ಯುತ್ಕೃಷ್ಟ ವಿದ್ವತ್‌ವೃಂದದಲ್ಲೂ ಅದ್ವಿತೀಯರಾಗಿ ಎಪ್ಪತ್ತೊಂದುವರ್ಷಗಳ ತುಂಬು ಬಾಳನ್ನು ಬಾಳಿದವರು. ಅವರ ನಿಕಟಾನುವರ್ತಿಗಳಾದ ನಾವು ಕೆಲವರು ಅವರ ಕಡೆಯದಿನಗಳಲ್ಲಿ ಅವರಿಗೊಂದು ಸನ್ಮಾನಗ್ರಂಥ ಅರ್ಪಿಸಲು ಪ್ರಯತ್ನ ಪ್ರಾರಂಭಿಸಿದೆವು. ನಮ್ಮ ಬಲವಂತಕ್ಕೆ ಅವರು ಒಪ್ಪಿದರು. ನಮ್ಮ ದುರ್ದೈವದಿಂದ ಅದಾದ ಎರಡು ತಿಂಗಳೊಳಗೆ 4-1-70ರಂದು ಶ್ರೀಯುತರು ನಿಧನರಾದರು. ನಾವು ನಿರುತ್ಸಾಹರಾಗಿ ಖಿನ್ನರಾಗಿ ಪ್ರಯತ್ನವನ್ನು ಕೈಬಿಟ್ಟಿದ್ದೆವು. ನಾವು ರಚಿಸಿಕೊಂಡಿದ್ದ ಸಮಿತಿಯ ಹಿರಿಯರಾದ ಶ್ರೀ ದೇ.ಜ.ಗೌ., ಶ್ರೀ ಟಿ. ಕೃಷ್ಣಮೂರ್ತಿ, ಶ್ರೀ ರಾಘವಾಚಾರ್ಯ ಇವರುಗಳು ನಮ್ಮನ್ನು ಮತ್ತೆ ಕರೆದು ಶ್ರೀಯುತರ ಸಂಸ್ಮರಣೆಗಾಗಿ ಈ ಗ್ರಂಥಪ್ರಕಾಶನಕಾರ್ಯವನ್ನು ಮುಂದುವರಿಸಿ ಅವರಹೆಸರಿನಲ್ಲಿ ವಿಶ್ವವಿದ್ಯಾನಿಲಯದಲ್ಲಿ ಒಂದು ಪುದುವಟ್ಟನ್ನು ಸ್ಥಾಪಿಸಲು ಪ್ರೇರೇಪಿಸಿದರು. ಪ್ರಶಾಂತಪ್ರಾಜ್ಞರಾಗಿದ್ದ ಶ್ರೀ ಯಾಮುನಾಚಾರ್ಯರ ಚಿರನೆನಪು ಉಳಿಯಲು ನಮ್ಮ ನಮ್ಮ ಕಾಣಿಕೆ ಅರ್ಪಿಸಲು ಮತ್ತೆ ಒಮ್ಮೆ ಆ ಪ್ರಯತ್ನ ಕೈಗೊಂಡು ಹಲವಾರು ಮಹನೀಯರಿಗೆ ಮಹಿಳೆಯರಿಗೆ ನೆರವಿಗಾಗಿ ಮನವಿಪತ್ರ ಬರೆದೆವು. ಲೇಖನಗಳೂ ಪ್ರೋತ್ಸಾಹಪತ್ರಗಳೂ ಬಂದುವು. ಸ್ವಲ್ಪ ಸ್ವಲ್ಪವಾಗಿ ಧನಸಹಾಯವೂ ಒದಗಿಬಂತು. ಶ್ರೀ ಟಿ. ಕೃಷ್ಣಮೂರ್ತಿಯವರು ತಮ್ಮ ಕಣ್ಣಿನ ಚಿಕಿತ್ಸೆಗಾಗಿ ಬೊಂಬಾಯಿಗೆ ತೆರಳಿ ಹಲವು ತಿಂಗಳು ನಿಲ್ಲಬೇಕಾಯಿತು. ಶ್ರೀ ರಂಗರಾಜು ಶ್ರೀ ನಾರಾಯಣಸ್ವಾಮಿ ಬೆಂಗಳೂರಿಗೆ ವರ್ಗವಾದರು. ಕೆಲಸ ಸ್ವಲ್ಪ ನಿಧಾನವಾಯಿತು. ಇದಕ್ಕಾಗಿ ನಾವು ನಮಗೆ ಉತ್ಸಾಹದಿಂದ ನೆರವಿತ್ತ ದಾನಿಗಳನ್ನು ಕ್ಷಮೆ ಬೇಡಬೇಕು. ನಮ್ಮಲ್ಲಿ ಸಂಗ್ರಹವಾದ ಹಣ ನಮ್ಮ ಕಾರ್ಯಕ್ಕೆ ಸಾಲದಾಗಿತ್ತು. ಸರ್ಕಾರದ ಸಾಂಸ್ಕೃತಿಕ ಮತ್ತು ಸಾಹಿತ್ಯ ಅಭಿವೃದ್ಧಿ ಇಲಾಖೆ ಮತ್ತು ಅದರ ಮುಖ್ಯಸ್ಥರಾದ ಡಾ|| ಅನಂತರಂಗಾಚಾರ್ಯರು ನೆರವಿಗೆ ಬಂದು ಎರಡು ಸಾವಿರ ರೂ. ಒದಗಿಸಿದರು. ಮೈಸೂರುರಾಜ್ಯ ಗಾಂಧೀಸ್ಮಾರಕನಿಧಿಯಿಂದ ಐನೂರು ರೂ. ಗಳು ಬಂದುವು. ಗೆಳೆಯ ಭದ್ರಯ್ಯನವರು ಐನೂರು ರೂ. ಗಳನ್ನು ಟೆಹರಾನಿನಿಂದ ಕಳುಹಿಸಿದರು. ಡಾ|| ಕೃಷ್ಣಸ್ವಾಮಿ ವಾಷಿಂಗ್‌ಟನ್ನಿನಿಂದ ಹಣ ಕಳುಹಿಸಿದರು. ಸುಮಾರು 6000/- ರೂ. ಒಟ್ಟು ಸಂಗ್ರಹವಾಯಿತು. 500 ಪುಟಗಳ ಡೆಮ್ಮಿ ಆಕಾರದ ಗ್ರಂಥವನ್ನು ಮುದ್ರಿಸಲು ಮಯೂರ ಪ್ರೆಸ್ಸಿನವರು ಒಪ್ಪಿ ಕೆಲಸ ಕೈಗೊಂಡರು ಈಗ ಒಟ್ಟು 8500/-ರೂ. ಗಳು ವೆಚ್ಚವಾಗಿದೆ. ಗ್ರಂಥಮಾರಾಟದಿಂದ ಬರುವ ಹಣ

ದಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಶ್ರೀ ಯಾಮುನಾಚಾರ್ಯ ಸ್ಮಾರಕ ಪ್ರಶಸ್ತಿಯನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ. ಈ ಪುಣ್ಯಕಾರ್ಯದಲ್ಲಿ ಸ್ನೇಹಿತರು ಭಾಗಿಗಳಾಗಬೇಕೆಂದು ವಿನಯಪೂರ್ವಕವಾಗಿ ಬೇಡುತ್ತೇವೆ.

ಈ ಮಧ್ಯೆ ಯಾಮುನಾಚಾರ್ಯರಿಗೆ ಆತ್ಮೀಯರಾಗಿದ್ದ ಶ್ರೀಯುತರಾದ ಪ್ರೊ. ಎ. ಆರ್. ವಾಡಿಯ ಮತ್ತು ಡಾ|| ಎಂ. ವಿ. ಕೃಷ್ಣರಾಯರು ಸ್ವರ್ಗಸ್ಥರಾದರು. ಈ ಕಾರ್ಯದಲ್ಲಿ ವಿಶ್ವಾಸವಿಟ್ಟು ನೆರವಿತ್ತ ಈ ಸ್ಮರಣೀಯ ವಿದ್ವನ್ಮಣಿಗಳಿಗೆ ನಮ್ಮ ಶ್ರದ್ಧಾಂಜಲಿಯನ್ನರ್ಪಿಸುತ್ತೇವೆ.

ಈ ಗ್ರಂಥಪ್ರಕಾಶನ ಸಮಾರಂಭಕ್ಕೆ ಶ್ರೀ ಮಾಸ್ತಿಯವರೂ ಶ್ರೀ ಕುವೆಂಪು ಶ್ರೀ ದಿವಾಕರ್ ಅವರೂ ಅಕ್ಕರೆಯಿಂದ ಒಪ್ಪಿಬಂದು ಈ ಪ್ರಯತ್ನವನ್ನು ಹರಸಿದ್ದಾರೆ. ಶ್ರೀಮತಿ ರಾಜಮ್ಮ ಯಾಮುನಾಚಾರ್ಯರು ನಮಗೆ ಅತ್ಯಂತ ಪ್ರೀತಿವಾತ್ಸಲ್ಯದ ನೆರವಿತ್ತರು. ಶ್ರೀ ಯಾಮುನಾಚಾರ್ಯರ ಸುಪುತ್ರ ಶ್ರೀ ಮುತ್ತು ಅವರ ಸಹಾಯವನ್ನು ಸ್ಮರಿಸುತ್ತೇವೆ. ಧನಸಹಾಯ ಮಾಡಿದ ಮಿತ್ರರಿಗೂ, ಗ್ರಂಥಸಂಪಾದನೆಯಲ್ಲಿ ನೆರವಿತ್ತ ಪ್ರೊ. ರಾಘವಾಚಾರ್ಯ ಡಾ| ಕೆ. ಬಿ. ರಾಮಕೃಷ್ಣರಾವ್ ಡಾ| ಎ. ಎಲ್. ಶಿವರುದ್ರಪ್ಪ ಇವರುಗಳಿಗೂ ಕೃತಜ್ಞತೆಗಳು.

28-10-72
ಮೈಸೂರು

**ಕೆ. ಎಸ್. ನಾರಾಯಣಸ್ವಾಮಿ**
**ಪಿ. ಮಲ್ಲೇಶ್**
ಸಮಿತಿಯ ಕಾರ್ಯದರ್ಶಿಗಳು

# ಶ್ರೀ ಯಾಮುನಾಚಾರ್ಯ ಸಂಸ್ಮರಣ ಸಂಪುಟ ಸಮಿತಿ

**ಶ್ರೀ. ದೇ. ಜವರೇಗೌಡ**
ಉಪಕುಲಪತಿ : ಮೈಸೂರು ವಿಶ್ವವಿದ್ಯಾನಿಲಯ (ಪೋಷಕರು)
**ಶ್ರೀ. ಟಿ. ಕೃಷ್ಣಮೂರ್ತಿ**
ವಿಶ್ವಸಂಸ್ಥೆಯ ನಿವೃತ್ತ ವಿದ್ಯಾಧಿಕಾರಿಗಳು, ಮೈಸೂರು.
**ಶ್ರೀ. ನ. ಭದ್ರಯ್ಯ**
ವಯಸ್ಕರ ಶಿಕ್ಷಣತಜ್ಞರು, ಯುನೆಸ್ಕೋ, ನೈರೋಬಿ.
**ಶ್ರೀ. ಹೆಚ್. ವಿ. ಶ್ರೀರಂಗರಾಜು**
ಸಹನಿರ್ದೇಶಕರು : ವಿದ್ಯಾ ಇಲಾಖೆ, ಬೆಂಗಳೂರು.
**ಡಾ॥ ಎ. ಎಲ್. ಶಿವರುದ್ರಪ್ಪ**
ತತ್ವಶಾಸ್ತ್ರ ಅಧ್ಯಾಪಕರು : ಮಾನಸಗಂಗೋತ್ರಿ, ಮೈಸೂರು.

## ಸಂಪಾದಕರು

**ಪ್ರೊ॥ ಎಸ್. ಎಸ್. ರಾಘವಾಚಾರ್**
ತತ್ವಶಾಸ್ತ್ರ ಪ್ರಾಧ್ಯಾಪಕರು : ಮಾನಸಗಂಗೋತ್ರಿ, ಮೈಸೂರು.
**ಡಾ॥ ಕೆ. ಬಿ. ರಾಮಕೃಷ್ಣರಾವ್**
ಹಿಂದೂತತ್ವಶಾಸ್ತ್ರ ಪ್ರಾಧ್ಯಾಪಕರು, ಮೈಸೂರು.

## ಕಾರ್ಯದರ್ಶಿಗಳು

**ಶ್ರೀ. ಕೆ. ಎಸ್. ನಾರಾಯಣಸ್ವಾಮಿ**
ಕಾರ್ಯದರ್ಶಿ : ಗಾಂಧೀಶಾಂತಿ ಪ್ರತಿಷ್ಠಾನ, ಬೆಂಗಳೂರು.
**ಶ್ರೀ. ಪಿ. ಮಲ್ಲೇಶ್**
ಮಯೂರ ಮುದ್ರಣಾಲಯ : ಮೈಸೂರು.

ಸಮಿತಿ ಕಾರ್ಯಾಲಯ
ಗಾಂಧಿ ಶಾಂತಿ ಪ್ರತಿಷ್ಠಾನ
ರಮಾವಿಲಾಸ ರಸ್ತೆ, ಮೈಸೂರು.



ಅಮೆರಿಕದ ಸ್ನೇಹಿತರೊಂದಿಗೆ



ಅಮೆರಿಕದ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದಲ್ಲಿ



ಮೈಸೂರಿನ ಆಹಾರ ಸಂಶೋಧನಾಲಯದಲ್ಲಿ ಗಾಂಧೀ ಜಯಂತಿ 1968
ಡಾ. ಪಾರ್ಸಿಯಾ ಅವರೊಡನೆ

# ಸಂಪಾದಕೀಯ

ಪೂಜ್ಯ ಶ್ರೀ ಯಾಮುನಾಚಾರ್ಯರು ನಮ್ಮೊಡನಿದ್ದಾಗಲೇ ಅವರಿಗೆ ಈ ಗ್ರಂಥ ಸಮರ್ಪಿತವಾಗಬೇಕಾಗಿತ್ತು. ನಮ್ಮ ದುರದೃಷ್ಟವೆಂಬಂತೆ ಶ್ರೀಯುತರು ನಮ್ಮನ್ನಗಲಿದರು. ಆಗ ಕೈಕೊಂಡ ಗ್ರಂಥದ ಕಾರ್ಯ ಈಗ ಮುಕ್ತಾಯವಾಗಿದೆ. ಆಚಾರ್ಯರ ಸ್ಮರಣಾರ್ಥವಾಗಿ ಹೊರಗೆ ಬರುತ್ತಿದೆ.

ಜೀವನವನ್ನು 'ದಿವ್ಯ' ಗೊಳಿಸಬೇಕೆಂಬ ಆದರ್ಶವನ್ನು ನಾವೆಲ್ಲರೂ ಕೇಳಿರುವವರೇ, ಆದರೆ ಅದನ್ನು ತತ್ವಶಃ ಮೈಗೂಡಿಸಿಕೊಳ್ಳುವುದು ಕಷ್ಟ. ಇದಕ್ಕೆ ಅಪವಾದವೋ ಎಂಬಂತೆ ಇತ್ತು ಶ್ರೀ ಯಾಮುನಾಚಾರ್ಯರ ಜೀವನ. ಶ್ರೇಷ್ಠ ವಿದ್ವಾಂಸರ, ಕಲಾತಪಸ್ವಿಗಳ ಮನೆತನದಲ್ಲಿ ಹುಟ್ಟಿ, ವಂಶಪಾರಂಪರ್ಯವಾಗಿ ಬಂದ ಸಂಸ್ಕೃತಿಯನ್ನು ಜೀರ್ಣಿಸಿಕೊಂಡು, ತಮ್ಮ ಸಾಧನೆಗಳ ಮೂಲಕ ಆ ಪರಂಪರೆಗೆ ಮೆರಗನ್ನು ಕೊಟ್ಟ ಮಹನೀಯರು ಶ್ರೀ ಆಚಾರ್ಯರು. ಅವರ ಮೃದು ಮಧುರ ಬಾಂಧವ್ಯದ ಸವಿಯನ್ನು ಕಂಡವರು ಅನೇಕರು. ಪ್ರೇಮ ವಿಶ್ವಾಸಗಳ ಹೊನಲಿನಲ್ಲಿ ಮಿಂದವರು ಅನೇಕರು. ಅವರ ಅಪಾರ ಜ್ಞಾನ ಮತ್ತು ಅನುಭವದ ಲಾಭ ಪಡೆದವರು ಅನೇಕರು. ತಾವಿದ್ದೆಡೆಯಲ್ಲಿ ತೇಜಃಪ್ರಭಾವವನ್ನು ಬೀರುತ್ತಾ ಬಾಳಿದ ಮಹಾವ್ಯಕ್ತಿ ಶ್ರೀ ಯಾಮುನಾಚಾರ್ಯರು.

ಅವರ ಜೀವನ ಕ್ಷೇತ್ರವೆಂದರೆ ಭಾರತೀಯ ಸಂಸ್ಕೃತಿಯ ಮಹಾಮೌಲ್ಯಗಳ ಸಂಗಮ. ಅದೂ ಪರಿಪೂರ್ಣತೆಗಾಗಿ ಆಚಾರ್ಯರು ತಳಮಳಿಸುತ್ತಿದ್ದುದನ್ನು ಕಂಡರೆ ಅವರ ವ್ಯಕ್ತಿತ್ವ ಎಷ್ಟು ಉನ್ನತವಾದುದು ಎಂದು ತಿಳಿಯುತ್ತಿತ್ತು. ಎಲ್ಲ ಮಹನೀಯರ ಆದರ್ಶವೂ ಅವರಿಗೆ ಆದರಣೀಯ, ಸಾಧನಯೋಗ್ಯ. ಮಹಾತ್ಮಾ ಗಾಂಧೀಜಿಯವರು ಶ್ರೀ ಯಾಮುನಾಚಾರ್ಯರ ಜೀವನ ಕ್ಷೇತ್ರವನ್ನು ಹೊಕ್ಕಿದ್ದು ಹೀಗೆ. ಗಾಂಧಿಜೀಯವರ ವ್ಯಕ್ತಿತ್ವದ ಕಡೆ ಆಕರ್ಷಿತವಾಗಿದ್ದ ಶ್ರೀಯುತರು ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ ಹೊಂದಿದ ಮೇಲೆ ತಮ್ಮ ಪೂರ್ಣ ಸಮಯವನ್ನು ಗಾಂಧಿಜೀಯವರ ಜೀವನ ಮತ್ತು ಮಹತ್ಸಾಧನೆಗಳ ಅಧ್ಯಯನಕ್ಕಾಗಿ ಮೀಸಲಾಗಿಟ್ಟರು. ಪರಿಪಕ್ವವಾದ ತಮ್ಮ ಅನುಭವದ ಬೆಳಕಿನಲ್ಲಿ ಮಹಾತ್ಮಾಜೀಯವರ ಅಂತರಾತ್ಮದ ಪರಿಚಯ ಮಾಡಿಕೊಂಡರು. ಶ್ರೀ ಯಾಮುನಾಚಾರ್ಯರಿಗೆ ಗಾಂಧಿಜೀಯವರು ರಾಜಕಾರಣಿಗಳಾಗಿರಲಿಲ್ಲ. ಆತ್ಮ ಅಥವಾ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಶ್ರಮಿಸುತ್ತಿದ್ದ ತಪಸ್ವಿಗಳಂತಿದ್ದರು. ಜೀವನ ಕ್ಷೇತ್ರದಲ್ಲಿಯೇ ಪಾರಲೌಕಿಕ ಸತ್ಯ ಧರ್ಮಗಳ ಬೆಳಕನ್ನು ಕಂಡ ಮಹನೀಯರಾಗಿದ್ದರು. ಆಧ್ಯಾತ್ಮಿಕ ಮೌಲ್ಯಗಳನ್ನು ಇಹ ಜೀವನದಲ್ಲಿ ಬಾಳಿದ ಮಹಾ ಸಂತರಾಗಿದ್ದರು. ಆಚಾರ್ಯರು ಈ ಮಹನೀಯರ ಜೀವನದರ್ಶನದಲ್ಲಿ ತಮ್ಮ ದೇವರನ್ನು ಕಂಡರು. ಅವರ ಆದರ್ಶ ಮಹಾಮೋಹಕ

ವೆಂದು ಹೇಳುತ್ತಿದ್ದರು. ಮಹಾತ್ಮಾಜೀಯವರ ವ್ಯಕ್ತಿತ್ವದ ಅತಿ ಸೂಕ್ಷ್ಮ ಪರಿಚಯು ವನ್ನು ಪಡೆದ ಆಚಾರ್ಯರು ಗಾಂಧಿ ಜೀವನ ಮತ್ತು ಸಾಹಿತ್ಯಗಳ ಬಗ್ಗೆ ಒಬ್ಬ ಅಧಿಕೃತ ವ್ಯಾಖ್ಯಾನಕಾರರಾಗಿದ್ದರೆಂದರೆ ಉತ್ಪ್ರೇಕ್ಷೆಯಲ್ಲ. ಅವರ ನಿರಂತರ ಪರಿಶ್ರಮು ದಿಂದ ಗಾಂಧಿ ಸಾಹಿತ್ಯ ಕನ್ನಡಿಗರಿಗೆ ಲಭಿಸಿದಂತಾಯಿತು.

ವಿದ್ಯಾಸಂಪನ್ನ, ವಿನಯಸಂಪನ್ನ, ಸ್ನೇಹಪರ, ವಾಗ್ಮಿ, ದೈವಭಕ್ತ, ದೀನದಲಿತರ ಬಗ್ಗೆ ಆದರ, ಹೀಗೆ ಅನೇಕ ಕಲ್ಯಾಣಗುಣಗಳ ಖನಿಯಾಗಿದ್ದರು ಶ್ರೀ ಯಾಮುನಾ ಚಾರ್ಯರು. 'ದೇವಯಾನ'ವೆಂಬುದು ಮರಣೋತ್ತರ ಪಥವೆಂದು ನಾವು ಕೇಳಿ ದ್ದೇವೆ. ಆದರೆ ಅದು ಜೀವನ ಪಥವೂ ಕೂಡ ಎಂದು ಆಚಾರ್ಯರು ತೋರಿಸಿ ಕೊಟ್ಟಿದ್ದಾರೆ.

ಈ ಗ್ರಂಥದ ಕಾರ್ಯದಲ್ಲಿ ಅನೇಕರು ಸೇರಿದ್ದಾರೆ. ಅವರ ಶಿಷ್ಯರು, ಮಿತ್ರರು, ಅವರಲ್ಲಿ ಅಭಿಮಾನವಿಟ್ಟವರು, ಹೀಗೆ ಆಚಾರ್ಯರ ವಿಚಾರದಲ್ಲಿ ಎಲ್ಲರಿಗೂ ಏಕ ರೀತಿಯಾದ ಗೌರವವೇ. ಆ ಗೌರವದ ಕುರುಹಾಗಿ ಈ ಗ್ರಂಥವನ್ನು ಅವರ ದಿವ್ಯ ಸ್ಮರಣೆಗೆ ಅರ್ಪಿತಮಾಡುತ್ತಿದ್ದೇವೆ. ತೇಜೋರೂಪಿಗಳಾದ ಶ್ರೀ ಯಾಮುನಾ ಚಾರ್ಯರು ಭಕ್ತಿಪೂರ್ವಕವಾಗಿ ಅರ್ಪಿತವಾಗುತ್ತಿರುವ ಈ ಕಾಣಿಕೆಯನ್ನು ಸ್ವೀಕರಿ ಸುತ್ತಾರೆಂದು ನಮ್ಮ ಆಶಯ.

ಗ್ರಂಥಕ್ಕೆ ಆಚಾರ್ಯರಿಗೆ ಯಾವ ವಿಚಾರಗಳಲ್ಲಿ ಅಭಿಮಾನವಿತ್ತೋ ಅವುಗಳ ಬಗ್ಗೆ ವಿದ್ವತ್ಪೂರ್ಣವಾದ ಲೇಖನಗಳನ್ನು ಅನೇಕರು ಇತ್ತು ಸಹಾಯ ಮಾಡಿದ್ದಾರೆ. ತಮ್ಮ ಶಿಷ್ಯರಾದ ಶ್ರೀ ಯಾಮುನಾಚಾರ್ಯರ ವಿಚಾರದಲ್ಲಿ ಬಹು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾ ಗುರುಗಳಾದ ಶ್ರೀ ಎ. ಆರ್. ವಾಡಿಯಾರವರೂ ಆತ್ಮೀಯರಾದ ಎಂ. ವಿ. ಕೃಷ್ಣರಾಯರೂ ಲೇಖನಗಳನ್ನು ಒದಗಿಸಿದರು. ಆದರೆ ಈ ಮಹನೀಯರೂ ವಿಧಿವಶರಾದರು. ಅವರ ದಿವ್ಯ ಸ್ಮರಣೆಯನ್ನೂ ಇಲ್ಲಿ ಮಾಡುತ್ತಾ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇವೆ. ಗ್ರಂಥ ಪ್ರಕಟಣೆಗೆ ಆರ್ಥಿಕ ಸಹಾಯ ಅನೇಕ ಕಡೆಗಳಿಂದ ಬಂದಿದೆ—ವ್ಯಕ್ತಿಗಳು, ಖಾಸಗಿ ಸಂಸ್ಥೆಗಳು, ಸರ್ಕಾರ ಇತ್ಯಾದಿ. ಅವರಿಗೂ ನಮ್ಮ ಕೃತಜ್ಞತೆಗಳು. ಹಾಗೆಯೇ ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಮಯೂರ ಮುದ್ರಣದವರಿಗೆ ನಮ್ಮ ವಂದನೆಗಳು.

ಈ ಗ್ರಂಥಕ್ಕೆ ಬೇಕಾದ ಅನೇಕ ವಿಚಾರಗಳನ್ನು ಒದಗಿಸಿಕೊಟ್ಟು, ಶ್ರೀ ಯಾಮುನಾಚಾರ್ಯರ ನಿಕಟವರ್ತಿಗಳಾಗಿದ್ದ ಆಚಾರ್ಯರ ಧರ್ಮಪತ್ನಿ ಆಚಾರ್ಯರ ನೆನಪುಗಳನ್ನು ನಮಗೆ ಮಾಡಿಸಿಕೊಟ್ಟಿದ್ದಾರೆ ತಮ್ಮ ಲೇಖನದಲ್ಲಿ. ಗುಣದ ದೃಷ್ಟಿ ಯಿಂದ ಶ್ರೀಮತಿಯವರ ಲೇಖನ ಗ್ರಂಥದ ಮಹತ್ವವನ್ನು ಹೆಚ್ಚಿಸಿದೆ ಎಂದರೂ ತಪ್ಪಿಲ್ಲ. ಆಚಾರ್ಯರ ಜೀವನಕ್ಕೆ ಸಂಬಂಧಪಟ್ಟ ಅನೇಕ ಚಿತ್ರಗಳನ್ನು ಒದಗಿಸಿಕೊಟ್ಟು, ನಾವು ಆಚಾರ್ಯರ ಮನೆಗೆ ಹೋದಾಗಲೆಲ್ಲಾ ಅತ್ಯಂತ ಆದರದಿಂದ ನಮ್ಮನ್ನು ಕಂಡ ಆಚಾರ್ಯರ ಪುತ್ರ ಶ್ರೀ ಮುತ್ತು ಅವರಿಗೂ ನಾವು ಕೃತಜ್ಞರು.

**—ಪ್ರಧಾನ ಸಂಪಾದಕರು**



ಷಷ್ಟಿಪೂರ್ತಿ 1957



ಹರಿಜನ ಶಿಷ್ಯರೊಡನೆ ಯಾಮುನಾಚಾರ್ಯ 1958

। ಶ್ರೀ ।

ಶ್ರೀಮತೇ ರಾಮಾನುಜಾಯ ನಮಃ.





# ವಿವಾಹಮಹೋತ್ಸವ ಲಗ್ನಪತ್ರಿಕಾ

ಶ್ರೀಮತಾಂ ಸನ್ನಿಧಿಯಲ್ಲಿ

ಎ. ಗೋಪಾಲಾಚಾರ್ಯ ಕೃತ ಪ್ರೀತಿಪೂರ್ವಕ ವಿಜ್ಞಾಪನಾ.

ಉಭಯ ಕುಶಲೋಪರಿ

ಈ ಪರೀಧಾವಿ ಸಂವತ್ಸರ ಮಾಘ ಶುದ್ಧ ೧೩ ಬುಧವಾರ ಮೇಷಲಗ್ನಕ್ಕೆ ಸರಿಯಾದ ೧೯೧೩ ನೇ ಫೆಬ್ರವರಿ ೧೯ ನೇ ತಾರೀಖು ಬೆಳಿಗ್ಗೆ ೧೦ ಘಂಟೆಯಲ್ಲಿ ನನ್ನ ಅಗ್ರಜಕುಮಾರನಾದ ವಿ. ಕೃಷ್ಣಸ್ವಾಮಿಯ (ಶಾಮಣ್ಣನ) ಕುಮಾರ್ತಿ

ಸೌ॥ ರಾಜಮ್ಮನನ್ನು

ರಿಟೈರ್ಡ್ ಎಗ್ಜಿಕ್ಯೂಟಿವ್ ಇಂಜಿನಿಯರ್, ಶ್ರೀಮಾನ್ ವಿ. ಗೋವಿಂದಾಚಾರ್ಯರ ಅಳಿಯಂದರು, ಎಂ. ನಾರಾಯಣಸ್ವಾಮ್ಯಯ್ಯಂಗಾರ್ರವರ ಕುಮಾರ

ಚಿ॥ ಯಾಮುನಾಚಾರ್ಯನಿಗೆ,

ಕನ್ಯಾದಾನಮಾಡಿ ವಿವಾಹ ಶುಭಕಾರ್ಯವನ್ನು ಮೈಸೂರು ಚಾಮರಾಜಪೇಟೆಯಲ್ಲಿ [illegible]ವಾಗಿ ಹಿರಿಯರಿಂದ ನಿಯಮಿತವಾಗಿರುವುದರಿಂದ ತಾವು ಕುಟುಂಬ [illegible] ದಯಮಾಡಿಸಿ ವಧೂವರರಿಗೆ ಆಶೀರ್ವಾದಮಾಡಬೇಕೆಂದು.

ಮಾ. ಶಿ. ಸುಕ್ಷೇಮ.

ತಮ್ಮ ವಿಧೇಯ,

ಎ. ಗೋಪಾಲಾಚಾ

# GOD OUR GUIDE.

Thy way, not mine, O Lord,
However dark it be!
Lead me by Thine own hand,
Choose out the path for me.
Smooth let it be or rough,
It will be still the best:
Winding or straight, it leads
Right onward to Thy rest.
I dare not choose my lot:
I would not if I might:
Choose Thou for me, my God,
So shall I walk aright.
The kingdom that I seek
Is Thine; so let the way
That leads to it be Thine,
Else I must surely stray.
Take Thou my cup, and it
With joy or sorrow fill,
As best to Thee may seem;
Choose Thou my good and ill.
Not mine, not mine the choice,
In things or great or small.
Be Thou my guide, my strength,
My wisdom and my All.

ಶ್ರೀಯುತರ ನಿತ್ಯಪಾಠಗಳಲ್ಲೊಂದು, ಚೌಕಟ್ಟುಹಾಕಿದ ಚಿತ್ರಪಟ



ಶ್ರೀ ಯಾಮುನಾಚಾರ್ಯ ಅವರ ತಂದೆ

# ಧರ್ಮಪತ್ನಿಯ ನೆನಪುಗಳು

## ಶ್ರೀಮತಿ ರಾಜಮ್ಮ ಯಾಮುನಾಚಾರ್ಯ

ಶ್ರೀ ಯಾಮುನಾಚಾರ್ಯರ ತಾತಂದಿರು ಸೇಲಂ ಜಿಲ್ಲೆಯ ಪೇಟಪಟ್ಟಿ ಗ್ರಾಮದ ಶ್ರೀ ವೆಂಕಟರಾಮಯ್ಯಂಗಾರ್ಯರು. ಇವರ ಮಕ್ಕಳು ಶ್ರೀ ನಾರಾಯಣಯ್ಯಂಗಾರ್ಯರು ಶ್ರೀ ಯಾಮುನಾಚಾರ್ಯರ ತಂದೆ. ಮೈಸೂರಿನ ಪ್ರಸಿದ್ಧ ಇಂಜನಿಯರ್-ವೇದಾಂತಿಗಳೆನಿಸಿದ್ದ ಶ್ರೀ ಗೋವಿಂದಾಚಾರ್ಯಸ್ವಾಮಿಗಳ ಮತ್ತು ಶ್ರೀಮತಿ ವೇದನಾಯಕಮ್ಮನವರ ಮಗಳು ಶ್ರೀಮತಿ ಮಾಣಿಕ್ಯಮ್ಮನವರೊಡನೆ ವಿವಾಹವಾಗಿ ಚಿಕ್ಕಂದಿನಲ್ಲೇ ಶ್ರೀ ನಾರಾಯಣಯ್ಯಂಗಾರ್ಯರು ಮೈಸೂರಿಗೆ ಬಂದು ನೆಲೆಸಿದರು. ಶ್ರೀ ಗೋವಿಂದಾಚಾರ್ಯರ ಮನೆಯಲ್ಲಿದ್ದುಕೊಂಡು ಓದಿ ನಂತರ ಒಂದು ಮುದ್ರಣಾಲಯವನ್ನು ನಡೆಸುತ್ತಿದ್ದರು. ಗೋವಿಂದಾಚಾರ್ಯರ ಪೂರ್ವಜರು ಶ್ರೀರಂಗದ ಕಡೆಯವರು, ತಿರುಕುಳಕುಲ್ಲೈ ಎಂಬ ಗ್ರಾಮದವರು. ಅವರ ತಂದೆ ಶ್ರೀ ಶ್ರೀನಿವಾಸಯ್ಯಂಗಾರ್ಯರು. ಇಂಗ್ಲೀಷ್ ವಿದ್ಯಾಭ್ಯಾಸಪಡೆದ ಮೊದಲಿಗರು. ಅವರು ಮೈಸೂರಿಗೆ ತಮ್ಮ ಶೇಷಯ್ಯಂಗಾರ್ಯರೊಂದಿಗೆ ಬಂದು ನೆಲಸಿದರು. ನಾಲ್ಮಡಿ ಕೃಷ್ಣರಾಜ ಒಡೆಯರಿಗೆ ಇಂಗ್ಲೀಷ್ ಭಾಷಾಭ್ಯಾಸ ಮಾಡಿಸುತ್ತಿದ್ದರಿಂದ ಶ್ರೀ ಶ್ರೀನಿವಾಸಯ್ಯಂಗಾರ್ಯರನ್ನು "ಅಂಗ್ರೇಜಿ ಶ್ರೀನಿವಾಸಯ್ಯಂಗಾರ್" ಎಂದು ಕರೆಯುತ್ತಿದ್ದರು. ಇವರಿಗೆ ಆರು ಮಕ್ಕಳು. ಮೂವರು ಗಂಡುಮಕ್ಕಳಲ್ಲಿ ಎರಡನೆಯವರೇ ಶ್ರೀ ಗೋವಿಂದಾಚಾರ್ಯರು. ಮೊದಲನೆಯವರಾದ ಶ್ರೀ ಶ್ರೀನಿವಾಸರಾಘವಾಚಾರ್ಯರು ಮೈಸೂರು ಸರ್ಕಾರದಲ್ಲಿ ಅಸಿಸ್ಟೆಂಟ್ ಕಮಿಷನರ್ ಆಗಿದ್ದರು. ಮೂರನೆಯವರು ಮೈಸೂರು ನಗರದಲ್ಲಿ ಪ್ರಸಿದ್ಧ ಫೋಟೋಗ್ರಾಫರ್ ಆಗಿದ್ದ ಶ್ರೀ ವರದಾಚಾರ್ಯರು.

ಶ್ರೀ ಗೋವಿಂದಾಚಾರ್ಯರು ಎಕ್ಸಿಕ್ಯೂಟಿವ್ ಇಂಜಿನಿಯರಾಗಿದ್ದರು. ಸಂಜನಗೂಡು ಕಪಿಲಾಸೇತುವೆ ಇವರ ನೇತೃತ್ವದಲ್ಲಿ ಕಟ್ಟಿದುದು. ಈಗಲೂ ಅದರ ಮೇಲೆ ಅವರ ಹೆಸರಿದೆ. ಶ್ರೀಮತಿ ಮಾಣಿಕ್ಯಮ್ಮ ಇವರ ಒಬ್ಬಳೇ ಮಗಳು. ಗಂಡುಸಂತಾನವಿಲ್ಲವಲ್ಲ ಎಂಬ ಕೊರಗಿನಲ್ಲಿ ಒಮ್ಮೆ ಗೋವಿಂದಾಚಾರ್ಯರ ತಾಯಿ ಎರಡನೇ ಮದುವೆಯ ಪ್ರಸ್ತಾಪಮಾಡಿದರಂತೆ. ಮಗಳು ಮಾಣಿಕ್ಯಮ್ಮ ತಂದೆಯ ಬಳಿ ಹೋಗಿ, "ಅಪ್ಪಾ, ನೀನು ಬೇರೆ ಮದುವೆ ಮಾಡಿಕೊಳ್ಳಬೇಡ. ನಾನು ಒಂಭತ್ತು ಮಕ್ಕಳ ತಾಯಿಯಾಗಿ ಗಂಡು ಮಕ್ಕಳನ್ನು ನಿನಗೆ ಕೊಡುತ್ತೇನೆ" ಎಂದು ಧೈರ್ಯವಾಗಿ ಹೇಳಿದರಂತೆ. ಮಾತೆಯ ಆಗ್ರಹಕ್ಕಿಂತ ಮಗಳ ವಿವೇಕವನ್ನೇ ಶ್ರೀ ಗೋವಿಂದಾಚಾರ್ಯರು ಅಂಗೀಕರಿಸಿ

ಅಳಿಯನನ್ನೂ ಮನೆಯಲ್ಲಿಟ್ಟುಕೊಂಡು ಮೊಮ್ಮಕ್ಕಳ ಲಾಲನೆ ಪೋಷಣೆಗಳಲ್ಲಿ ಮಗ್ನ ರಾಗಿಬಿಟ್ಟರಂತೆ. ಮಾಣಿಕ್ಯಮ್ಮನವರಿಗೆ ಮುಂದೆ ಅವು ಗಂಡುಮಕ್ಕಳೂ ಮೂರು ಹೆಣ್ಣು ಮಕ್ಕಳೂ ಜನಿಸಿದರು. ಶ್ರೀಮತಿ ಕಾಂತಿಮತಿ ಮೊದಲನೆಯವಳು. ಎರಡನೆಯವರೇ ಶ್ರೀ ಯಾಮುನಾಚಾರ್ಯರು. 1898 ರಲ್ಲಿ ಇವರು ಹುಟ್ಟಿದ ಕಾಲಕ್ಕೆ ಮನೆಯಲ್ಲಿ ನಾಲಾಯಿರ ಪ್ರಬಂಧ ಪಾರಾಯಣ ನಡೆಯುತ್ತಿತ್ತಂತೆ. ಗೋವಿಂದಾಚಾರ್ಯರ ಮನೆ ಆಗಲೇ 'ವೇದಗೃಹ' ಎಂದು ನಾಮಕರಣ ಪಡೆದಿತ್ತು.

ಆಂಗ್ರೇಜಿ ಶ್ರೀನಿವಾಸಯ್ಯಂಗಾರ್ಯರ ತಮ್ಮ ಶೇಷಯ್ಯಂಗಾರ್ಯರ ಬೆಂಗಳೂರು ಬಳೇಪೇಟೆಯಲ್ಲಿ ನೆಲೆಸಿದರು. ಅಲ್ಲಿ ಒಂದು ಚಿಕ್ಕಮಂಟಪ ಕಟ್ಟಿ ಬ್ಯಾಟರಾಯಸ್ವಾಮಿ ದೇವರನ್ನಿಟ್ಟು ಪ್ರತಿ ಶನಿವಾರ ಭಾರಿ ಭಜನೆಕೂಟವನ್ನು ಸೇರಿಸುತ್ತಿದ್ದರಂತೆ."ಶನಿವಾರಂ ಶೇಷಯ್ಯ" ಎಂದೇ ಅವರು ಬಂಧುವರ್ಗದಲ್ಲಿ ಪ್ರಸಿದ್ಧರಾದರು. ಅವರಿಗೆ ಮೂವರು ಗಂಡುಮಕ್ಕಳು : ರಂಗಸ್ವಾಮಿಐಯ್ಯಂಗಾರ್ಯರು, ಗೋಪಾಲಾಚಾರ್ರು, ಶೇಷಾಚಾರ್ರು. ಶ್ರೀ ಗೋಪಾಲಾಚಾರ್ರು ಉತ್ತರಭಾರತದ ತೀರ್ಥಕ್ಷೇತ್ರಗಳಲ್ಲೆಲ್ಲ ವಿಶೇಷವಾಗಿ ಪ್ರವಾಸ ಮಾಡುತ್ತಾ ಸಂಪಾದಿಸಿದ ಹಣವನ್ನು ತಮ್ಮ ತಂದೆಯ ಬ್ಯಾಟರಾಯಸ್ವಾಮಿ ಮಂಟಪ ವನ್ನು ದೊಡ್ಡದಾಗಿ ಕಟ್ಟಿಸಲು ವಿನಿಯೋಗಿಸಿ 'ಶ್ರೀನಿವಾಸ ಮಂದಿರಂ 'ಎಂದು ಹೆಸರಿಟ್ಟರು. ಇಂದಿಗೂ ಈಸಂಸ್ಥೆ ಬೆಂಗಳೂರಿನಲ್ಲಿ ಪ್ರಸಿದ್ಧವಾಗಿ ನಿಂತಿದೆ. ಶ್ರೀರಾಮಾನುಜರ ವಿಗ್ರಹ ಪ್ರತಿಷ್ಠೆಮಾಡಿ ಶ್ರೀರಂಗದಿಂದ ಸ್ವಾಮಿಗಳನ್ನುಕರೆಯಿಸಿ ದೊಡ್ಡಉತ್ಸವ ನಡೆಸಿದರಂತೆ ಶ್ರೀ ಗೋಪಾಲಾಚಾರ್ರು. ಜೊತೆಗೆ ಅನಾಥಾಲಯವೊಂದನ್ನು ಅಲ್ಲೇ ಸ್ಥಾಪಿಸಿ ಬಡ ಹುಡುಗರಿಗೆ ವಿದ್ಯಾಭ್ಯಾಸ ಮಾಡಲು ಅನುಕೂಲ ಮಾಡಿಕೊಟ್ಟಿದ್ದರು. ಅವರ ಹೆಂಡತಿ ಶ್ರೀಮತಿ ಶಿಂಗಮ್ಮ ಆಕಾಲಕ್ಕೇ(ಅರವತ್ತು ವರ್ಷಗಳ ಹಿಂದೆ)ಮಹಿಳಾಸಮಾಜವೊಂದನ್ನು ಮಾಡಿ ಸಂಗೀತ, ಉಪನ್ಯಾಸಗಳು ಎಲ್ಲಾ ನಡೆಸುತ್ತಿದ್ದರು. ಹೆಣ್ಣುಮಕ್ಕಳನ್ನು ಸಾಕಿ ಒಳ್ಳೇ ಕಡೆಗೆ ಮದುವೆ ಮಾಡಿಕೊಡುತ್ತಿದ್ದರು. ಅವರಿಗೆ ಮಕ್ಕಳಿರಲಿಲ್ಲ.

ಗೋಪಾಲಾಚಾರ್ಯರ ಅಣ್ಣ ರಂಗಸ್ವಾಮಯ್ಯಂಗಾರ್ಯರಿಗೆ ಮೂವರು ಮಕ್ಕಳು. ಮೊದಲನೆಯವರೇ ನಾಟಕ ಶಿರೋಮಣಿ ವರದಾಚಾರ್ಯರು. ಎರಡನೆಯವರು ಕೃಷ್ಣಸ್ವಾಮಯ್ಯಂಗಾರ್ಯರು, ಮೂರನೆಯವರು ಶ್ರೀಮತಿ ತಾಯಮ್ಮ. ಶ್ರೀ ಕೃಷ್ಣಸ್ವಾಮಯ್ಯಂಗಾರ್ಯರ ಮಗಳು ಶ್ರೀಮತಿ ರಾಜಮ್ಮ– (ಶ್ರೀ ಯಾಮುನಾಚಾರ್ಯರ ಧರ್ಮ ಪತ್ನಿಯಾದವಳು.)

ಶ್ರೀಮತಿ ತಾಯಮ್ಮನವರ ಯಜಮಾನರು ಶ್ರೀ ಲಕ್ಷ್ಮಣಾಚಾರ್ಯರು. ಶ್ರೀ ಗೋವಿಂದಾಚಾರ್ಯರ ಅಣ್ಣನ ಮೈದುನ. ಅವರಿಬ್ಬರಿಗೂ ಬಾಲ್ಯದಿಂದಲೂ ತುಂಬ ಸ್ನೇಹ, ಸಲುಗೆ. ಲಕ್ಷ್ಮಣಾಚಾರ್ಯರು ಪೋಲೀಸ್ ಇನ್ಸ್‌ಪೆಕ್ಟರಾಗಿದ್ದರು. ಬೆಂಗಳೂರಿನಲ್ಲೇ ವಾಸ. ಚಿಕ್ಕಂದಿನಲ್ಲೇ ತಂದೆಯನ್ನು ಕಳೆದುಕೊಂಡಿದ್ದರಿಂದ ಲಕ್ಷ್ಮಣಾಚಾರ್ಯ ತಾಯಮ್ಮ ಇವರೇ ನಮ್ಮನ್ನು ನೋಡಿಕೊಳ್ಳುತ್ತಿದ್ದರು. ಹದಿನಾಲ್ಕು ವರ್ಷಕ್ಕೇ, ಮದುವೆ ಯೋಚನೆ ಮಾಡಿದರು. ಎಲ್ಲೂ ವರ ಸರಿ ಹೋಗಲಿಲ್ಲ. ಶ್ರೀ ಗೋವಿಂದಾಚಾರ್ಯರ ಮೊಮ್ಮಗನಿಗೇ

ಮಾಡಿಕೊಳ್ಳಬೇಕೆಂದು ಕೇಳಿದರು. ಆಗ ಶ್ರೀ ಯಾಮುನಾಚಾರ್ಯರಿಗೆ ಹದಿನಾರು ವರ್ಷ. ಪ್ರೌಢಶಾಲೆಯಲ್ಲಿ ಓದುತ್ತಿದ್ದರು. “ತುಂಬಾ ಚಿಕ್ಕ ಹುಡುಗ; ಮುಂಜಿ ಸಹ ಆಗಿಲ್ಲ, ಈಗಬೇಡ” ಎಂದರಂತೆ ಗೋವಿಂದಾಚಾರ್ರು. ಆಗಿನ ಜನರ ಮನಸ್ಸು ಎಷ್ಟು ಸುಲಭ ವಾಗಿ ಬದಲಾಯಿಸುತ್ತಿದ್ದೆಂಬುದಕ್ಕೆ ಮುಂದೆ ಆದುದು ನಿದರ್ಶನ: ಗೋವಿಂದಾಚಾರ್ಯ ರಿಗೆ ಬಾದಾಮಿ ಹಲ್ವ ತುಂಬ ಪ್ರೀತಿಯಂತೆ. ಪೋಲೀಸ್ ಇನ್ಸ್‌ಪೆಕ್ಟರ್ ಲಕ್ಷ್ಮಣಾ ಚಾರ್ರು ಸೊಗಸಾದ ಹಲ್ವ ದಿನವೂ ತಂದು ಕೊಡುತ್ತಾ ಮಾತು ಮುಂದುವರಿಸಿದರು. ಒಂದು ದಿನ ಬಾವಿಯ ಬಳಿ ಇಬ್ಬರೂ ಸೇರಿದ್ದರು. ಗೋವಿಂದಾಚಾರ್ಯರು ತಮ್ಮ ರತ್ನದ ಉಂಗುರವನ್ನು ಬಾವಿಯ ಕಟ್ಟೆಯ ಮೇಲೆ ತೆಗೆದಿಟ್ಟು ಕೈಕಾಲು ತೊಳೆದು ಕೊಳ್ಳುತ್ತಿದ್ದರು. ಕಾಗೆಯೊಂದು ಅದನ್ನು ಕಚ್ಚಿಕೊಂಡು ಹಾರಿತು. ನೋಡಿ ಗಾಬರಿ ಯಾದರು. ಮದುವೆ ವಿಷಯವನ್ನೇ ಮಾತನಾಡುತ್ತಿದ್ದುದರಿಂದ ಅದನ್ನೇ ಮುಂದು ವರೆಸಿ ಲಕ್ಷ್ಮಣಾಚಾರ್ಯರಿಗೆ “ಆ ಉಂಗುರ ಸಿಕ್ಕಿಬಿಟ್ಟರೆ ನಿನ್ನ ಸೋದರ ಸೊಸೆಯನ್ನು ನನ್ನ ಮೊಮ್ಮಗನಿಗೆ ತಂದುಕೊಳ್ಳುತ್ತೇನೆ, ನೋಡಪ್ಪ” ಎಂದರಂತೆ. ಕಾಗೆ ಉಂಗುರ ವನ್ನು ಕೆಳಗೆ ಹಾಕಿಬಿಟ್ಟಿತಂತೆ. “ಕೂಡಲೇ ಹೆಣ್ಣನ್ನು ಕರೆದು ಕೊಂಡು ಬಾ, ನೋಡೋಣ” ಎಂದರು. ನಾವು ಬೆಂಗಳೂರಿನಲ್ಲೇ ಇದ್ದೆವು. ನನ್ನನ್ನೂ ಕರೆದು ಕೊಂಡು ಬಂದು ಗೋವಿಂದಾಚಾರ್ಯರ ಮನೆಯವರಿಗೆಲ್ಲ ತೋರಿಸಿದರು. ಮಾಣಿಕ್ಯಮ್ಮ (ನಮ್ಮ ಅತ್ತೆ) “ಹುಡುಗಿ ಕಣ್ಣು ಮೂಗು ನೇರವಾಗಿದ್ದಾಳೆ, ಆದರೆ ಸ್ವಲ್ಪ ಕಪ್ಪು” ಎಂದರಂತೆ.

ಆದರೆ ಮದುವೆಯಂತೂ ನಿಶ್ಚಿತವಾಗಿಬಿಟ್ಟಿತು. ಮೊದಲು ಯಾಮುನಾಚಾರ್ಯರ ಮುಂಜಿ ಏರ್ಪಾಟಾಯಿತು. ಅಜ್ಜಿ ವೇದನಾಯಕಮ್ಮನಿಗೆ ಎಲ್ಲಿಲ್ಲದ ಸಂಭ್ರಮ, ಸಡಗರ. ಅವರ ಆನಂದಕ್ಕೆ ಪಾರವೇ ಇಲ್ಲ. ಒಂದು ತಿಂಗಳ ಮುಂಚೆಯೇ ಸೇಲಮ್ಮಿನಿಂದ ಅವರ ಬಂಧುಗಳನ್ನೆಲ್ಲಾ ಕರೆಸಿ ಹಪ್ಪಳ ಸಂಡಿಗೆ ಸರಂಜಾಮು ಮಾಡಲು ಪ್ರಾರಂಭಿಸಿದರು. ನಾಟಕದ ಶ್ರೀ ವರದಾಚಾರ್ಯ ಅವರಿಗೆ ತಮ್ಮನ ಮಗಳಾದ ನನ್ನ ಮೇಲೆ ಅಪಾರ ಪ್ರೀತಿ. ಆಗ ಅವರ ಕ್ಯಾಂಪು ಮಂಗಳೂರಿನಲ್ಲಿತ್ತು. ಮದುವೆಗೆ ಬಂದೇ ಬರಬೇಕೆಂದು ನಾನೇ ಕಾಗದ ಬರೆದೆ. ಕಂಪನಿಯನ್ನೇ ಹೊರಡಿಸಿಕೊಂಡು ಮೈಸೂರಿಗೆ ಬಂದುಬಿಟ್ಟರು. 1913 ರ ಫೆಬ್ರವರಿ 19 ನೇ ತಾರೀಖು ಬೆಳಿಗ್ಗೆ 10 ಘಂಟೆ ಮದುವೆಯ ಲಗ್ನ ನಿಶ್ಚಯ ವಾಯಿತು. ಮುಂಜಿಗೆ ಬಂದಿದ್ದ ಓಲಗ–ಬ್ಯಾಂಡಿನವರನ್ನೇ ಮದುವೆಗೂ ಗೊತ್ತು ಮಾಡಿದ್ದರು. ವರದಾಚಾರ್ಯರ ಕಂಪನಿ ಬ್ಯಾಂಡಿನವರು ತಾವೇ ಬಾರಿಸಬೇಕೆಂದರು. “ಇಬ್ಬರೂ ಬಾರಿಸಿ” ಎಂದರಂತೆ ನಾಟಕಶಿರೋಮಣಿಗಳು. ಇದಲ್ಲದೆ ನಾಲ್ಕು ದಿನ ಮದುವೆ ದಿನಗಳಲ್ಲೂ ನಾಲ್ಕು ಭಾರಿ ಸಂಗೀತ ಕಛೇರಿಗಳು ಏರ್ಪಟ್ಟಿವೆ.

ಶ್ರೀ ವೀಣೆ ಶೇಷಣ್ಣನವರ ಕಛೇರಿ ಮದುವೆ ದಿನ ನಡೆಯಿತು. ಎರಡನೇ ದಿನ ಶ್ರೀ ಬಿಡಾರಂ ಕೃಷ್ಣಪ್ಪನವರ ಸಂಗೀತಕಛೇರಿ. ರಾತ್ರಿ ಹಸ್ಯೊಂದಾದರೂ ನಡೆದೇ ಇತ್ತು. ಶ್ರೀ ಗೋವಿಂದಾಚಾರ್ರು “ಮಕ್ಕಳಿಗೆ ಎಷ್ಟು ಹೊತ್ತು ನಿದ್ದೆ ಕೆಡಿಸುವಿರಿ!” ಎಂದು ಸಿಟು

ಗೊಂಡು ಮೊಮ್ಮಗನನ್ನು ಎಬ್ಬಿಸಿಕೊಂಡು ಹೋಗಲು ಪ್ರಯತ್ನಿಸಿದರು. ಶ್ರೀ ಎ. ವಿ. ವರದಾಚಾರ್ಯರಿಗೆ ತುಂಬ ಕೋಪ ಬಂದುಬಿಟ್ಟಿತು. ಅವರಿಗೆ ಕೋಪ ಬರುತ್ತಿದ್ದುದೇ ಅಪರೂಪ. ಶ್ರೀ ಲಕ್ಷ್ಮಣಾಚಾರ್ರು ಇಬ್ಬರಿಗೂ ಸಮಾಧಾನಮಾಡಿ ಶ್ರೀ ಗೋವಿಂದಾ ಚಾರ್ಯರಿಗೆ "ಇನ್ನು ಎರಡು ದಿನದನಂತರ ಈ ಸಂತೋಷ ಬರುತ್ತದೆಯೇ ?" ಎಂದು ಹೇಳಿದರು. ಮೂರನೆಯ ದಿನ ಶ್ರೀ ವಾಸುದೇವಾಚಾರ್ಯರ ಸಂಗೀತಕ್ಕೆ ಗೋವಿಂದಾ ಚಾರ್ಯರೇ ಬಂದು ಕುಳಿತು ಕೇಳಿದರು. ನಾಲ್ಕನೇ ದಿನ ಮೆರವಣಿಗೆ ಎ. ವಿ. ವರದಾ ಚಾರ್ಯರದೇ ಎಲ್ಲ ಏರ್ಪಾಟು. ಅದ್ದೂರಿಯಿಂದ ನಡೆಸಿದರು. ಕೋಚ್‌ಗಾಡಿ, ಗ್ಯಾಸ್ ಲೈಟು, ಎರಡೆರಡು ಬ್ಯಾಂಡ್ ಸೆಟ್ಟುಗಳು ಬಂದವು. ಯಾಮುನಾಚಾರ್ಯರಿಗೆ ವಿಪರೀತ ನಾಚಿಕೆ. ಹೆಣ್ಣು ಸ್ವಲ್ಪ ಉದ್ದವಾಗಿ ಕಾಣಿಸುತ್ತಾಳೆ ಎಂದು ವರದಾಚಾರ್ರು ಗಂಡನ್ನು ಎರಡು ದಿಂಬಿನ ಮೇಲೆ ಕೂರಿಸಿದರು. ಮೆರವಣಿಗೆ ದೊಡ್ಡಪೇಟೆ, ಚಾಮರಾಜ ರಸ್ತೆ ಸುತ್ತಿಬಂತು.

ಶ್ರೀ ಯಾಮುನಾಚಾರ್ರು ಆಗ ಇನ್ನೂ ಹೈಸ್ಕೂಲಿನಲ್ಲಿ ಓದುತ್ತಿದ್ದರು. ಆಗಿನ ಕಾಲದ ಮನೆಯಲ್ಲಿ ಎಲ್ಲರೂ ತುಂಬಿಯೇ ಇರುತ್ತಿದ್ದೆವು. ಹೆಂಡತಿ ಮುಂದೆ ಬರಲೂ ಅವರಿಗೆ ವಿಪರೀತ ನಾಚಿಕೆ. ಮಹಡಿಯಿಂದ ಇಳಿದು ಹೋಗುವ ಮೆಟ್ಟಲು ಹಾಲಿನಲ್ಲೇ ಇತ್ತು. ಎಷ್ಟೋ ಸಲ ನಾಚಿಕೊಂಡು ಒಂದು ಏಣಿ ಹಾಕಿಕೊಂಡು ಹಿತ್ತಲಿಗೆ ಇಳಿದು ಹೊರಟು ಹೋಗುತ್ತಿದ್ದರು. ಸಾಲದ್ದಕ್ಕೆ ಆ ವರ್ಷ ಪರೀಕ್ಷೆ ಸರಿಯಾಗಿ ಮಾಡಲಿಲ್ಲ. ಹೆಡ್ ಮಾಸ್ಟರ್ ವೆಂಕಟಕೃಷ್ಣಯ್ಯನವರು (ತಾತಯ್ಯ) ಪ್ರಮೋಷನ್ ಕೊಟ್ಟುಬಿಟ್ಟರು. ಆಗಿ ನಿಂದ ತುಂಬಾ ಕಷ್ಟಪಟ್ಟು ಓದಲು ಪ್ರಾರಂಭಿಸಿದರು. ಆ ವೇಳೆಗೆ ನನಗೆ ತುಂಬಾ ಖಾಯಿಲೆ ಯಾಯಿತು. ನ್ಯೂಮೋನಿಯಾ ಆಗಿ ಮೂರು ವರ್ಷಗಳೇ ಹಾಸಿಗೆ ಹಿಡಿದೆ. ಎಲ್ಲರೂ "ಇವಳಿಗೆ ವಾಸಿಯಾಗುವುದಿಲ್ಲ, ಹೋಗಿಬಿಡುತ್ತಾಳೆ" ಎಂದುಕೊಂಡಿದ್ದರು. ಆಗ ಶ್ರೀ ಲಕ್ಷ್ಮಣಾಚಾರ್ರು ನಾನು ಮಾಡಿದ ಕೆಲಸ ಹೀಗಾಯಿತಲ್ಲಾ ಎಂದುಕೊಂಡು ಅವರ ಅಣ್ಣ ರಾಮಸ್ವಾಮಯ್ಯಂಗಾರ್ಯರ ಮಗಳನ್ನು ಇವರಿಗೆ ಕೊಟ್ಟು ಮದುವೆ ಮಾಡಿಸಲು ಪ್ರಯತ್ನ ಮಾಡಿದರು. ಯಾಮುನಾಚಾರ್ರು ತಾತ, ಅಜ್ಜಿ, ತಂದೆ, ತಾಯಿ ಎಲ್ಲರೂ ನೋಡಿ ಮನೆಗೆ ಬಂದರು. ಇವರೆ ಯಾಮುನಾಚಾರ್ರು "ನೀವು ಮದುವೆಗೆ ಖರ್ಚು ಮಾಡುವ ಹಣ ನನ್ನ ಕೈಲಿ ಕೊಡಿ. ನನ್ನ ಹೆಂಡತಿ ಉಳಿಯಬೇಕೆಂದು ಸಂಕಲ್ಪವಿದ್ದರೆ ಹುಡುಗೀನ ಅವಳಿಗೆ ಔಷಧಿ ಕೊಡಿಸಿ ವಾಸಿಮಾಡುತ್ತೇನೆ, ಇಲ್ಲವಾದರೆ ಬೇಡ" ಎಂದ ರಂತೆ. ಆಗಿನಿಂದ ಹೆಂಡತಿ ಸಂಗಡ ಮಾತಾಡಲು ಪ್ರಾರಂಭಿಸಿದರು. ದೇವರ ದಯೆ ಯಿಂದ ನನಗೆ ವಾಸಿಯಾಯಿತು.

ಶ್ರೀ ಗೋವಿಂದಾಚಾರ್ಯರು ಅವಧಿಗೆ ಮುಂಚೆಯೇ ಕೆಲಸದಿಂದ ರಿಟೈರಾಗಲು ಕೇಳಿ ಪಡೆದು ಮೈಸೂರಿನಲ್ಲಿ ನೆಲಸಿದರು. ವೇದಾಂತತತ್ವಶಾಸ್ತ್ರಗಳನ್ನೋದಲು ಅವರಿಗೆ ತುಂಬ ಆಸೆ. ಮೇಲುಕೋಟೆಯಿಂದ ಸ್ವಾಮಿಗಳನ್ನು ಕರೆಯಿಸಿ 'ತಮಿಳು ವೇದ' ಎಂದು ಹೆಸರಾದ ತಿರುವಾಯ್‌ಮೊಳಿ ಎಂಬ ನಾಲ್ಕು ಸಾವಿರ ಶ್ಲೋಕಗಳ ಪ್ರಬಂಧವನ್ನು ಮನೆ

ಯಲ್ಲಿ ಓದಿಸಿ, ಶ್ರೀ ವೈಷ್ಣವ ಮತದ ಆಳವಾದ ವ್ಯಾಸಂಗ ನಡೆಸಿದರು. ಅವರ ಅಕ್ಕ ಕೃಷ್ಣಮ್ಮ ಬಾಲ್ಯದಲ್ಲೇ ವಿಧವೆಯಾಗಿದ್ದು ವೇದಾಂತವಿಚಾರಗಳನ್ನೆಲ್ಲ ತಿಳಿದುಕೊಂಡು ಹೇಳುತ್ತಿದ್ದರು. ಅವರು ಮೇಲುಕೋಟೆಯಲ್ಲಿ ನಮ್‌ಜೀಯರ್ ಸನ್ನಿಧಿ ಕಟ್ಟಿಸಿ ನಮ್ ಜೀಯರ್ ಪ್ರತಿಮೆ ಪ್ರತಿಷ್ಠೆಮಾಡಿಸಿ ಅದಕ್ಕೆ 16ಎಕರೆ ಭೂಮಿ ದಾನಮಾಡಿ ದಿನವೂ ಅನ್ನದಾನಕ್ಕೆ ಏರ್ಪಾಟುಮಾಡಿದ್ದರು. ವೈರಮುಡಿ ಉತ್ಸವ ಕಾಲದಲ್ಲಿ ಒಂದು ದಿನ ಚೆಲುವರಾಯಸ್ವಾಮಿ ಇಲ್ಲಿ ಬಿಜಮಾಡುತ್ತಾರೆ. ಇನ್ನೊಬ್ಬ ಅಕ್ಕನವರೂ ವೇದಾಂತಿ. ಪಶ್ಚಿಮವಾಹಿನಿಯಲ್ಲಿ ಒಂದು ಮಂಟಪ ಕಟ್ಟಿಸಿ ತುಲಾಮಾಸದಲ್ಲಿ ದೇವರಿಗೆ ಪೂಜೆ ಬ್ರಾಹ್ಮಣ ಸಂತರ್ಪಣೆ ಮಾಡಿಸುತ್ತಿದ್ದರು. ಈ ವಾತಾವರಣವೇ ಗೋವಿಂದಾಚಾರ್ಯರ ಮನೇಲಿ ಹಬ್ಬಿತ್ತು. ಗೋವಿಂದಾಚಾರ್ಯರು ತಿರುವಾಯ್‌ಮುಳಿ ಅಲ್ಲದೆ ಶ್ರೀ ರಾಮಾ ನುಜರ ವಿಚಾರಗಳನ್ನೆಲ್ಲ ಅಧ್ಯಯನಮಾಡಿ ಇಂಗ್ಲೀಷಿನಲ್ಲಿ "ಲೈಫ್ ಆಫ್ ರಾಮಾನುಜ" ಎಂಬ ಪುಸ್ತಕ ಬರೆದರು. ಹಾಗೆಯೇ ತಮ್ಮ ಮೊಮ್ಮಗನನ್ನೂ ಓದಿಸಬೇಕೆಂದು ಅವರ ವಿದ್ಯಾಭ್ಯಾಸಕ್ಕೆ ವಿಶೇಷ ಆಸಕ್ತಿ ವಹಿಸಿದರು. ದಿನವೂ ಬೆಳಿಗ್ಗೆ 9 ರಿಂದ 11 ರವರೆಗೆ ತಿರುವಾಯ್‌ಮುಳಿಯನ್ನು ಅವರ ಹತ್ತಿರ ಓದಿಸಿ ಅರ್ಥಹೇಳುತ್ತಿದ್ದರು.ಆ ಸಮಯಕ್ಕೆ ಮೊಮ್ಮಕ್ಕಳು ಕಾಂತಿಮತಿ, ರಾಮಪ್ರಿಯನ್ ಮತ್ತು ನಾನೂ ಸೇರಿ ಕೇಳುತ್ತಿದ್ದೆವು.

ಶ್ರೀ ಯಾಮುನಾಚಾರ್ಯರಿಗೆ ಇಂಟರ್‌ಮೀಡಿಯಟ್ ಪರೀಕ್ಷೆ ಪಾಸಾಯಿತು. ಮುಂದಕ್ಕೆ ಯಾವ ವಿಷಯ ತೆಗೆದುಕೊಳ್ಳಬೇಕೆಂದು ಮನೆಯಲ್ಲಿ ಚರ್ಚೆ. ತಾತನವರು ವೇದಾಂತವನ್ನೇ ತೆಗೆದುಕೊಳ್ಳುವಂತೆ ಹೇಳಿದರು. ಇವರಿಗೂ ಅದೇ ಇಷ್ಟ. ಇವರ ತಂದೆಯವರಿಗೆ ಇಷ್ಟವಿಲ್ಲ. " ತತ್ವಶಾಸ್ತ್ರ ಏನೂ ಪ್ರಯೋಜನವಿಲ್ಲ, ಶುಷ್ಕ ವೇದಾಂತ, ಯಾರು ಕೇಳುತ್ತಾರೆ– ಆದ್ದರಿಂದ ಮುಂದೆ ಬರಲಾಗುವುದಿಲ್ಲ " ಎಂದು ಅಭಿಪ್ರಾಯ ಪಟ್ಟರು. ಆದರೆ ತಾತನ ಮಾತಿಗೆ ಹೆಚ್ಚು ಪ್ರಾಶಸ್ತ್ಯ ಇತ್ತು ಶ್ರೀ ಯಾಮುನಾ ಚಾರ್ಯರು ತತ್ವಶಾಸ್ತ್ರದಲ್ಲೇ ಎಂ.ಎ. ಪಾಸ್ ಮಾಡಿದರು.

ಕೆಲಸಕ್ಕೆ ಅರ್ಜಿ ಹಾಕಿದಾಗ ಪೋಲೀಸ್, ರೆವಿನ್ಯೂ ಮತ್ತು ವಿದ್ಯಾಭ್ಯಾಸ ಇಲಾಖೆಗಳು ಮೂರು ಕಡೆಯಿಂದ ಇಂಟರ್‌ವ್ಯೂಗೆ ಕರೆದರು. ಅವರ ತಂದೆ ಪೋಲೀಸ್ ಇಲಾಖೆಗೇ ಹೋಗು ಎಂದು ಬಲವಂತ ಮಾಡಿದರು ಸರಿ ಎಂದು ಹೋಗಿ ಅಲ್ಲಿ ಐದಾರು ಜನರ ಸಂಗಡ ಕುಳಿತುಕೊಂಡರು. ಒಬ್ಬೊಬ್ಬರಾಗಿ ಇಂಟರ್‌ವ್ಯೂಗೆ ಬರಲು ಹೆಸರು ಕೂಗಿ ಕರೆಯುತ್ತಿದ್ದರು. ತಮ್ಮ ಮಗ್ಗಲಿನವರು ಎದ್ದು ಹೋದ ಕೂಡಲೇ ಶ್ರೀ ಯಾಮುನಾಚಾರ್ಯರು ಸುತ್ತಲೂ ನೋಡಿ ಸದ್ದಿಲ್ಲದೆ ಎದ್ದು ಹೊರಗೆ ಬಂದು ಬಿಟ್ಟ ರಂತೆ. ರೆವೆನ್ಯೂ ಇಲಾಖೆಯಲ್ಲಿ ಅಲ್ಲಿನ ಅಧಿಕಾರಿಗಳೇ " ನೀನು ವೇದಾಂತ ಓದಿ ಈ ಕೆಲಸಕ್ಕೆ ಬರಬೇಡ " ಎಂದರಂತೆ. ಇವರಿಗೂ ಇಷ್ಟವಿರಲಿಲ್ಲ. ನಂತರ ವಿದ್ಯಾಭ್ಯಾಸದ ಇಲಾಖೆಗೆ ಸೇರಿದರು. ತುಮಕೂರಿನ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿ ಹೋಗಲು ಅಪ್ಪಣೆಬಂತು.

ಶ್ರೀ ಗೋವಿಂದಾಚಾರ್ಯರು ಕಾಫಿ ಪ್ರಿಯರು. ಅದಕ್ಕೆ 'ಸರಸ್ವತಿ ' ಎನ್ನುತ್ತಿದ್ದರು.

ಬೆಳಿಗ್ಗೆ ಮೊದಲು ಅವರ ಉಪಾಸನೆ, ನಂತರಸ್ನಾನ ದೇವರ ಪೂಜೆ, ವೇದಾಂತ ವಿಚಾರ ಕಾಲಕ್ಷೇಪ. ಊಟ ಸಿದ್ಧವಾದೊಡನೆ ಗಂಟೆ ಬಾರಿಸುತ್ತಿದ್ದರು. ದಿನವೂ ಹಿಂದೂ ಪೇಪರನ್ನು ಶ್ರೀ ಯಾಮುನಾಚಾರ್ಯರ ಕೈಲಿ ಓದಿಸಿ ತಾವು ಕೇಳುತ್ತಿದ್ದರು. ಒಂದು ದಿನ ತಂದೆ ನಾರಾಯಣಯ್ಯಂಗಾರ್ಯರು "ಮಗೂನ ಓದಿಸಿ ಓದಿಸಿ ಏನು ಗೋಳು ಹೊಯ್ದು ಕೊಳ್ಳುತ್ತೀರಿ" ಎಂದರಂತೆ. ಆ ಮಾರನೇದಿನ ಪತ್ರಿಕೆ ಓದಲು ಮೊಮ್ಮಗನನ್ನು ಕರೆಯ ಲಿಲ್ಲ. ಶ್ರೀ ಯಾಮುನಾಚಾರ್ಯರಿಗೆ ತುಂಬ ವ್ಯಥೆಯಾಯಿತು. ತಾತನ ಬಳಿ ಹೋಗಿ "ಏಕೆ ನನ್ನನ್ನು ಪತ್ರಿಕೆ ಓದಲು ಕರೆಯಲಿಲ್ಲ?" ಎಂದು ಕೇಳಿದರಂತೆ. "ಬೇಡಪ್ಪಾ, ನಿನ್ನ ತಂದೆಗೆ ಇಷ್ಟವಿಲ್ಲ" ಎಂದು ಉತ್ತರ ಬಂತು. ತಾತನಿಗೆ ನಮಸ್ಕಾರ ಮಾಡಿ "ನಾನು ಓದುತ್ತೇನೆ" ಎಂದು ಪ್ರಾರಂಭಿಸಿದರಂತೆ. ಈ ಅಭ್ಯಾಸ ಅವರಿಗೆ ಅಮೂಲ್ಯ ವಾಯಿತು ಎಂದು ಹೇಳುತ್ತಿದ್ದರು. ದೈವಾಧೀನರಾದ ದಿನ ಶ್ರೀ ಯಾಮುನಾ ಚಾರ್ಯರು ತಮ್ಮ ಮೊಮ್ಮಗಳು ಮೈತ್ರೇಯಿಯನ್ನು ಹತ್ತಿರ ಕುಳ್ಳಿರಿಸಿಕೊಂಡು ಪೇಪರ್ ಓದಿಸಿ ಕೇಳುತ್ತಿದ್ದರು. ಆ ಸಮಯಕ್ಕೆ ತಾತನ ನೆನಪು ಬಂದು ಕಣ್ಣಿನಲ್ಲಿ ನೀರುಬಂತು. ಕೊನೆಯವರೆವಿಗೂ ಅವರ ಹೃದಯದಲ್ಲಿ ತಾತ ಗೋವಿಂದಾಚಾರ್ರು ನೆಲೆಸಿಬಿಟ್ಟಿದ್ದರು. ದೆಹಲಿ ಆಸ್ಪತ್ರೆಯಲ್ಲಿ ಜ್ಞಾನತಪ್ಪಿ ಮಲಗಿದ್ದಾಗ (1968 ರಲ್ಲಿ) ಶ್ರೀ ಗೋವಿಂದಾ ಚಾರ್ಯರೇ ಬಂದು, "ಯಾಮುನಾ ಓಂ ನಮೋ ನಾರಾಯಣಾಯ ಸೊಲ್ಲಿಡಾ" ಎಂದಂತಾಯಿತಂತೆ. ಆಗಲೇ ಅವರು ಹೇಳಲು ಪ್ರಾರಂಭಿಸಿ ಸ್ವಲ್ಪಸ್ವಲ್ಪವಾಗಿ ಚೇತರಿಸಿ ಕೊಂಡು ಎದ್ದರು.

ಗೋವಿಂದಾಚಾರ್ಯರ ಇನ್ನೊಂದು ವಿಷಯ ಶ್ರೀ ಯಾಮುನಾಚಾರ್ಯರಿಗೆ ತುಂಬ ಪ್ರಿಯವಾಗಿತ್ತು. ಶ್ರೀ ರಾಮಾನುಜರ ಉಪದೇಶವನ್ನು ಅವರು ಅನೇಕ 'ಅಸ್ಪೃಶ್ಯ' ರೆನಿಸಿಕೊಂಡ ಹಿಂದುಳಿದ ಜನಾಂಗದವರಿಗೆ ಹೇಳಿ ಅವರನ್ನೆಲ್ಲಾ ಶ್ರೀ ವೈಷ್ಣವ ಮತಕ್ಕೆ ದೀಕ್ಷೆಕೊಟ್ಟು ಸೇರಿಸಿದರು. ಶ್ರೀ ಗೋವಿಂದಾಚಾರ್ ಸ್ವಾಮಿಗಳು ಎಂದು ಅವರೆಲ್ಲಾ ಇವರನ್ನು ಗೌರವಿಸುತ್ತಿದ್ದರು. ಆ ಕಾಲಕ್ಕೆ ಹರಿಜನರ ಉದ್ಧಾರಕಾರ್ಯ ಮಾಡುತ್ತಿದ್ದ ಯುವಕ ತಗಡೂರು ರಾಮಚಂದ್ರರಾಯರು ಎಷ್ಟೋ ವೇಳೆ ಶ್ರೀ ಗೋವಿಂದಾಚಾರ್ ಸ್ವಾಮಿಗಳ ಸಹಕಾರ ಪಡೆಯುತ್ತಿದ್ದರಂತೆ. ಶ್ರೀ ಯಾಮುನಾಚಾರ್ಯರೂ ವಿಶೇಷವಾಗಿ ಈ ಕೆಲಸಕ್ಕೆ ತಾತನೊಡನೆ ಸಹಕರಿಸುತ್ತಿದ್ದರು.

"ಶ್ರೀ ಗೋವಿಂದಾಚಾರ್ಯರು ಹರಿಜನರಿಗೆ ಮುದ್ರಾಧಾರಣೆ ಮಾಡುತ್ತಾರೆ. ಆದ್ದರಿಂದ ಅವರು ಹೊಲೆಯರ ಗುರುಗಳು; ಅವರ ಮೊಮ್ಮಗನಿಗೆ ನಾವು ಮನೆ ಕೊಡು ವುದಿಲ್ಲ" ಎಂದು ಕೆಲವು ದೊಡ್ಡವರು ತುಮಕೂರಿನಲ್ಲಿ ಕೆಲಸಕ್ಕೆ ಸೇರಿ ಮನೆ ಹುಡುಕಲು ಹೋದ ಯಾಮುಚಾರ್ಯರಿಗೆ ಹೇಳಿದರಂತೆ. ಕೊನೆಗೆ ಸೂರ್ಯನಾರಾಯಣ ರಾಯರೆಂಬುವರು ಮನೆ ಕೊಟ್ಟರು. ಆಗಲೇ ಯಾಮುನಾಚಾರ್ಯರ ಸ್ವಂತ ಸಂಸಾರ ಜೀವನ ಪ್ರಾರಂಭವಾಗಿದ್ದು, ಕೆಲವು ದಿನ ಅವರ ತಾಯಿಯವರೇ ಅವರ ಹತ್ತಿರ ಇದ್ದರು. ಅಂಗಡಿ ವ್ಯಾಪಾರ ವ್ಯವಹಾರ ಎಲ್ಲ ಯಾಮುನಾಚಾರ್ಯರಿಗೆ ಏನೂ ತಿಳಿಯದು, ಅಂಗಡಿಯವನು ಹೇಗೆ ಕೊಟ್ಟರೆ ಹಾಗೆ ತಂದು ಬಿಡುತ್ತಿದ್ದರು. ಸಾಸುವೆ ಬೇಕೆಂದರೆ

25 ಸೇರು ಸಾಸುವೆ ಎಂದು ಬರೆಯುತ್ತಿದ್ದರಂತೆ. ಅಂಗಡಿಯವನೇ ಇಷ್ಟೇಕೆಂದು ಒಂದು ಸೇರು ಕೊಡುತ್ತಿದ್ದನಂತೆ. ಪಾತ್ರೆಪರಟೆಗಳನ್ನು ದುಬಾರಿ ಬೆಲೆ ಕೊಟ್ಟು ತಂದಿಟ್ಟರು.ಅವರ ತಾಯಿ ಮೈಸೂರಿಗೆ ಬಂದುಬಿಟ್ಟರು. ನಂತರ ಆರುತಿಂಗಳ ಗಂಡು ಮಗುವಿನೊಡನೆ ನಾನು ತುಮಕೂರಿಗೆ ಹೋದೆ. ನನಗೂ ಅಡಿಗೆಮಾಡಿ ತಿಳಿಯದು, ತಾಯಿಯ ಮನೆಯಲ್ಲಾಗಲೀ ಅತ್ತೆ ಮನೆಯಲ್ಲಾಗಲೀ ನನ್ನ ಕೈಲಿ ಅಡುಗೆ ಮಾಡಿಸುತ್ತಿರಲಿಲ್ಲ. ಎ.ವಿ.ವರದಾಚಾರ್ಯರ ಮನೇಲಿ ನಾಲ್ಕು ಅಡಿಗೆಯವರು, ಕಂಪನಿ ಹುಡುಗರಿಗೆಲ್ಲಾ ಮನೆಯಲ್ಲೇ ಊಟ. ಅತ್ತೆ ಮನೆಯಲ್ಲಿ ಬಹಳ ಮಡಿ. ಆದ್ದರಿಂದ ಒಳಗೆ ಮುಟ್ಟಿಸುತ್ತಿರಲಿಲ್ಲ. ತುಮಕೂರಿಗೆ ನನ್ನ ಸೋದರ ಮಾವ ಲಕ್ಷ್ಮಣಾಚಾರ್ಯರೇ ಜೊತೆಯಲ್ಲಿ ಬಂದು ಇದ್ದು ನನಗೆ ಅಡಿಗೆ ಹೇಳಿಕೊಟ್ಟರು.

ತುಮಕೂರಿನ ಹೈಸ್ಕೂಲು ಮುಖ್ಯೋಪಾಧ್ಯಾಯರಾಗಿದ್ದ ಮುಸಲ್ಮಾನ ಬಂಧುವೊಬ್ಬರು ಶ್ರೀ ಯಾಮುನಾಚಾರ್ಯರ ಪಾಂಡಿತ್ಯವನ್ನು ಮೆಚ್ಚಿಕೊಂಡಿದ್ದರು. ಮೈಸೂರು ಕಾಲೇಜಿಗೆ ಇವರು ಹೋಗುವಂತೆ ಬಲವಂತ ಮಾಡಿ ಅಪ್ಲಿಕೇಷನ್ ಹಾಕಿಸಿದರಂತೆ. ಮೈಸೂರು ಕಾಲೇಜಿಗೆ ಸೇರಿದ ನಂತರ ಬೆಂಗಳೂರು ಇಂಟರ್‌ಮಿಡಿಯಟ್ ಕಾಲೇಜಿಗೆ ವರ್ಗವಾಯಿತು. ಬೆಂಗಳೂರಿನಲ್ಲಿ ಹತ್ತುವರುಷಗಳು ಸಂಸಾರಮಾಡಿದೆವು. ಕಾಲೇಜಿಗೆ ಹೋಗುವಾಗ ಟೈಕಟ್ಟುವುದೂ, ಬೂಡ್ಸಿಗೆ ಲೇಸು ಕಟ್ಟುವುದೂ ಅವರಿಗೆ ಬರದು ನಾನೇ ಮಾಡುತ್ತಿದ್ದೆ. ತಲೆಯಲ್ಲಿ ವಿಪರೀತಕೂದಲು. ಜಾಚಿ ಗಂಟುಹಾಕಿ ಅದರಮೇಲೆ ಪೇಟ ಧರಿಸುತ್ತಿದ್ದರು. ಕಾಲೇಜಿನಿಂದ ಬಂದೊಡನೆ ಮನೆಯಲ್ಲಿ ನೀರು ಸೇದಿಹಾಕುವ ಕೆಲಸ ತರಕಾರಿ ಮತ್ತು ಸಾಮಾನುಗಳನ್ನು ಕೊಂಡುತರುವುದು, ಮನೆಯ ಕೆಲಸಗಳಲ್ಲಿ ನನಗೆ ಸಹಾಯಕ್ಕೆ ನಿಲ್ಲುತ್ತಿದ್ದರು. ಬೆಂಗಳೂರಿನಲ್ಲಿ ಅವರ ಕಾಲೇಜಿನ ಇತರ ಮೇಷ್ಟ್ರುಗಳೂ, ವಿದ್ಯಾರ್ಥಿಗಳೂ ದೊಡ್ಡದೊಡ್ಡ ವಿದ್ವಾಂಸರೂ ಪರಿಚಯವಾದರು. ದಿನವೂ ಯಾರಾದರೊಬ್ಬ ಅತಿಥಿಗಳು ಮನೆಗೆ ಬರುತ್ತಿದ್ದರು. ಮನೆಯಲ್ಲಿ ಮಕ್ಕಳೊಡನೆ ಆಡುವುದಕ್ಕೆ ಅವರಿಗೆ ಸಮಯವೇ ಇರುತ್ತಿರಲಿಲ್ಲ. ಅಲ್ಲಿಂದ ಮೈಸೂರಿಗೆ ತಿರುಗಿ ವರ್ಗವಾಯಿತು. ಆವೇಳೆಗೆ ನಮಗೆ ಐದು ಗಂಡು, ಮೂರು ಹೆಣ್ಣು ಮಕ್ಕಳಿದ್ದರು.

ಆಮೇಲೆ ಮೂರುವರುಷ ಹಾಸನದ ಇಂಟರ್‌ಮಿಡಿಯಟ್ ಕಾಲೇಜಿನ ಸೂಪರಿಂಟೆಂಡೆಂಟರಾಗಿ ಕೆಲಸ ಮಾಡಿದರು. ಆಗ ಅಲ್ಲಿ ಇವರ ಷಡ್ಡಕರಾದ ಶ್ರೀ ಬಿ. ಆರ್. ಐಯ್ಯಂಗಾರ್ಯರು ಜಿಲ್ಲಾ ವಿದ್ಯಾಧಿಕಾರಿಗಳು ಮೈದುನ ಶ್ರೀ ಎ.ಕೆ.ರಾಮಸ್ವಾಮಿಯವರು ಎಕ್ಸಿಕ್ಯೂಟಿವ್ ಇಂಜಿನಿಯರು. ಎಲ್ಲರೂ ಒಂದೇ ಮನೆಯಲ್ಲಿ ವಾಸ. ಆಗ ಹಾಸನದಲ್ಲಿ ನಲ್ಲಿ ಇರಲಿಲ್ಲ. ಭಾವಿ ನೀರು ಸೇದಬೇಕು. ಸೂಪರಿಂಟೆಂಡೆಂಟರು ನೀರು ಸೇದುವುದು, ಇಂಜಿನಿಯರವರು ನೀರನ್ನು ಬಚ್ಚಲಮನೆಗೆ ತುಂಬುವುದು,ಎಲ್ಲರಿಗೂ ಉತ್ಸಾಹದಾಯಕವಾಗಿತ್ತು. ಮನೆ ಹೆಂಗಸರದೇ ಎಲ್ಲ ಅಡಿಗೆಮನೆ ಕೆಲಸ. ಎಲ್ಲರೂ ಊಟಕ್ಕೆ ಕುಳಿತು, ಬೇಕಾದಷ್ಟು ಚರ್ಚೆ ನಡೆಯುತ್ತಿತ್ತು.

ಈ ವೇಳೆಗೆ ನನ್ನ ಮಗಳು ಜಲಜನನ್ನು ನನ್ನ ಸೋದರ ಕಡೆಯ ರಮಾಕಾಂತ

ನಿಗೆ ಕೊಟ್ಟು ಮದುವೆಯಾಗಿತ್ತು. 1951ರಲ್ಲಿ ಮೈಸೂರಿನ ಮಹಾರಾಜಾ ಕಾಲೇಜಿಗೆ ಬಂದರು. ಶ್ರೀ ಯಾಮುನಾಚಾರ್ಯರು ಶಿಕ್ಷಕರಾಗಿಯೇ ಇದ್ದರು. ಈ ವರ್ಷ ಎರಡನೇ ಮಗ ಶ್ರೀ ಗೋವಿಂದ ಪ್ರಸಾದನ ಮುಂಜಿ, ಮಗಳು ಕುಮುದಳಿಗೆ ಮದುವೆ ನೆರವೇರಿತು. ಅಳಿಯ ಬೆಂಗಳೂರಿನ ರಾಮಸ್ವಾಮಯ್ಯಂಗಾರ್ಯರ ಮಗ ಸುಂದರರಾಜನ್, ಈಗ ಏರೋಪ್ಲೇನ್ ಫ್ಯಾಕ್ಟರಿಯಲ್ಲಿ ಕೆಲಸದಲ್ಲಿದ್ದಾರೆ. ದೊಡ್ಡ ಮಗ ಮುತ್ತುವಿಗೆ ಅದೇ ವರ್ಷ ಸೇಲಂನಲ್ಲಿ ಮದುವೆಯಾಯಿತು. ಅಜ್ಜಿ ವೇದನಾಯಕಮ್ಮನ ತಂಗಿಯ ಮೊಮ್ಮಗಳೇ ಕನ್ಯೆ, ವೈದೇಹಿ.

1954ರಲ್ಲಿ ಮಹಾರಾಜಾ ಕಾಲೇಜು ಹಾಸ್ಟಲಿನ ವಾರ್ಡನರಾಗಿ ಶ್ರೀ ಯಾಮುನಾಚಾರ್ಯರು ಕೆಲಸ ವಹಿಸಿಕೊಂಡರು. ಅದೇ ಕಾಲಕ್ಕೆ ಮೈಸೂರಿನ ಮಹಾರಾಜರು ತಮ್ಮ ಹುಟ್ಟಿದ ಹಬ್ಬದ ಸಂದರ್ಭದಲ್ಲಿ ಇವರನ್ನು ಬರಮಾಡಿಕೊಂಡು ಶಾಲುಜೋಡಿ, ಪಂಚೆ, ಪೇಟಾ ಎಲ್ಲ ಕೊಟ್ಟು ಗೌರವಿಸಿದರು. 1956ರಲ್ಲಿ ಮೂರನೇ ಮಗಳ ಮದುವೆ ಮದರಾಸಿನ ವಕೀಲರು ಆರ್. ರಾಮಸ್ವಾಮಿಯವರೊಂದಿಗೆ ನೆರವೇರಿತು. ಮುಂದೆ ಮತ್ತೊಮ್ಮೆ ಮಹಾರಾಜರಿಂದ ರತ್ನಖಚಿತ ಗಂಡಭೇರುಂಡ ಉಂಗುರ ಮತ್ತು ವಸ್ತ್ರಗಳ ಉಡುಗೊರೆ ಬಂತು, ಆ ವರ್ಷವೇ ಅವರಿಗೆ ರಿಟೈರಾಯಿತು.

1958 ರಲ್ಲಿ ಶ್ರೀ ಯಾಮುನಾಚಾರ್ಯರ ಅರವತ್ತನೇ ವರ್ಷದ ಶಾಂತಿ ಮನೆಯಲ್ಲಿ ಸರಳವಾಗಿ ನಡೆಯಿತು. 1956 ರಿಂದಲೇ ಅವರು ಗಾಂಧೀ ಸ್ಮಾರಕ ನಿಧಿಯ ಗಾಂಧೀ ಗ್ರಂಥಮಾಲೆ ಮುಖ್ಯ ಸಂಪಾದಕರಾಗಿ ಕೆಲಸಮಾಡುತ್ತಿದ್ದರು. ಗಾಂಧೀ ವಿಚಾರ ಪರಿಷತ್ತಿನಲ್ಲಿ ಶ್ರೀ ಜೆ. ವಿ. ನಾರಾಯಣಮೂರ್ತಿ, ಕೆ. ಎಸ್. ನಾರಾಯಣಸ್ವಾಮಿ, ಬಿ. ಆರ್. ಪ್ರಾಣೇಶರಾವ್, ಪಟ್ಟಾಭಿ ಮುಂತಾದವರು ಸಮಾರಂಭ ಮಾಡಿ ಸನ್ಮಾನ ಮಾಡಿದರು. 1960 ರಲ್ಲಿ ಐದನೇ ಮಗಳು ವರದಳನ್ನು ಶ್ರೀ ಬಿ. ಎಸ್ ಕೇಶವನ್ ಅವರ ಸಹೋದರ ಎಸ್. ಬಿ. ಪ್ರಸಾದರಿಗೆ ಕೊಟ್ಟು ಮದುವೆ ಮಾಡಿದ್ರು. 1961ರಲ್ಲಿ ನಾಲ್ಕನೆಯವಳು ಉಷಾ ಮೈಸೂರಿನ ಮೈಸೂರು ಸಹೋದರರಲ್ಲೊಬ್ಬರಾದ ಶ್ರೀ ವಿಶ್ವೇಶ್ವರರನ್ನು ಮದುವೆಯಾದಳು.

1963ರ ಫೆಬ್ರವರಿ ಇಪ್ಪತ್ತೇಳರಂದು ಯಾಮುನಾಚಾರ್ಯರು ಅಮೆರಿಕ ದೇಶಕ್ಕೆ ಪ್ರಯಾಣ ಬೆಳೆಸಿದರು. ನಾಲ್ಕು ತಿಂಗಳ ಕಾಲ ಅಮೆರಿಕದಲ್ಲಿದ್ದು ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಉಪನ್ಯಾಸ ಮಾಡುತ್ತಿದ್ದರು. ಅವರ ಅಪಾರವಾದ ಸ್ನೇಹ ವಾತ್ಸಲ್ಯಗಳಿಂದ ಅನೇಕ ಮಿತ್ರರು ಇವರಿಗೆ ಸಿಕ್ಕಿದರು. ಊಟಕ್ಕಾಗಲೀ ವಾಸಮಾಡುವುದಕ್ಕಾಗಲೀ ಯಾವ ತೊಂದರೆಯೂ ಆಗಲಿಲ್ಲ. ಉಪನ್ಯಾಸಗಳಿಗೆ ಸಂಭಾವನೆಯಾಗಿ ಬರುತ್ತಿದ್ದ ಹಣವನ್ನು ಶ್ರೀ ಯಾಮುನಾಚಾರ್ಯರು ತಮ್ಮ ಮಿತ್ರರಾದ ಪ್ರೊ|| ಹಾರ್ಸ್ಟ್ ಬಾರ್ಜರ್ ಅವರಲ್ಲಿ ನ್ಯಾಸವಾಗಿಟ್ಟು ತಮಗೆ ಬೇಕಾದಾಗ ಆ ಹಣಕ್ಕೆ ಪುಸ್ತಕಗಳನ್ನು ಕಳುಹಿಸಿಕೊಡಬಹುದೆಂದು ತಿಳಿಸಿದ್ದರಂತೆ. ನಮ್ಮ ಮೊದಲ ಮಗ ಶ್ರೀ ಮುತ್ತು 1970 ರಲ್ಲಿ ಅಮೆರಿಕ ಪ್ರವಾಸ ಮಾಡುತ್ತಾ ಪೆನ್ಸಿಲ್ವೇನಿಯಕ್ಕೆ ಭೇಟಿ ಕೊಟ್ಟು ತನ್ನ

ತಂದೆ ಇದ್ದ ಕೊಠಡಿ, ಪಾಠಹೇಳಿದ ಕಾಲೇಜುಗಳನ್ನು ನೋಡಿಕೊಂಡು ಬಂದ. ಅಲ್ಲಿ ಪ್ರೊ॥ ಹಾರ್ಷ್‌ಬಾರ್ಜರ್ ಭೇಟಿಯಾಗಿ ತುಂಬ ಆದರಿಸಿ ಶ್ರೀ ಯಾಮುನಾಚಾರ್ಯರ ಮಗ ಎಂದು ಎಲ್ಲರಿಗೂ ಪರಿಚಯಮಾಡಿಸಿ ನಂತರ ಅವನಿಗೆ ಬೇಕಾದ ಪುಸ್ತಕಗಳು ಪ್ರವಾಸದ ವೆಚ್ಚ ಎಲ್ಲ ಕೊಟ್ಟರಂತೆ. "ನಿನ್ನತಂದೆ ಹಣವೇ ನನ್ನಲ್ಲಿ ಉಳಿದಿದೆ; ಅದನ್ನೇ ಕೊಡುತ್ತಿದ್ದೇನೆ. ಅವರಂತಹ ನಿಸ್ಪೃಹ ವಿದ್ವಾಂಸರನ್ನು ನಾನು ನೋಡಿರಲಿಲ್ಲ" ಎಂದರಂತೆ.

1967ರಲ್ಲಿ ದೆಹಲಿಯ ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಯನ ನಿರ್ದೇಶಕ ರಾಗಿ ಕೆಲಸ ವಹಿಸಿಕೊಂಡು ಅಲ್ಲಿಗೆ ಹೋದರು. ಜೂನ್ ತಿಂಗಳಿನಲ್ಲಿ ಅವರು ಮೈಸೂರಿಗೆ ಬಂದು ಹೋದಾಗ ನನ್ನನ್ನು ಕರೆದುಕೊಂಡು ದೆಹಲಿಗೆ ತೆರಳಿ ಗಾಂಧಿ ಶಾಂತಿ ಪ್ರತಿಷ್ಠಾನದ ಆವರಣದಲ್ಲೇ ವಾಸ ಮಾಡಲು ಏರ್ಪಾಡು ಮಾಡಿದರು. 67 ನವಂಬರಿನಲ್ಲಿ ಕಾಶಿಯಲ್ಲಿ ನಡೆದ ವಿಚಾರಗೋಷ್ಠಿಯೊಂದಕ್ಕೆ ನಾವಿಬ್ಬರೂ, ಜೊತೆಗೆ ಡಾ॥ ಎಸ್. ಎಲ್. ಭೈರಪ್ಪನವರೂ ಹೋಗಿ ಬಂದೆವು. ಕಾಶಿ ವಿಶ್ವೇಶ್ವರ ವಿಶಾಲಾಕ್ಷಿಯರ ದರ್ಶನ ಪಡೆದೆವು. ಗಂಗಾ ಸ್ನಾನ ಮಾಡಿದೆವು. ಬುದ್ಧ ವಿಹಾರ ವೊಂದಕ್ಕೆ ಹೋಗಿ ಬಂದೆವು. ದೆಹಲಿಗೆ ಹೋದ ಮೊದಲ ವರ್ಷದಲ್ಲೇ ಶ್ರೀ ಯಾಮುನಾಚಾರ್ಯರು ದೇಶದ ನಾನಾ ಮೂಲೆಗಳಿಗೆ ಸಭೆ ಸಮ್ಮೇಳನ ವಿಚಾರಗೋಷ್ಠಿ ಗಳಿಗಾಗಿ ಹೋಗಿಬಂದರು. ಹೈದರಾಬಾದು, ಪೂರಿ, ಜಗನ್ನಾಥ, ಒರಿಸ್ಸಾದ ಇತರ ಕಡೆಗಳು, ಗ್ವಾಲಿಯರ್ ಮುಂತಾದ ಸ್ಥಳಗಳಿಗೆ ಭೇಟಿಕೊಟ್ಟರು. ಗಾಂಧಿ ಜನ್ಮ ಶತಾಬ್ದಿಯ ಪೂರ್ವಭಾವಿ ಏರ್ಪಾಡುಗಳಿಗೆ ತುಂಬ ಶ್ರಮಪಟ್ಟು ಓಡಾಡಿದರು. ಈ ರೀತಿಯ ಕೆಲಸದ ಒತ್ತಡದಿಂದ ಅವರ ಆರೋಗ್ಯ ಕೆಟ್ಟಿತು. ಆಗಾಗ್ಗೆ ಜ್ವರ ಬರ ತ್ತಿತ್ತು. ದೆಹಲಿಯ ಅನೇಕ ಸಂಸ್ಥೆಗಳು ಇವರನ್ನು ದಿನವೂ ಕರೆಕರೆದು ಉಪನ್ಯಾಸ ಕೇಳುತ್ತಿದ್ದರು.ಯಾವುದಕ್ಕೂ ಬೇಸರಪಟ್ಟುಕೊಳ್ಳುವ ಸ್ವಭಾವವೇ ಅವರಲ್ಲಿರಲಿಲ್ಲ. ರಕ್ತದ ಒತ್ತಡ ಇತ್ತು, ಮಾತ್ರೆಗಳನ್ನು ತೆಗೆದುಕೊಳ್ಳುತ್ತಿದ್ದರು. ಸಪ್ಪೆ ಊಟ, ಸಕ್ಕರೆ ಇಲ್ಲದ ಕಾಫಿ ಅಭ್ಯಾಸವಾಗಿಹೋಗಿತ್ತು. ಅನ್ನ, ಚಪಾತಿ, ಸೊಪ್ಪಿನ ಪಲ್ಯ ಅವರ ನಿತ್ಯ ಆಹಾರ.

1968ರ ಫೆಬ್ರವರಿಯ ತಾ॥ 24ರಂದು ರಾತ್ರಿ ಏಳು ಗಂಟೆಗೆ ಊಟ ಮುಗಿಸಿ ಮಲಗಿದರು. ಸ್ವಲ್ಪ ಆಯಾಸವಾಗಿತ್ತು. ನಾನೊಬ್ಬಳೇ ಅವರೊಡನಿದ್ದುದು. ಆ ರಾತ್ರಿ 9 ಗಂಟೆ ವೇಳೆಗೆ ಮಂಚದಿಂದ ಏಳಲು ಪ್ರಯತ್ನಪಟ್ಟು ಕೆಳಗೆ ಬಿದ್ದುಬಿಟ್ಟರು. ದೀಪ ಹಾಕಿ ನೋಡಿದಾಗ ಕೆಳಗೆ ಬಿದ್ದು ಎಚ್ಚರ ತಪ್ಪಿದ್ದ ಅವರನ್ನು ನೋಡಿ ಆ ದೂರ ದೇಶ ದಲ್ಲಿ ನನಗೆ ಎದೆಯೇ ಒಡೆದಂತಾಯಿತು.ಮೈಯೆಲ್ಲಾ ಬೆವರಿತು. ಏನೂ ತೋಚಲಿಲ್ಲ. ಹೇಗೋ ಸುಧಾರಿಸಿಕೊಂಡು ಆ ಆವರಣದಲ್ಲಿದ್ದ ವಾಚ್‌ಮನ್ ಮತ್ತು ಮ್ಯಾನೇಜರ್ ಅಂಬಳವಾನನ್ ಅವರನ್ನು ಕರೆದೆ. ಅವರು ಬರುವಹೊತ್ತಿಗೆ ಯಾಮುನಾಚಾರ್ಯರೆ ಚೇತರಿಸಿಕೊಂಡು ಏಳುತ್ತಿದ್ದರು. "ಏನೂ ಗಾಬರಿಪಡುವ ಕಾರಣವಿಲ್ಲ" ಎಂದು ಎಲ್ಲ

ರನ್ನೂ ಅವರೇ ಸಮಾಧಾನ ಪಡಿಸಿದರು. ಮತ್ತೆ ಸುಖವಾಗಿ ನಿದ್ರೆಮಾಡಿದರು. ನನಗೆ ವಿಪರೀತ ಆತಂಕ, ನಾಲ್ಕು ಗಂಟೆಗೇ ಎದ್ದು ಬೆಳಗಾಗುವವರೆಗೂ ಅವರ ಪಕ್ಕದಲ್ಲೇ ಕಾದುಕುಳಿತೆ. ಎಂದಿನಂತೆಯೇ ಅವರು ಎದ್ದು ಸ್ನಾನಮಾಡಿ, ತಿಂಡಿ ಕಾಫಿ ತೆಗೆದು ಕೊಂಡು ಆ ದಿನ ಬೆಳಿಗ್ಗೆ 8 ಗಂಟೆಗೆ ರಾಷ್ಟ್ರಪತಿಭವನದಲ್ಲಿ ಡಾ|| ಜಕೀರ್‌ಹುಸೇನ್ ಅವರ ಸಮ್ಮುಖದಲ್ಲಿದ್ದ ಗಾಂಧೀ ಅಧ್ಯಯನ ಮಾರ್ಗದರ್ಶಕ ಸಮಿತಿ ಸಭೆಗೆ ಹೊರಟು ಬಿಟ್ಟರು. ಮಧ್ಯೆ 11ಗಂಟೆಗೆ ಒಂದುಸಾರಿ ಮನೆಗೆ ಬಂದು ಕೆಲವು ಕಾಗದ ಪತ್ರಗಳನ್ನು ತೆಗೆದುಕೊಂಡು ಹೋದರು. ಒಂದು ಗಂಟೆಗೆ ಹಿಂತಿರುಗಿ ಊಟಮಾಡಿ ಸ್ವಲ್ಪ ವಿಶ್ರಾಂತಿ ಪಡೆದು ಮತ್ತೆ ನಾಲ್ಕು ಗಂಟೆಗೇ ದೆಹಲಿಯ ಶ್ರೀವೈಷ್ಣವಸಂಘದಲ್ಲಿ ಶ್ರೀ ರಾಮಾನುಜರ ಬಗ್ಗೆ ಉಪನ್ಯಾಸ ಮಾಡಲು ಹೊರಟರು. ನಾನೂ ಬರುವುದಾಗಿ ಹೇಳಿ ಜೊತೆಯಲ್ಲಿ ಟ್ಯಾಕ್ಸಿಯಲ್ಲಿ ಹೋದೆ. ಒಂದೂವರೆ ಗಂಟೆ ಅಮೋಘವಾಗಿ ಉಪನ್ಯಾಸಮಾಡಿದರು. ಅಲ್ಲಿನ ಅನೇಕ ವಿದ್ವಾಂಸರು ಬಂದಿದ್ದರು; 7 ಗಂಟೆಗೆ ಸಭೆ ಮುಗಿದನಂತರ ನನ್ನ ಆಗ್ರಹದ ಮೇಲೆ ಶ್ರೀ ಬಿ. ಎಸ್. ಕೇಶವನ್ ಅವರ ಮನೆಗೆ ಹೋದೆವು. ಶ್ರೀ ಕೇಶವನ್ ಅವರಿಗೆ ಇವರನ್ನು ನೋಡಿ ತುಂಬ ಗಾಬರಿಯಾಯಿತು. ನನ್ನ ಮೇಲೆ ಕೋಪಗೊಂಡು "ಈ ಸ್ಥಿತಿಯಲ್ಲಿ ನೀನೇಕೆ ಅವರನ್ನು ಉಪನ್ಯಾಸಮಾಡಲು ಬಿಟ್ಟೆ; ಆಟೋರಿಕ್ಷದಲ್ಲಿ ಏಕೆ ಕರೆದುಕೊಂಡು ಬಂದೆ" ಎಂದು ರೇಗಿಬಿಟ್ಟರು. ಅಲ್ಲಿಂದಲೇ ಡಾ|| ಬಾಲಕೃಷ್ಣ ಅವರಿಗೆ ಫೋನ್ ಮಾಡಿ ತಿಳಿಸಿದರು. ಮಾರನೇ ಬೆಳಿಗ್ಗೆ ಅವರಲ್ಲಿಗೆ ಹೋಗುವುದು ಗೊತ್ತಾಯಿತು. ತಮ್ಮ ಕಾರಿನಲ್ಲೇ ಮನೆಗೆ ತಂದುಬಿಟ್ಟರು. ಮಾರನೇ ದಿನ ಶ್ರೀ ಕೇಶವನ್ ತಾವೇ ಬಂದು ಶ್ರೀ ಯಾಮುನಾಚಾರ್ಯರನ್ನು ವೈದ್ಯ ಪರೀಕ್ಷೆಗೆಂದು ಕರೆದುಕೊಂಡು ಹೋದರು. ಆ ದಿನ ಶಿವರಾತ್ರಿ. ಆಸ್ಪತ್ರೆಯ ಅನೇಕ ಶಾಖೆಗಳು ಕೆಲಸ ಮಾಡುತ್ತಿರಲಿಲ್ಲ. ಮತ್ತೆ ಮಾರನೇ ದಿನ ಬೆಳಿಗ್ಗೆ ಎದ್ದಾಗ ಯಾಮುನಾಚಾರ್ಯರಿಗೆ ಹೆಚ್ಚು ಸುಸ್ತು ಮೈಯೆಲ್ಲಾ ಬೆವರುತ್ತಿತ್ತು. ಕುಳಿತೇ ಮುಖ ತೊಳೆದು ಕಾಫಿ ಕುಡಿದರು. ಆದರೆ ತಮ್ಮ ದೇಹಕ್ಕೆ ಯಾವ ದೊಡ್ಡ ಖಾಯಿಲೆಯೂ ಇಲ್ಲವೆಂದೇ ಹೇಳಿ "ಶ್ರೀ ಕೇಶವನ್ ಅವರಿಗೇನೂ ಫೋನ್‌ಮಾಡಿ ಗಾಬರಿ ಮಾಡಬೇಡ" ಎಂದೇ ಹೇಳಿದರು. ಶ್ರೀ ಕೇಶವನ್ ಆ ದಿನ ಎರಡು ಸಾರಿ ಬಂದರು. ಬೆಳಿಗ್ಗೆ ಹತ್ತು ಗಂಟೆಗೆ ಆಸ್ಪತ್ರೆಗೆ ಕರೆದುಕೊಂಡು ಹೋದರು. ನಾನೂ ಜೊತೆಯಲ್ಲಿ ಬರಲು ಆಗ್ರಹಮಾಡಿ ಅವರನ್ನು ಒಪ್ಪಿಸಬೇಕಾಯಿತು.

ಆಲ್ ಇಂಡಿಯ ಮೆಡಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ದೊಡ್ಡ ಡಾಕ್ಟರಾಗಿದ್ದ ಡಾ|| ಬಾಲಕೃಷ್ಣ ಮೈಸೂರಿನವರು. ಹಿಂದಿನ ಪ್ರಸಿದ್ಧ ನೇತ್ರವೈದ್ಯ ಡಾ|| ಬಿ. ಕೆ. ನಾರಾಯಣರಾಯರ ಮಗ. ಅವರು ಶ್ರೀ ಯಾಮುನಾಚಾರ್ಯರನ್ನು ಪರೀಕ್ಷಿಸಿ ಒಂದು ವಾರ ಆಸ್ಪತ್ರೆಯಲ್ಲೇ ಇರಬೇಕೆಂದರು, ಚಿಕಿತ್ಸೆಯನ್ನು ಆ ಕೂಡಲೇ ಪ್ರಾರಂಭಿಸಿದರು. ಇದು ಹೃದಯರೋಗ. ಎದ್ದು ಓಡಾಡಬಾರದು ಎಂದು ನಿರ್ಬಂಧಪಡಿಸಿದರು. ಆ ರಾತ್ರಿ ನನ್ನ ಎರಡನೇ ಮಗ ಗೋವಿಂದಪ್ರಸಾದ್ ಗ್ವಾಲಿಯರ್‌ನಿಂದ ಬಂದ. ಶ್ರೀ ಕೇಶವನ್ ಅವನಿಗೆ ತಂತಿ ಕಳುಹಿಸಿದ್ದರು. ಎರಡು ವಾರಗಳು ಒಂದೇ ಸಮನೆ ಇದ್ದು ಮತ್ತೆ ರೋಗ

ಉಲ್ಬಣಿಸಿತು. ಮೈಸೂರಿನಿಂದ ದೊಡ್ಡ ಮಗ ಮತ್ತು ಸೊಸೆ ಬಂದರು. ಕಲ್ಕತ್ತೆಯಿಂದ ಮೂರನೇ ಮಗಳು ಬಂದರು. ಮಾರ್ಚಿ ತಿಂಗಳ ಕೊನೆಯ ವಾರದಲ್ಲಿ ಕುತ್ತಿಗೆಯ ಬಳಿ ಒಂದು ಆಪರೇಷನ್ ಮಾಡಿದರು. ಡಾಕ್ಟರುಗಳಿಗೆ ಇದು ಅಪಾಯಸ್ಥಿತಿಯಲ್ಲಿದೆ ಎನಿಸಿತ್ತು. ಕ್ಲೋರೋಫಾರಂ ಕೊಡಲು ಹೆದರಿದರು, ಹಾಗೆಯೇ ನಡೆದ ಶಸ್ತ್ರ ಚಿಕಿತ್ಸೆಯ ನೋವನ್ನು ಯಾಮುನಾಚಾರ್ಯರು ತಾಳ್ಮೆಯಿಂದ ಸಹಿಸಿದರು. ತಮ್ಮದೇ ಆದ ಪ್ರಪಂಚವೊಂದರಲ್ಲಿ ತಲ್ಲೀನರಾಗಿದ್ದರು : ಅವರೇ ನಂತರ ಹೇಳಿದಂತೆ " ನನಗೆ ಆಪರೇಷನ್ ಆಗುತ್ತಿತ್ತು. ನಾನೂ ನಿಮ್ಮಂತೆ ದೂರ ನಿಂತು ನೋಡುತ್ತಲೇ ಇದ್ದೆ" ಇದು ಅವರ ವಿಚಿತ್ರ ಅನುಭವ. " ಹೃದಯರೋಗವಿದೆ, ಆದರೆ ನನಗೆ ಎದೆ ನೋವು ಏನೂ ಇಲ್ಲವಲ್ಲ ! " ಎನ್ನುತ್ತಿದ್ದರು. ಆ ದಿನ ರೋಗ ತುಂಬ ಉಲ್ಬಣಾವಸ್ಥೆಯಲ್ಲಿತ್ತು. ಆಗ ತಾನೇ ಬಂದಿದ್ದ ಹೊಸ ಔಷಧಿಯನ್ನು ಇಂಜಕ್ಷನ್ ಮೂಲಕ ಹಲವಾರು ಸೀಸೆಗಳನ್ನು ಸಂಜೆಯತನಕ ಕೊಡುತ್ತಲೇ ಇದ್ದರು. ನಾಲ್ಕು ಸೂಜಿಗಳನ್ನು ಎರಡು ಕೈಗಳಿಗೂ ಹಚ್ಚಿಯೇ ಇಟ್ಟಿದ್ದರು. ಆ ದಿನ ಸಂಜೆ 6 ಗಂಟೆಯ ವೇಳೆಗೆ ಸ್ವಲ್ಪ ಗುಣಮುಖ ವಾಯಿತು. ನನಗೆ ಅಲ್ಲಿನ ಡಾಕ್ಟರುಗಳ ನರ್ಸ್‌ಗಳ ವಿಶ್ವಾಸ, ಕರುಣೆ, ತಾಳ್ಮೆ ಎಲ್ಲವೂ ಅದ್ಭುತವೆನಿಸಿತು. ದೇವರೇ ಈ ರೂಪದಲ್ಲಿ ನಮ್ಮನ್ನು ಕಾಪಾಡುತ್ತಿದ್ದಾನೆ ಎನಿಸಿತು. ಸ್ವಲ್ಪ ಸ್ವಲ್ಪವಾಗಿ ಗಂಟಲಲ್ಲಿ ಹಾಲು ಇಳಿಯುವಂತಾಯಿತು. ಕಷ್ಟಪಟ್ಟು ನುಂಗುತ್ತಿದ್ದರು.

ದಿನವೂ ರಾತ್ರಿ ನಾನು ಮನೆಗೆ ಬರುತ್ತಿದ್ದೆ. ಮಗ ಸೊಸೆ ಆಸ್ಪತ್ರೆಯಲ್ಲಿರುತ್ತಿದ್ದರು. ನನಗೆ ನಿದ್ದೆ ಬರುತ್ತಿರಲಿಲ್ಲ. ಬೆಳಗ್ಗೆ 4 ಗಂಟೆಗೇ ಎದ್ದು ಸ್ನಾನಮಾಡಿ ದೇವರಪೂಜೆಗೆ ಹಾಲು ನೈವೇದ್ಯ ಮಾಡಿ ಶ್ರೀ ಯಾಮುನಾಚಾರ್ಯರ ಜೊತೆ ಕೆಲಸ ಮಾಡುತ್ತಿದ್ದ ಅಂಬಲವಾನನ್, ರಮೇಶ್ ಮುಂತಾದವರಿಗೆ ಕೊಟ್ಟು " ನೀವು ಕುಡಿಯಿರಿ. ನಿಮ್ಮ ಹಾರೈಕೆಯಿಂದ ಅವರೂ ಹಾಲುಕುಡಿಯುವಂತಾಗುತ್ತದೆ" ಎಂದು ಕೇಳಿಕೊಳ್ಳುತ್ತಿದ್ದೆ. ಆರುಗಂಟೆಗೆಲ್ಲ ಆಸ್ಪತ್ರೆಗೆ ಹೋಗಿಬಿಡುತ್ತಿದ್ದೆ. ಆಸ್ಪತ್ರೆಯಲ್ಲಿ ಏನು ಸುದ್ದಿ ಕಾದಿದೆಯೋ ಎಂದು ಎದೆ ಹೊಡೆದುಕೊಳ್ಳುತ್ತಲೇ ಇರುತ್ತಿತ್ತು. ಮೂರು ಮಹಡಿ ಹತ್ತಿ ಹೋಗಿ ವಾರ್ಡು ಸೇರುವುದು ತುಂಬ ಕಷ್ಟವಾಗುತ್ತಿತ್ತು. ಅವರಿಗೆ ಹಾಲು ಕೊಡುವಾಗ ದೇವರನ್ನು ಸ್ಮರಿಸಿ ಕೈಮುಗಿದೇ ಕೊಡುತ್ತಿದ್ದೆ. ದೇವರ ದಯದಿಂದಲೇ ಅವರಿಗೆ ಗುಣ ವಾಗುತ್ತಿದೆ ಎಂದು ನಂಬಿದ್ದೆ. ಏಪ್ರಿಲ್ ಎರಡನೇ ವಾರ ಶ್ರೀ ಯಾಮುನಾಚಾರ್ಯರು ಗುಣಮುಖರಾಗಿ ಬಂದರು. ದೆಹಲಿಯಿಂದ ಆ ತಿಂಗಳು 29ಕ್ಕೆ ಹೊರಟು ಮೇ ಎರಡರಂದು ಮೈಸೂರು ಸೇರಿದೆವು.

1968ರ ಆಗಸ್ಟ್ ಆರರಂದು ಶ್ರೀ ಯಾಮುನಾಚಾರ್ಯರಿಗೆ 70ನೇ ವರ್ಷ ಶಾಂತಿ ನಡೆಯಿತು. ಮೈಸೂರಿನಲ್ಲಿ ಗಾಂಧೀ ಶತಮಾನೋತ್ಸವ ಸಂದರ್ಭದ ಸಭೆಗಳಲ್ಲಿ ಭಾಗವಹಿಸತೊಡಗಿದ್ದರು. ರಾಜ್ಯದ ಶತಮಾನೋತ್ಸವ ಸಮಿತಿಯ ಆಹ್ವಾನದ ಮೇಲೆ ಬೆಂಗಳೂರಿಗೆ ಹೋಗಿ ಅಕ್ಟೋಬರ್ 3ರಂದು ರವೀಂದ್ರಕಲಾ ಕ್ಷೇತ್ರದಲ್ಲಿ ಮಾತನಾಡಿ

ಸ್ವಲ್ಪ ಶಕ್ತಿ ಇದ್ದರೂ ಅವರು ತಮಗೆ ತಿಳಿದುದನ್ನು ಇತರರಿಗೆ ತಿಳಿಯ ಹೇಳಬೇಕಾದುದು ತಮ್ಮ ಧರ್ಮ ಎಂದೇ ತಿಳಿದಿದ್ದರು. ಕೊನೆಯ ಉಸಿರಿನವರೆಗೆ ಅದನ್ನು ಕರ್ತವ್ಯ ಎಂದು ಮಾಡಲು ಅವರು ಸಂಕಲ್ಪಿಸಿದ್ದರು.

ಈ ಮಧ್ಯೆ ನಮ್ಮ ದೊಡ್ಡ ಮಗ ಮುತ್ತು ಕೆನಡಾ ದೇಶಕ್ಕೆ ಪ್ರವಾಸ ಹೋಗಬೇಕಾಯಿತು. ತಂದೆಯವರ ಆರೋಗ್ಯ ಕೆಟ್ಟಿದ್ದರಿಂದ ಮುಂದೆಹಾಕುತ್ತಾ ಬಂದಿದ್ದ. 69ರ ಏಪ್ರಿಲ್‌ನಲ್ಲಿ ಅವನನ್ನು ಆಶೀರ್ವದಿಸಿ ಕಳುಹಿಸಿದ್ದರು. ತಮ್ಮ ದೇಹ ಶುಶ್ರೂಷೆಗಿಂತ ಮಗನ ಅಭ್ಯುದಯ ಮುಖ್ಯ ಎಂದು ಹೇಳಿ ಆಶೀರ್ವದಿಸಿದ್ದರು. ಆತ ಹಿಂದಿರುಗುವವರೆಗೆ ತಾನಿರುತ್ತೇನೋ ಇಲ್ಲವೋ ಅವನಿಗೆ ಒಳ್ಳೆಯದಾಗಲಿ ಎಂಬುದೇ ಅವರಆಸೆ ಮತ್ತೆ ಅದೇವರ್ಷ ಅಕ್ಟೋಬರ್‌ನಲ್ಲಿ ಎರಡು ಮೂರುವಾರಗಳು ಮೈಸೂರಿನ ಆಸ್ಪತ್ರೆಗೆ ಸೇರಿದರು. ಡಾ|| ದಾಸ್ ಶುಶ್ರೂಷೆ ನಡೆಸಿದರು. ಅದೇ ವರ್ಷ ನವೆಂಬರ್ ಒಂದನೆಂದು ಬೆಂಗಳೂರಿಗೆ ಹೋಗಿ ರಾಜ್ಯ ಪ್ರಶಸ್ತಿ ಪಡೆದರು. ಈ ಸಮಾರಂಭಗಳಿಂದ ತುಂಬ ಆಯಾಸವಾಯಿತು.

1970 ಜನವರಿ 3ನೇ ತಾರೀಕು ಗಂಡುಮಕ್ಕಳಿಗೆಲ್ಲ ಕಾಗದ ಬರೆದರು. "ನಾನು ಆರೋಗ್ಯವಾಗಿದ್ದೇನೆ. ಆದರೆ ದೇವರ ಸಂಕಲ್ಪ ಹೇಗಿದೆಯೋ" ಎಂದು ಬರೆದಿದ್ದರು. ನಾಲ್ಕನೇ ತಾರೀಕು ಭಾನುವಾರ ಬೆಳಿಗ್ಗೆ ಸಂಸ್ಕೃತಸಮಿತಿಯೊಂದರ ಸಭೆ ಮನೆಯಲ್ಲೇ ನಡೆಯಿತು. ಅದರ ಕೆಲಸಕ್ಕೆ ನೂರು ರೂಪಾಯಿ ದಾನ ಬರೆದುಕೊಟ್ಟರು. ಸಂಜೆ ಏಳೂವರೆ ಗಂಟೆಗೆ ಇದ್ದಕ್ಕಿದ್ದಂತೆ ಕುರ್ಚಿಯ ಮೇಲೆ ಕುಳಿತಲ್ಲಿಯೇ ಕುಸಿದುಬಿದ್ದರು. ಯಾವ ಸಂಕಟವನ್ನೂ ಪ್ರದರ್ಶಿಸದೆ ನೆಮ್ಮದಿಯಿಂದ ಶ್ರೀಮನ್ನಾರಾಯಣನ ಪಾದಾರವಿಂದವನ್ನು ಸೇರಿದರು. ಇರುವಾಗಲೂ ಶಾಂತವಾಗಿ ನೆಮ್ಮದಿಯಿಂದ ಇದ್ದರು. ಹೋಗುವಾಗಲೂ ನೆಮ್ಮದಿಶಾಂತಿಗಳಿಂದ ಹೊರಟುಹೋದರು. ಒಂದುದಿನ ಕೋಪಗೊಳ್ಳಲಿಲ್ಲ. ಯಾರನ್ನೂ ನೋಯಿಸಲಿಲ್ಲ. ಅಂಥಮಹಾತ್ಮರು ಇನ್ನು ನಮಗೆ ಸಿಕ್ಕಲಾರರು. ಅವರು ಬಾಳಿನಲ್ಲೆಲ್ಲಾ ಒಂದು ಶ್ಲೋಕವನ್ನು ಪದೇ ಪದೇ ಹೇಳುತ್ತಿದ್ದರು. ನಮಗೂ ಅವರ ಆಶೀರ್ವಾದ ವಚನ ಅದೇ :

ಅಹಿಂಸಾಪ್ರಥಮಂ ಪುಷ್ಪಂ । ಪುಷ್ಪಂ ಇಂದ್ರಿಯ ನಿಗ್ರಹಃ
ಸರ್ವಭೂತದಯಾ ಪುಷ್ಪಂ ವಿಶೇಷಿತಃ
ಜ್ಞಾನಂ ಪುಷ್ಪಂ ತಪಃ ಪುಷ್ಪಂ ಧ್ಯಾನ ಪುಷ್ಪಂ ತಥೈವಚ ।
ಸತ್ಯಂ ಅಷ್ಟವಿಧಂ ಪುಷ್ಪಂ । ವಿಷ್ಣೋಃ ಪ್ರೀತಿಕರಂ ಭವೇತ್.

# ನಾ ಕಂಡ ಯಾಮುನಾಚಾರ್ಯರು

---

## ದೇ. ಜವರೇ ಗೌಡ

'ನಾನು ಅಧ್ಯಾಪಕ ವೃತ್ತಿಯನ್ನವಲಂಬಿಸಿದನಂತರ ಸುಮಾರು ಎರಡು ದಶಕಗಳ ಕಾಲ ಜ್ಞಾನವಿಸ್ತರಣೆಯ ಕಾರ್ಯದಲ್ಲಿ ತೊಡಗಿದ್ದೆ. ಚೆನ್ನಾಗಿ ಪಾಠ ಮಾಡಬಲ್ಲೆನೆಂಬ ಆತ್ಮಪ್ರತ್ಯಯ ಮೂಡಿರುವಾಗಲೆ ನಾನು ನಿವೃತ್ತನಾಗುತ್ತಿದ್ದೇನೆ. ಈ ವೃತ್ತಿಯಿಂದ ನಿವೃತ್ತನಾದರೂ ನಾನು ಸದಾ ಕಾರ್ಯಪ್ರವೃತ್ತನಾಗಿರುತ್ತೇನೆ'. ಐವತ್ತೈದನೆಯ ವಯಸ್ಸಿನಲ್ಲಿ ನಿವೃತ್ತರಾಗಿ, ತಮ್ಮ ಸ್ನೇಹಿತರು ಏರ್ಪಡಿಸಿದ್ದ ಉಪಹಾರ ಗೋಷ್ಠಿಯಲ್ಲಿ ಪ್ರಾ. ಯಾಮುನಾಚಾರ್ಯರು ಹೇಳಿದ ಮಾತು ಇದು. ಒಬ್ಬ ಅಧ್ಯಾಪಕ ಎಂಥ ಪ್ರತಿಭಾವಂತನಾಗಿರಲಿ, ಎಷ್ಟೇ ಬುದ್ಧಿವಂತನಾಗಿರಲಿ, ಜ್ಞಾನಕೋಶ ಸಮೃದ್ಧವಾಗಿ ವಿಸ್ತಾರಗೊಳ್ಳಬೇಕಾದರೆ, ಅನುಭವ ಪರಿಪಕ್ವವಾಗಬೇಕಾದರೆ ಕೆಲವಾರು ವರ್ಷ ಬೇಕಾಗುತ್ತದೆ. ಜ್ಞಾನಪ್ರಪಂಚದಲ್ಲಿ ರಾಜಕೀಯ, ಜನಾಂಗಿಕ, ಮತೀಯ, ಭೌಗೋಳಿಕ ಅಥವಾ ಭಾಷಿಕವಾದ ಗಡಿಗಳಿಗೆ ಎಡೆಯಿಲ್ಲ. ಆದ್ದರಿಂದ ಅಧ್ಯಾಪಕ ನಿಜಕ್ಕೂ ತಜ್ಞನೆನಿಸಿಕೊಂಡು ಉತ್ತಮ ಬೋಧಕನಾಗಬೇಕಾದರೆ ತನ್ನ ವಿಶೇಷ ವಿಷಯದ ಬಗೆಗೆ ಜಗತ್ತಿನ ಎಲ್ಲ ಕಡೆಗಳಿಂದಲೂ ಮಾಹಿತಿಯನ್ನು ಸಂಗ್ರಯಿಸಬೇಕು; ಹಾಗೆ ಸಂಗ್ರಹಗೊಂಡ ಮಾಹಿತಿಯ ಬಗೆಗೆ ಆಲೋಚನೆ ನಡೆಸಬೇಕು; ಆ ಜ್ಞಾನರಾಶಿಯ ಜತೆಗೆ ತನ್ನದಾದದ್ದನ್ನೂ ಸೇರಿಸಬೇಕು. ವಿದ್ಯಾರ್ಥಿ ದೆಶೆಯಲ್ಲಿ ಮಾಡಿಕೊಂಡ ಟಿಪ್ಪಣಿಯನ್ನವಲಂಬಿಸದೆ ಸ್ವಸಾಮರ್ಥ್ಯದ ಮೇಲೆ ನಿಲ್ಲುವಂತಿರಬೇಕು, ಸ್ವಂತ ಟಿಪ್ಪಣಿಯನ್ನಾಶ್ರಯಿಸುವಂತಿರಬೇಕು. ಪ್ರತಿನಿತ್ಯ ಅಷ್ಟಿಷ್ಟಾದರೂ ಹೊಸ ಅನುಭವವನ್ನು ಪಡೆಯದವನು, ಪ್ರತಿವರ್ಷ ಹೊಸ ಹೊಸ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸದವನು ನಿಜಕ್ಕೂ ಶ್ರೇಷ್ಠ ಬೋಧಕನೆನಿಸಿಕೊಳ್ಳಲಾರನು. ಇದು ಅವರ ಭಾಷಣದ ಭಾವವಾಗಿತ್ತು.

ಅಧ್ಯಾಪಕ ಎಷ್ಟು ಜ್ಞಾನಸಂಪನ್ನನೋ ಅಷ್ಟೇ ಶೀಲಸಂಪನ್ನನೂ ಆಗಿರಬೇಕು. ಅವನು ವಿದ್ಯಾರ್ಥಿಗಳ, ಏಕೆ ಇಡೀ ಸಮಾಜದ ಗೆಳೆಯ, ಮಾರ್ಗದರ್ಶಕ ಹಾಗೂ ಗುರುವಾಗಬೇಕು; ಸಾಂಸ್ಕೃತಿಕ ನೇತಾರನಾಗಬೇಕು. ಸ್ನೇಹವಾತ್ಸಲ್ಯ, ನಿರ್ಮತ್ಸರತೆ, ನಿಷ್ಕಾಪಟ್ಯ, ಸತ್ಯನಿಷ್ಠೆ, ಕರ್ತವ್ಯಶ್ರದ್ಧೆ, ಕ್ರಿಯಾಶೀಲತೆ ಹಾಗೂ ನಿಷ್ಪಕ್ಷಪಾತ ಮನೋಭಾವ ಮೊದಲಾದ ಮಾನವೀಯ ಗುಣಗಳಿಂದ ಮಾತ್ರ ಅವನು ಶಿಷ್ಯರ ಹೃದಯವನ್ನು ಗೆಲ್ಲಬಹುದು. ಈ ಗುಣಗಳು ಯಾಮುನಾಚಾರ್ಯರಲ್ಲಿ ಯಥೇಚ್ಛವಾಗಿದ್ದುದರಿಂದ ಎಲ್ಲ ವಿದ್ಯಾರ್ಥಿಗಳ ವಿಶ್ವಾಸಗೌರವಗಳಿಗೆ ಪಾತ್ರರಾಗಿದ್ದರು.

ಅವರು ರಾಮಾನುಜ ಪರಂಪರೆಗೆ ಸೇರಿದವರಾದ್ದರಿಂದ ದೀನದಲಿತರ ಬಗೆಗೆ ತುಂಬ ಉದಾರವಾಗಿಯೂ ಸಹಾನುಭೂತಿಯಿಂದಲೂ ನಡೆದುಕೊಳ್ಳುತ್ತಿದ್ದರು.

ಇಂಟರ್ ಮೀಡಿಯೆಟ್ ತರಗತಿಯಲ್ಲಿ ನಾನವರ ವಿದ್ಯಾರ್ಥಿಯಾಗಿದ್ದೆ. ಆದರೆ ನಾನು ಹಳ್ಳಿಯಿಂದ ಬಂದವನಾದ್ದರಿಂದ ಇಂಗ್ಲಿಷ್ ಮೂಲಕ ಅಧ್ಯಾಪಕರು ಮಾಡುತ್ತಿದ್ದ ಉಪನ್ಯಾಸಗಳು ಸಂಪೂರ್ಣವಾಗಿ ಅರ್ಥವಾಗುತ್ತಿರಲಿಲ್ಲ. ಪ್ರೌಢ ಶಾಲೆಯಲ್ಲಿಯೂ ನಾನು ಆಂಗ್ಲಭಾಷೆಯ ಮೂಲಕವೇ ಪಾಠ ಕಲಿಯಬೇಕಾಗಿತ್ತು, ಪರೀಕ್ಷೆಯಲ್ಲಿ ಉತ್ತರ ಬರೆಯಬೇಕಾಗಿತ್ತು. ಆದರೂ ಹೇಗೊ ಬಚಾವಾಗಿ ಸಾಕಷ್ಟು ಅಂಕಗಳನ್ನು ಪಡೆದುಕೊಂಡೇ ಆ ಪರೀಕ್ಷೆಯನ್ನು ದಾಟಿದ್ದೆ. ಕನ್ನಡ ತರಗತಿಗಳನ್ನು ಬಿಟ್ಟರೆ ಉಳಿದ ತರಗತಿಗಳು ನೀರಸವಾಗಿ ತೋರುತ್ತಿದ್ದುವು; ಕನ್ನಡವನ್ನು ಇಂಗ್ಲಿಷ್ ಮೂಲಕ ಕಲಿಸುವಾಗಲಂತು ಈ ನೀರಸತೆ ಪರಮಾವಧಿಯನ್ನು ಮುಟ್ಟುತ್ತಿತ್ತು. ಇಂಗ್ಲಿಷ್ ಹಾಗೂ ಇತಿಹಾಸದ ಒಬ್ಬಿಬ್ಬರು ಅಧ್ಯಾಪಕರ ಇಂಗ್ಲಿಷ್ ಉಚ್ಚಾರಣೆ ಯಂತು ಏನೇನೂ ಅರ್ಥವಾಗುತ್ತಿರಲಿಲ್ಲ; ಅವರ ಉಪನ್ಯಾಸ ಗೋಮೂತ್ರ ಶೈಲಿ ಯಲ್ಲಿರುತ್ತಿತ್ತು. ಹಿರಿಯ ವಿದ್ಯಾರ್ಥಿಗಳ ತರಗತಿಯ ಟಿಪ್ಪಣಿಗಳನ್ನೋದಿಕೊಂಡ ದ್ದಾದರೆ ಮತ್ತೆ ಅದೇ ಅಧ್ಯಾಪಕರ ಪಾಠವನ್ನು ಕೇಳಬೇಕಾಗಿರಲಿಲ್ಲ. ಇದು ಸರ್ವೇ ಸಾಮಾನ್ಯವಾದ ಪದ್ಧತಿ. ಇಂಥ ಪರಿಸ್ಥಿತಿಯಲ್ಲಿ ಯಾಮುನಾಚಾರ್ಯರಂಥ ಅಧ್ಯಾ ಪಕರು ಒಬ್ಬಿಬ್ಬರು ನನ್ನಂಥ ಹಳ್ಳಿಗಳನ್ನು ತಕ್ಕಮಟ್ಟಿಗೆ ಆಕರ್ಷಿಸುತ್ತಿದ್ದರು. ಅವರ ಸರಳವಾದ ಭಾಷೆ, ಸ್ಫುಟವಾದ ಉಚ್ಚಾರಣೆ, ಸ್ಪಷ್ಟವಾದ ಆಲೋಚನೆ ಪ್ರಾಯಶಃ ಅವರ ವಿದ್ಯಾರ್ಥಿಪ್ರಿಯತೆಗೆ ಕಾರಣವಾಗಿದ್ದುವು. ಯಾವಾಗಲೂ ಅವರ ಮುಖ ದಲ್ಲಿ ಸೌಮ್ಯತೆ ಪ್ರಸನ್ನತೆಗಳು ತಾಂಡವವಾಡುತ್ತಿದ್ದುದರಿಂದಲೂ, ಅವರ ನಿಷ್ಕಾಪಟ ವಾತ್ಸಲ್ಯಮಯ ನಡೆವಳಿಕೆಯಿಂದಲೊ ಏನೊ ಯಾರಲ್ಲಿಯೂ ಇಲ್ಲದ ಗೌರವ ಅವರಲ್ಲಿ ಮೂಡುತ್ತಿತ್ತು. ಆದರೂ ಅವರು ಮಾಡಿದ ಪಾಠವೆಲ್ಲ ಅರ್ಥವಾಯಿತೆಂದೂ, ಸಾಕಷ್ಟು ತರ್ಕಶಾಸ್ತ್ರವನ್ನು ಕಲಿತೆನೆಂದೂ ಹೇಳುವಂತಿಲ್ಲ. ಇದಕ್ಕೆ ಕಾರಣ ನನ್ನಲ್ಲಿ ಜ್ಞಾನತೃಷೆಯಿಲ್ಲದ್ದು, ವ್ಯಾಸಂಗೋದ್ದೇಶ ಸ್ಪಷ್ಟವಾಗಿಲ್ಲದ್ದು. ಈ ನನ್ನ ಲೋಪ ದೋಷಗಳಿಗೆ ಮಾತ್ರ ನಾನು ಹುಟ್ಟಿದ ಹಾಗೂ ಬೆಳೆದ ವಾತಾವರಣವೇ ಕಾರಣ.

ಮುಂದಿನ ವರ್ಷಗಳಲ್ಲಿ ನಾನವರ ವಿದ್ಯಾರ್ಥಿಯಾಗಿರಲಿಲ್ಲವಾದರೂ ಅನೇಕ ವಿದ್ಯಾರ್ಥಿಗಳ ಮೂಲಕ ಅವರ ವಿದ್ವತ್ತಿನ ಮೌಲ್ಯವನ್ನು ಕೇಳಿ ತಿಳಿದುಕೊಂಡದ್ದುಂಟು ಅವರ ಸಾರ್ವಜನಿಕ ಭಾಷಣಗಳನ್ನು ಕೇಳಿ ಅವರ ಭಾಷಾಪ್ರಭುತ್ವಕ್ಕೂ ವಿಚಾರ ಲಹರಿಗೂ ಪಾಂಡಿತ್ಯಕ್ಕೂ ಬೆರಗಾಗಿದ್ದೇನೆ. ಭಾರತೀಯವಾದ ಆಲೋಚನೆಗಳನ್ನು ಅವರಂತೆ ಆಂಗ್ಲ ಭಾಷೆಯ ಮೂಲಕ ಪ್ರತಿಪಾದಿಸುತ್ತಿದ್ದವರು ವಿರಳ. ಒಮ್ಮೆ ಶ್ರೀ ಕುವೆಂಪು ಅವರ ಭಾಷಣವನ್ನು ಆಂಗ್ಲಭಾಷೆಗೆ ಅನುವಾದಿಸಬೇಕಾಗಿತ್ತು. ನಾನೇ ಇಂಗ್ಲಿಷ್ ಪ್ರಾಧ್ಯಾಪಕರೊಬ್ಬರಿಂದ ಅದನ್ನು ಭಾಷಾಂತರ ಮಾಡಿಸಿದೆ. ಕುವೆಂಪು ಅವರಿಗೆ ಅದು ಹಿಡಿಸಲಿಲ್ಲ. ಮತ್ತೆ ಅದನ್ನೊಯ್ದು ಯಾಮುನಾಚಾರ್ಯರಿಗೆ ಕೊಟ್ಟು

ಭಾಷಾಂತರಿಸಿಕೊಡುವಂತೆ ಕೇಳಿಕೊಂಡೆ. ಅವರ ಆಂಗ್ಲಾನುವಾದಕ್ಕೆ ಕುವೆಂಪು ಅವರು ಸಹ ಮಾರುಹೋದರು.

ನಿಜವಾದ ವಿದ್ವಾಂಸ ನಿವೃತ್ತನಾಗಲಿಕ್ಕೆ ಹಿಂದೆಮುಂದೆ ನೋಡಬೇಕಾಗಿಲ್ಲ. ಒಂದು ವೃತ್ತಿಯಿಂದ ನಿವೃತ್ತನಾದರೂ ಮತ್ತೊಂದು ವೃತ್ತಿಯಲ್ಲಿ ಪ್ರವೃತ್ತನಾಗುತ್ತಾನೆ. ಒಂದು ವೃತ್ತಿಯಿಂದ ಬೇರೊಂದು ವೃತ್ತಿಗಿಳಿಯುವುದೇ ಅವನಿಗೆ ವಿಶ್ರಾಂತಿಯಾಗುತ್ತದೆ. ಶರೀರ ಮನಸ್ಸುಗಳಲ್ಲಿ ಶಕ್ತಿ ಉಕ್ಕುತ್ತಿರುವಾಗ ಅವನು ತೆಪ್ಪಗಿರಲಾರ. ಯಾವುದಾದರೂ ಲೋಕೋತ್ತರವಾದ ಕಾರ್ಯದಲ್ಲಿ ತೊಡಗುತ್ತಾನೆ. ಮೈಗಳ್ಳನಿಗೆ ಕೆಲಸ ಸಿಗುವುದಿಲ್ಲ; ಕೆಲಸ ಬಲ್ಲವನಿಗೆ, ಕೆಲಸ ಬೇಕಾದವನಿಗೆ ಅದು ಸಿಕ್ಕೇ ಸಿಗುತ್ತದೆ. ಕನ್ನಡ ಗಾಂಧೀ ಸಾಹಿತ್ಯದ ಪ್ರಧಾನಸಂಪಾದಕರಾಗಿ ಕ್ಲುಪ್ತವೇಳೆಯಲ್ಲಿ ತಮಗೊಪ್ಪಿಸಿದ ಕೆಲಸವನ್ನು ಸಮರ್ಪಕವಾಗಿ ಸಮಗ್ರವಾಗಿ ಮುಗಿಸಿದರು. ಅಂತೆಯೇ ಗಾಂಧಿ ಶಾಂತಿ ಪ್ರತಿಷ್ಠಾನದ ವತಿಯಿಂದ ನಾಡಿನ ಹಲವಾರು ವಿಶ್ವವಿದ್ಯಾನಿಲಯಗಳಿಗೆ ಭೇಟಿನೀಡಿ ತಮ್ಮ ಪಾಂಡಿತ್ಯದ ಫಲವನ್ನು ಅಲ್ಲಿಯ ಪ್ರಾಧ್ಯಾಪಕರ ಅನುಭವಕ್ಕೆ ತಂದುಕೊಟ್ಟರು. ಆ ಮುಂದೆ ಅವರು ಅಮೆರಿಕೆಯ ವಿಶ್ವವಿದ್ಯಾನಿಲಯಗಳಿಗೆ ಹೋಗಿ ಭಾರತೀಯ ತತ್ತ್ವಶಾಸ್ತ್ರ ಹಾಗೂ ಗಾಂಧೀತತ್ತ್ವದ ಮೇಲೆ ಅನೇಕ ಉಪನ್ಯಾಸಗಳನ್ನು ಕೊಟ್ಟು ಅಲ್ಲಿಯ ಪ್ರಾಧ್ಯಾಪಕರ ಮನವೊಲಿಸಿಕೊಂಡರು.

ಊರಲ್ಲಿದ್ದಾಗಲಂತು ದಿನಾಲೂ ಏನಾದರೊಂದು ಕಾರ್ಯಕ್ರಮವಿರುತ್ತಿತ್ತು. ಅವರ ಕಾರ್ಯಕ್ರಮ ಕೇವಲ ಮೈಸೂರು ನಗರಕ್ಕೆ ಸೀಮಿತವಾಗಿರಲಿಲ್ಲ. ಯಾರು ಎಲ್ಲಿಗೆ ಕರೆದರೂ ನಕಾರವೆತ್ತುತ್ತಿರಲಿಲ್ಲ. ಗಾಂಧೀತತ್ತ್ವ ಪ್ರಚಾರಕ್ಕಾಗಿ ಅವರೆಷ್ಟು ದೈಹಿಕಶ್ರಮವನ್ನಾದರೂ ಸಹಿಸುತ್ತಿದ್ದರು. ರೈಲು ಬಸ್ಸು ಗಾಡಿಯೊ ಯಾವ ವಾಹನ ಸಿಕ್ಕಿದರೂ ಸರಿಯೆ, ಅದೇ ಅವರಿಗೆ ಪ್ರಿಯವಾಗುತ್ತಿತ್ತು. ಈಗಿನಂತೆ ಟ್ಯಾಕ್ಸಿಯೇ ಬೇಕೆಂದು ಕೇಳಿದವರಲ್ಲ. ಅವರು ತತ್ತ್ವಪ್ರಚಾರಕರಷ್ಟೇ ಅಲ್ಲ, ಅನುಷ್ಠಾನಶೀಲರೂ ಅಹುದು. ಭಾರತದ ಕೇವಲ ಕೆಲವೇ ಕೆಲವರು ನಿಷ್ಠಾವಂತ ಗಾಂಧೀ ಅನುಯಾಯಿಗಳಲ್ಲಿ ಇವರೊಬ್ಬರು. ಅವರ ನಡೆನುಡಿಗಳಲ್ಲಿ ಯಾವಾಗಲೂ ಹೊಂದಾಣಿಕೆಯಿರುತ್ತಿತ್ತು. ಎಂಥ ವಿಷಮ ಸಂದರ್ಭದಲ್ಲಿಯೂ ಅವರು ಕೋಪ ಮಾಡಿಕೊಂಡಿದ್ದಾಗಲಿ, ಮನೋವಿಕಾರಕ್ಕೊಳಗಾದದ್ದಾಗಲಿ ನಾನು ಕಾಣಲಿಲ್ಲ. ಸಮತೋಲನ ಅವರ ಸ್ಥಾಯೀಗುಣವಾಗಿತ್ತು. ಸರಳತೆ ಅವರ ಬಾಳನ್ನೆಲ್ಲ ಆಕ್ರಮಿಸಿಕೊಂಡಿತ್ತು. ಮತ್ತೊಬ್ಬರ ಬಗೆಗೆ ಮರೆತಾದರೂ ಕೆಟ್ಟಾಡಿದ್ದನ್ನು ನಾನು ನೋಡಿಲ್ಲ, ಬೇರೆಯವರ ಬಾಯಿಂದ ಕೇಳಿಯೂ ಇಲ್ಲ. ಅವರು ನಿಜವಾದ ಅರ್ಥದಲ್ಲಿ ‘ಗುರು’ವಾಗಿದ್ದರು.

ಯಾಮುನಾಚಾರ್ಯರು ಶ್ರೇಷ್ಠ ಲೇಖಕರೂ ಅಹುದು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಲೀಲಾಜಾಲವಾಗಿ ಬರೆಯಬಲ್ಲ ಶಕ್ತಿ ಅವರಿಗೆ ವಶವಾಗಿತ್ತು. ಕೆಲವು ಲೇಖನಗ್ರಂಥಗಳನ್ನು ಪ್ರಕಟಿಸಿ ಹಲವರ ಮೆಚ್ಚುಗೆಯನ್ನು ಪಡೆದಿದ್ದಾರೆ.

ಬೇರೆ ಜನರೂ ಇವರ ಲೇಖನಗಳನ್ನು ತಮ್ಮ ಹೆಸರಿಗೆ ಜಮಾಮಾಡಿಕೊಂಡು ಕೀರ್ತಿ ಸಂಪಾದಿಸಿರಬಹುದು. ಯಾಮುನಾಚಾರ್ಯರು ನಿರ್ಲಿಪ್ತರಾದ್ದರಿಂದ, ನಿರಹಂಕಾರಿ ವ್ಯಕ್ತಿಯಾದದ್ದರಿಂದ, ಕೀರ್ತಿಕಾಮಿಯಲ್ಲದ್ದರಿಂದ ಆ ಕಡೆಗೆ ಅವರ ಗಮನ ಹರಿದಂತೆ ತೋರುವುದಿಲ್ಲ. ಆದರೆ ಅವರನ್ನು ತೀರ ಹತ್ತಿರದಿಂದ ಬಲ್ಲ ಜನ ಅವರ ಲೇಖನ ಗ್ರಂಥಗಳು ಅವರ ವಿದ್ವತ್ಪ್ರತಿಭೆಗಳಿಗೆ ಸಾಟಿಇಲ್ಲವೆಂದೂ, ಅವರ ಗ್ರಂಥಗಳಿಂದ ಮುಂದಿನ ಪೀಳಿಗೆಯ ಜನ ಕಲಿಯಬೇಕಾದ್ದು ಬಹಳವಿತ್ತೆಂದೂ ನಿರೀಕ್ಷಿಸಿಕೊಂಡಿದ್ದರೆ ತಪ್ಪಲ್ಲ. ಆದರೂ ಚಿಂತೆಯಿಲ್ಲ; ಏಕೆಂದರೆ ನಮ್ಮಲ್ಲಿ ಬರಹಗಾರರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ; ಯಾಮುನಾಚಾರ್ಯರಂಥ ನಿಷ್ಕಳಂಕ ಸುನಿರ್ಮಲ ವ್ಯಕ್ತಿತ್ವವನ್ನುಳ್ಳ ಮಹಿಮವಂತರು ಮಾತ್ರ ದೊರೆಯುವುದು ದುರ್ಲಭ.

# ಯಾಮುನಾಚಾರ್ಯರ ವ್ಯಕ್ತಿತ್ವ ಮತ್ತು ಕಾರ್ಯಕ್ಷೇತ್ರ

## ಗೊರೂರು ರಾಮಸ್ವಾಮಿ ಅಯ್ಯಂಗಾರ್

ಪ್ರೊಫೆಸರ್ ಎಂ. ಯಾಮುನಾಚಾರ್ಯರು, ನಮ್ಮ ನಡುವೆ ಅನೇಕ ಕಾಲ ಪ್ರಾಧ್ಯಾಪಕರಾಗಿ, ಲೇಖಕರಾಗಿ, ಸನ್ಮಿತ್ರರಾಗಿ, ವೇದಾಂತಿಯಾಗಿ, ಭಗವದ್‌ಭಕ್ತರಾಗಿ ಶ್ರೋತ್ರಿಯರಾಗಿ ಬಾಳಿ, ನಾವು ನಿರೀಕ್ಷಿಸಿದುದಕ್ಕಿಂತ ಮುಂಚೆ ನಮ್ಮನ್ನಗಲಿದರು. ಆ ಅರಕೆಯನ್ನು ತುಂಬುವುದು ನಮ್ಮಲ್ಲಿ ಕೆಲವರಿಗಂತು ಅಸಾಧ್ಯವೇ ಸರಿ. ನನ್ನ ಮಿತ್ರರಾದ ಶ್ರೀ ಕೆ. ಎಸ್. ನಾರಾಯಣಸ್ವಾಮಿಯವರು "ನಮಗೆಲ್ಲ ಆಶ್ರಯರಾಗಿದ್ದ ಒಂದು ದೊಡ್ಡ ವೃಕ್ಷ ಮುರಿದುಬಿದ್ದು, ನನಗಂತೂ ಏನೂ ತೋಚದಂತೆ ಆಗಿದೆ" ಎಂದು ಬರೆದರು. ಶ್ರೀಯಾಮುನಾಚಾರ್ಯರ ನಿಕಟವರ್ತಿಗಳಾಗಿ ಸಹೋದ್ಯೋಗಿಗಳಾಗಿ, ಅವರನ್ನು ಸಂಸಾರದ ಹಿರಿಯನಂತೆ ಭಾವಿಸಿ, ಅವರ ಜೊತೆ ಕಾರ್ಯದಲ್ಲಿಯೂ ಮತ್ತು ನಿತ್ಯಜೀವನದಲ್ಲಿಯೂ ಅವರ ಸಲಹೆಯನ್ನೂ ಮಾರ್ಗದರ್ಶನವನ್ನೂ ಸಹಾನುಭೂತಿಯನ್ನೂ ಪಡೆದವರೆಲ್ಲರಿಗೂ ಇದೇ ಭಾವನೆಯುಂಟಾಗಿದೆ. ಈ ಭಾವನೆ ನನ್ನ ಜೀವಮಾನಪರ್ಯಂತ ಹೀಗೆಯೇ ಇರುವುದು.

ಶ್ರೀ ಯಾಮುನಾಚಾರ್ಯರು ಸರ್ವರೀತಿಯಿಂದಲೂ ಆದರ್ಶವಾದ ಬಾಳನ್ನು ಬಾಳಿದರು. ಪ್ರಯತ್ನವಿಲ್ಲದೆ ಸ್ವಾಭಾವಿಕವಾಗಿಯೇ ಅವರು ಸರಳ ಜೀವನ ಮತ್ತು ಉನ್ನತ ಆಲೋಚನೆಗೆ ಉದಾಹರಣೆಯಾಗಿದ್ದರು. 30 ವರುಷಗಳ ಕಾಲ ಅಧ್ಯಾಪಕರಾಗಿ ಶಿಷ್ಯರಿಂದ ಒಂದೇ ಸಮನಾದ ಗೌರವವನ್ನೂ ಮನ್ನಣೆಯನ್ನೂ ಪಡೆದ ಅವರನ್ನು, ಜೀವನದ ವಿವಿಧ ರಂಗಗಳಲ್ಲಿ ಉನ್ನತ ಜವಾಬ್ದಾರಿಯನ್ನು ವಹಿಸಿ ಜೀವಿಸುತ್ತಿರುವ ಅವರ ಶಿಷ್ಯರು ಇಂದಿಗೂ ಕೃತಜ್ಞತೆಯಿಂದ ನೆನೆಯುತ್ತಾರೆ. ಅವರು ತರಗತಿಯಲ್ಲಿ ಯಾವಾಗಲೂ ಗಾಂಭೀರ್ಯವನ್ನು ಬಿಟ್ಟು ನಡೆದುದೇ ಇಲ್ಲ. ಅವರ ಪಾಠಕ್ರಮ ತುಂಬ ಆಕರ್ಷಣೀಯವಾಗಿ ವಿದ್ಯಾರ್ಥಿಗಳಿಗೆಲ್ಲ ಅವರಲ್ಲಿ ಅಪಾರವಾದ ಗೌರವವಿದ್ದುದರಿಂದ, ಅವರ ತರಗತಿಯಲ್ಲಿ ಯಾವಾಗಲೂ ನಿಶ್ಶಬ್ದವೂ ಮೌನವೂ ಶಾಂತಿಯೂ ಶಿಸ್ತೂ ಇರುತ್ತಿದ್ದಿತು. ಅವರು ನಿಜವಾದ ಅರ್ಥದಲ್ಲಿ ಗುರುಗಳಾಗಿದ್ದರು.

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ
ಗುರುಸ್ಸಾಕ್ಷಾತ್ ಪರಂಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ

ಎಂಬ ಉಕ್ತಿಗೆ ಅನುಗುಣವಾಗಿ ಗುರುಗಳಾಗಿದ್ದವರು ಅವರು. ಸ್ವಂತ ಇಚ್ಛೆಯಿಂದ ಉಪಾಧ್ಯಾಯ ವೃತ್ತಿಯನ್ನು ಆರಿಸಿಕೊಂಡು ಇತರ ಕೆಲಸಗಳಿಗಿಂತ ಇದರ ಮೂಲಕ ಜನಸೇವೆ ಹೆಚ್ಚು ಸಾಧ್ಯವೆಂದು ನಂಬಿ ಆದರ್ಶ ಗುರುವಾಗಬೇಕೆಂದು ಯಾವಾಗಲೂ ಹಂಬಲಿಸಿ ಅದರಂತೆ ಕಾರ್ಯ ಮಾಡಿದವರು ಅವರು. "ಗುರುವಿನ ಸ್ಥಾನ ದೊಡ್ಡದು. ಅದನ್ನು ಅವನು ಉಳಿಸಿಕೊಳ್ಳಬೇಕು: ಉಳಿಸಿಕೊಳ್ಳಬಲ್ಲನು. ಶಿಷ್ಯನಿಗೆ ಒಳ್ಳೆಯದನ್ನು ಮಾಡುವುದೇ ಗುರುವಿನ ಆದ್ಯಕರ್ತವ್ಯ"

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ

ಅಜ್ಞಾನವೆಂಬ ರೋಗದಿಂದ ಕುರುಡಾದವನ ಕಣ್ಣುಗಳನ್ನು ಜ್ಞಾನದ ಅಂಜನವನ್ನು ಹಚ್ಚಿ ತೆರೆಯುವವನೇ ನಿಜವಾದ ಗುರು. ಯಾಮುನಾಚಾರ್ಯರು ಇಂತಹ ಗುರುಗಳಾಗಿದ್ದರು. ಅವರು ಯಾವಾಗಲೂ, ವಿದ್ಯಾರ್ಥಿಗಳು ಯುವಕರು ಇವರ ಹಿತಚಿಂತನೆಯನ್ನು ಮಾಡುತ್ತಿದ್ದರು. ಕೆಲವು ವಿದ್ಯಾರ್ಥಿಗಳು ತಮ್ಮ ಗುರುಗಳನ್ನು ಮರೆತಿರಬಹುದು. ಆದರೆ ಯಾಮುನಾಚಾರ್ಯರು ಮಾತ್ರ ತಮ್ಮ ಯಾವ ಶಿಷ್ಯನನ್ನೂ ಮರೆತಿರಲಿಲ್ಲ. ಅವರು ತಮ್ಮ ಪ್ರತಿಯೊಬ್ಬ ವಿದ್ಯಾರ್ಥಿಯಲ್ಲಿಯೂ ವಿಶೇಷವಾದ ಶ್ರದ್ಧೆಯನ್ನೂ ಪ್ರೀತಿವಾತ್ಸಲ್ಯವನ್ನೂ ಇಟ್ಟು ಮನಮುಟ್ಟುವಂತೆ ಬೋಧಿಸುತ್ತಿದ್ದರು. "ಗುರವಃ ಬಹಳಸ್ಸಂತಿ, ಶಿಷ್ಯವಿತ್ತಾಪಹಾರಕಃ: ಗುರುವಃ ವಿರಳಸ್ಸಂತಿ ಶಿಷ್ಯ ಚಿತ್ತಾಪಹಾರಕಃ" ಯಾಮುನಾಚಾರ್ಯರು ಎರಡನೆಯ ಪಂಗಡದ ಗುರುಗಳಾಗಿದ್ದರು. ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಕಾಲೇಜಿನ ಮುಖ್ಯಸ್ಥರೂ ಆಗಿ ಎಲ್ಲ ಜವಾಬ್ದಾರಿಗಳನ್ನೂ ಅತ್ಯಂತ ದಕ್ಷತೆಯಿಂದಲೂ ಶ್ರದ್ಧೆಯಿಂದಲೂ ಅವರು ನಿರ್ವಹಿಸಿದ್ದರು.

ಅವರು ನಿವೃತ್ತರಾದಮೇಲೆ ಸಹ ಆ ಸಂಘ ಈ ಸಂಘ ಎಂದುಕೊಂಡು ಮಹಾರಾಜ ಕಾಲೇಜಿನೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದರು. ಮೈಸೂರಿನ ಅನೇಕ ಸಾರ್ವಜನಿಕ ಕ್ಷೇತ್ರಗಳಲ್ಲಿ ಅವರು ಸೇವೆ ಸಲ್ಲಿಸುತ್ತಿದ್ದರು. ಅವರು ಅನೇಕ ವಿಷಯಗಳಲ್ಲಿ ನಿಷ್ಣಾತರಾಗಿದ್ದುದರಿಂದ, ಯಾವ ವೇದಿಕೆಯಮೇಲೆ ನಿಂತರೂ, ತಮ್ಮ ವಿದ್ವತ್ತು ಮತ್ತು ಅನುಭವವಾಣಿಯಿಂದ ಜನತೆಯ ಮನಸ್ಸನ್ನು ಆಕರ್ಷಿಸುತ್ತಿದ್ದರು. ಅವರು ಅನೇಕ ಸಂಘಸಂಸ್ಥೆಗಳಿಗೆ ಅಧ್ಯಕ್ಷರಾಗಿದ್ದುದಲ್ಲದೆ, ಅವರೊಬ್ಬರೇ ಅನೇಕ ಸಂಘಸಂಸ್ಥೆಗಳಂತೆಯೂ, ಸಂಘಸಂಸ್ಥೆಗಳಾಗಿಯೂ ಕೆಲಸ ಮಾಡುತ್ತಿದ್ದರು. ಗಾಂಧೀ

ಸ್ಮಾರಕ ನಿಧಿಯುವನು ಕೈಕೊಂಡ "ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆ"ಗೆ ಶ್ರೀ ಯಾಮುನಾಚಾರ್ಯರು ಮುಖ್ಯಸಂಪಾದಕರಾಗಿ ದೊರೆತುದು ಎಲ್ಲ ದೃಷ್ಟಿಯಿಂದಲೂ ಒಂದು ಸುಯೋಗವೇ ಆಯಿತು. ನಮ್ಮಲ್ಲಿ ಕೆಲವರಿಗೆ ಆಗ ಅವರ ಸಹೋದ್ಯೋಗಿಗಳಾಗಿ ಕೆಲಸ ಮಾಡುವುದು ಒಂದು ಆದರ್ಶ ಸಾಧನೆಯೂ ಶಿಕ್ಷಣವೂ ಮಹತ್ ಸಾನ್ನಿಧ್ಯದ ನಿಕಟ ಪರಿಚಯವೂ ಆಯಿತು.

"ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆ" ಒಂದು ಮಹತ್‌ಸಾಧನೆಯೇ ಹೌದು. ಅದೊಂದು ಬೃಹತ್‌ಸಾಧನೆಯೂ ಹೌದು. ಶ್ರೀ ಯಾಮುನಾಚಾರ್ಯರಂತಹ ಸಂಪಾದಕರು ಸಿಕ್ಕಿದುದು ಅದಕ್ಕೆ ಒಂದು ಆಸ್ತಿ. ಯಾಮುನಾಚಾರ್ಯರು ಸರ್ವ ವಿಧದಿಂದಲೂ ಅದರ ಮುಖ್ಯ ಸಂಪಾದಕರಾಗಲು ಅರ್ಹರಾಗಿದ್ದರು. ಅವರು ಬಾಲ್ಯದಿಂದಲೂ ಗಾಂಧೀಜಿಯ ತತ್ವಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವರು; ಖಾದಿಧಾರಿಗಳು; ಸತ್ಯ ಅಹಿಂಸೆಯ ಆರಾಧಕರು, ಪಾಲಕರು ಮತ್ತು ಸಾಧಕರು. ಗಾಂಧೀಗ್ರಂಥಮಾಲೆಯ ಸಂಪಾದನ ಕಾರ್ಯವನ್ನು ಅವರು ತುಂಬ ಶ್ರದ್ಧೆ ಆಸಕ್ತಿ ಪ್ರೀತಿಯಿಂದ ನಿರ್ವಹಿಸಿದರು. ಅದು ಅವರಿಗೆ ತುಂಬ ಇಷ್ಟವಾದ ಕಾರ್ಯವಾಯಿತು. ನಿಯತವೇಳೆ, ನಿಯತವೆಚ್ಚದಲ್ಲಿ ಅವರು ಆ ಕಾರ್ಯವನ್ನು ಪೂರೈಸಿದರು. ಸಂಪಾದಕ ಮಂಡಲಿ ಮತ್ತು ಕಾರ್ಯನಿರ್ವಾಹಕ ಸಮಿತಿಯಲ್ಲಿ ನಾವೆಲ್ಲ ಇದ್ದರೂ ಸಹ, ಕಾರ್ಯ ಸಾಧನೆ ಹೇಗೆ ಹೇಗೆ ಆಗಬೇಕೆಂದು ಸೂಚಿಸಿ ಅದರಂತೆ ಅದನ್ನು ನಿರ್ವಹಿಸುವ ಹೊಣೆ, ಮುಖ್ಯ ಸಂಪಾದಕರದೇ ಆಗಿತ್ತು.

ಗಾಂಧೀಜಿಯವರ ಬರವಣಿಗೆಗಳು ಸುಮಾರು ಐವತ್ತುಸಾವಿರ ಪುಟಗಳು ಇವೆ. ಅವುಗಳೆಲ್ಲವೂ ಸಹ ಉಪಯುಕ್ತವೂ, ಆವಶ್ಯಕವೂ, ನಮ್ಮ ದೇಶೀಯರಿಗೆ ಸದಾ ಮಾರ್ಗದರ್ಶನ ನೀಡುವುವೂ ಆಗಿವೆ. ಆ ಬರವಣಿಗೆಗಳನ್ನು ಗಾಂಧೀಜಿ ಗ್ರಂಥಗಳ ರೂಪದಲ್ಲಿ ಬರೆಯಲಿಲ್ಲ. ಬಹು ಭಾಗವನ್ನು ತಮ್ಮ ವಾರಪತ್ರಿಕೆಗಳಲ್ಲಿ, ಅವರು ಅವುಗಳನ್ನು ವಾರವಾರವೂ ಆವಶ್ಯಕತೆ, ಸಂದರ್ಭ ಒದಗಿದಾಗ ಬರೆಯುತ್ತ ಹೋದರು. ಭಾರತೀಯರ ಕಲ್ಯಾಣಕ್ಕೆ ಸಾಧಕವಾದ ಅನೇಕ ಪ್ರಶ್ನೆಗಳನ್ನು ಗಾಂಧೀಜಿ, ತಮ್ಮ ಲೇಖನಗಳಲ್ಲಿ ಚರ್ಚಿಸಿದ್ದಾರೆ. ಜಗತ್ತಿನ ಹಿತಸಾಧನೆಯ ಗುರಿಯಿಂದ ಬರೆದ ಅನೇಕ ಲೇಖನಗಳೂ ಉಂಟು. ವಾರವಾರಕ್ಕೆ ಪತ್ರಿಕೆಗಳಲ್ಲಿ ಲೇಖನಗಳಾಗಿ ಬರೆದುದರಿಂದ ಅವುಗಳಲ್ಲಿ ಕೆಲವೊಂದು ಪುನರುಕ್ತಿಗಳೂ ಇವೆ; ಒಂದೇ ವಿಷಯದ ಮೇಲೆ ಅನೇಕ ಲೇಖನಗಳೂ ಇವೆ. ಇವುಗಳನ್ನೆಲ್ಲ ಕ್ರೋಢೀಕರಿಸಿ ಸುಮಾರು ಹತ್ತುಸಾವಿರ ಪುಟಗಳೊಳಗೆ ಇಪ್ಪತ್ತು ಸಂಪುಟಗಳಲ್ಲಿ ಗಾಂಧೀಜಿಯ ಬರವಣಿಗೆಯನ್ನೆಲ್ಲ ಅಡಕಮಾಡಿ ಪ್ರಕಟಿಸುವುದು ಮುಖ್ಯ ಸಂಪಾದಕನ ಕೆಲಸವಾಗಿತ್ತು.

ಈ ಕಾರ್ಯಕ್ಕಾಗಿ ಶ್ರೀ ಯಾಮುನಾಚಾರ್ಯರು ಮೊದಲು ಗಾಂಧೀಜಿಯ ಬರವಣಿಗೆಯನ್ನೆಲ್ಲ ಒಂದು ಪಂಕ್ತಿಯನ್ನೂ ಬಿಡದೆ ಓದಿದರು. ಅವುಗಳನ್ನೆಲ್ಲ ಬೇರೆ

ಬೇರೆ ಶೀರ್ಷಿಕೆಯಲ್ಲಿ ಇಪ್ಪತ್ತು ಸಂಪುಟಗಳಲ್ಲಿ ಅಳವಡಿಸಿದರು. ಪ್ರಾರಂಭದ 6 ತಿಂಗಳು ಮುಖ್ಯ ಸಂಪಾದಕರಿಗೆ ಇದೇ ಕೆಲಸವಾಗಿ ಹೋಯಿತು. ಹೀಗೆ 50 ಸಾವಿರ ಪುಟಗಳನ್ನು 10 ಸಾವಿರ ಪುಟಗಳಿಗೆ ಇಳಿಸುವುದು ಮುಖ್ಯ ಸಂಪಾದಕರಿಗೆ ಸುಲಭವಾದ ಕೆಲಸವಾಗಿರಲಿಲ್ಲ. ಗಾಂಧೀಜಿಯ ಬರವಣಿಗೆ ಎಂದರೆ ತುಂಬ ಕರಾರುವಾಕ್ಕು; ಮಾತು ಸಂಕ್ಷೇಪ; ಅದರಲ್ಲಿ ಬಿಟ್ಟುಬಿಡುವ ಅಂಶವೇ ಇಲ್ಲ. ಆದರೆ ಒಂದೇ ಅಭಿಪ್ರಾಯ, ಬೇರೆ ಬೇರೆ ಸಂದರ್ಭದಲ್ಲಿ ಬರುವುದರಿಂದ, ಒಂದೆಡೆ ಇಟ್ಟುಕೊಂಡು, ಉಳಿದುವನ್ನು ಬಿಡಬಹುದು. ಗಾಂಧೀಜಿಯ ಯಾವ ಬರವಣಿಗೆಯನ್ನೂ ಬಿಡಕೂಡದೆಂಬುದು ಸಂಪಾದಕರಿಗೆ ಕಟ್ಟಪ್ಪಣೆಯಾಗಿತ್ತು. ಆಗ ಯಾಮುನಾಚಾರ್ಯರು ದಿವಸಕ್ಕೆ 12–14 ಗಂಟೆಗಳ ಕೆಲಸ ಮಾಡುತ್ತಿದ್ದರು. "ನಾನು ಉಪಾಧ್ಯಾಯನಾಗಿದ್ದಾಗ ಇಷ್ಟು ಗಂಟೆ ಯಾವಾಗಲೂ ಕೆಲಸ ಮಾಡಲಿಲ್ಲ" ಎಂದು ಅವರು ಹೇಳುತ್ತಿದ್ದರು. ಹೀಗೆ ಮೊದಲು ಸಂಪುಟಗಳು ಇಂಗ್ಲಿಷಿನಲ್ಲಿ ಟೈಪ್‌ರೈಟರ್‌ನಲ್ಲಿ ಸಿದ್ಧವಾದುವು. ಅನಂತರ ಅವುಗಳನ್ನು ಸರಿಯಾದ ಭಾಷಾಂತರಕಾರರಿಗೆ ವಹಿಸುತ್ತಿದ್ದರು. ಆ ಟೈಪ್‌ರಿಟನ್ ಪ್ರತಿಗಳು ಎಷ್ಟರಮಟ್ಟಿಗೆ ಗಾಂಧೀಜಿಯ ಬರವಣಿಗೆಗಳ ಸಾರಸರ್ವಸ್ವವಾಗಿದ್ದುವೆಂದರೆ, ಇತರ ಭಾಷೆಗಳ ಗಾಂಧೀಗ್ರಂಥಮಾಲಾ ಸಂಪಾದಕರು ತಮ್ಮ ಸಮಗ್ರ ಗಾಂಧೀ ಗ್ರಂಥಮಾಲೆಗೆ ಅವುಗಳನ್ನೇ ಉಪಯೋಗಿಸಿಕೊಳ್ಳಲು ಪ್ರತಿಗಳನ್ನು ತರಿಸಿಕೊಂಡರು. ಗಾಂಧೀಜಿಯ ಗ್ರಂಥಗಳ ಪ್ರಕಾಶಕರಾದ ನವಜೀವನ ಮುದ್ರಣಾಲಯದವರೂ ಸಹ 'ಇದು ಗಾಂಧೀಜಿಯ ಸಮಸ್ತ ಬರವಣಿಗೆಗಳನ್ನೂ ಒಳಗೊಂಡಿದೆ. ಆದರೂ ಇದು ಇಪ್ಪತ್ತೇ ಸಂಪುಟಗಳಲ್ಲಿ ಸಂಪೂರ್ಣವಾಗಿದೆ. ನಾವು ಇದನ್ನೇ, ಒಂದು ಮುದ್ರಣ, ಯಾಕೆ ಮಾಡಬಾರದೆಂದು ಯೋಚಿಸುತ್ತಿದ್ದೇವೆ' ಎಂದು ತಿಳಿಸಿದರು.

ಯಾಮುನಾಚಾರ್ಯರೂ, ತಾವು ಹೇಗೆ ಯಮನಂತೆ ಕೆಲಸಮಾಡುತ್ತಿದ್ದರೋ ಹಾಗೆಯೇ ಇತರರಿಂದ—ಮುಖ್ಯವಾಗಿ ಭಾಷಾಂತರಕಾರರಿಂದ ಮತ್ತೂ ಮುದ್ರಣಕಾರರಿಂದ—ಕೆಲಸ ಮಾಡಿಸುತ್ತಿದ್ದರು. ಭಾಷಾಂತರಕಾರರು ನಿಗದಿಯಾದ ಕಾಲಕ್ಕೆ ಸರಿಯಾಗಿ ತಮ್ಮ ಹಸ್ತಪ್ರತಿಗಳನ್ನು ಕೊಡಬೇಕಾಗಿತ್ತು. ಈ ವಿಷಯದಲ್ಲಿ ಯಾರಿಗೂ ರಿಯಾಯ್ತಿಇಲ್ಲ. ಸ್ವತಃ ಗಾಂಧಿಸ್ಮಾರಕ ನಿಧಿಯ ಅಧ್ಯಕ್ಷರಾದ ಶ್ರೀ ರಾ. ರಾ. ದಿವಾಕರ್ ಸಹ ತಮ್ಮ ಭಾಗದ ಪ್ರಸ್ತಾವನೆ, ಮುನ್ನುಡಿಗಳನ್ನು ಗಡುವಿಗೆ ಒಂದು ದಿನ ಮುಂಚಿತವಾಗಿಯೇ ಕೊಟ್ಟು ಬಿಡುತ್ತಿದ್ದರು. ಈ ಲೇಖಕನೇ ವಹಿಸಿಕೊಂಡ ಒಂದು ಕಾರ್ಯವನ್ನು, ಸಕಾಲದಲ್ಲಿ ಕೊಡುವುದಿಲ್ಲವೆಂದು ಯಾಮುನಾಚಾರ್ಯರಿಗೆ ಸಂಶಯ ಬಂದಾಗ, ಅವರು ನನ್ನನ್ನು ಮೈಸೂರಿನ ಗಾಂಧಿಗ್ರಂಥಮಾಲೆಯ ಕಛೇರಿಗೆ ಬರಮಾಡಿಕೊಂಡು, ದಿನಕ್ಕೆ ಇಷ್ಟು ಪುಟ ಕೊಡಬೇಕೆಂದು ನಿಗದಿಮಾಡಿ ಬರೆಯಲು ಹಚ್ಚಿದರು. ನನ್ನ ಕೆಲಸ ಮುಗಿಯುವವರೆಗೆ ತಾವೂ ನನ್ನ ಜೊತೆಯಲ್ಲಿಯೇ ಕುಳಿತಿರುತ್ತಿದ್ದರು.

ಯಾಮುನಾಚಾರ್ಯರು ಕೆಲಸವನ್ನು ಬಹಳ ಕರಾರುವಾಕು ಮತ್ತು ಅಚ್ಚು ಕಟ್ಟಾಗಿ ನಡೆಸುತ್ತಿದ್ದರು. ಅತಿಯಾದ ಆತುರ, ಉಡಾಫೆ, ದಾಡಾಬಂದು, ಸಂತೆ ಹೊತ್ತಿಗೆ ಮೂರುಮೊಳ ಇವ್ಯಾವೂ ಅವರಲ್ಲಿ ನಡೆಯುತ್ತಿರಲಿಲ್ಲ. ಪ್ರತಿಯೊಬ್ಬ ಭಾಷಾಂತರಕಾರನ ಬರವಣಿಗೆಯನ್ನೂ ಅವರು ಎಚ್ಚರಿಕೆಯಿಂದ ಓದುತ್ತಿದ್ದರು. ಅರ್ಥ ಸ್ಪಷ್ಟವಾಗಿ ಬಂದಿದೆಯೆ ? ಅನುವಾದದಲ್ಲಿ ಜೀವವಿದೆಯೆ ? ಓದಿಸಿಕೊಳ್ಳುತ್ತದೆಯೆ ? ಎಲ್ಲವನ್ನೂ ಅವರು ನೋಡುತ್ತಿದ್ದರು. ಅವರು ಸಂಸ್ಕೃತ ಇಂಗ್ಲಿಷು ಕನ್ನಡ ಹಿಂದಿ ತಮಿಳು ತೆಲುಗು ಎಲ್ಲ ಜ್ಞಾನವನ್ನೂ ಉಪಯೋಗಿಸಿಕೊಂಡು ಅನುವಾದವನ್ನೂ ನಿರ್ದುಷ್ಟವಾಗಿ ಮಾಡುತ್ತಿದ್ದರು- ಪೂರ್ಣತೃಪ್ತಿಯಾಗುವ ಹೊರತು ಯಾವ ಪದವನ್ನೂ ಅಂಗೀಕರಿಸುತ್ತಿರಲಿಲ್ಲ. ಅವರು ಅತ್ಯಂತ ಸರಳರೂ, ಸುಜನರೂ ನಿಗರ್ವಿಗಳೂ ಆಗಿದ್ದುದರಿಂದ ಯಾವ ಭಾಷಾಂತರಕಾರರಿಗೂ, ತಮ್ಮ ಪದಕ್ಕೆ ಬದಲಾಗಿ ಹೆಚ್ಚು ಸಮಂಜಸವಾದ ಪದವನ್ನು ಯಾಮುನಾಚಾರ್ಯರು ಸೂಚಿಸಿದರೆ, ಅದನ್ನು ಅಂಗೀಕರಿಸುವುದು ಪ್ರತಿಷ್ಠೆಗೆ ಕುಂದು ಎಂಬ ಭಾವನೆ ಬರುತ್ತಿರಲಿಲ್ಲ. ಯಾಮುನಾಚಾರ್ಯರು ತಮ್ಮ ಪ್ರತಿಷ್ಠೆಯನ್ನೂ ಹೆಚ್ಚಿಸಿಕೊಳ್ಳಲು ಹಾಗೆ ಮಾಡಿದ್ದರೆ ಯಾವ ಭಾಷಾಂತರಕಾರರೂ ಸಹಿಸುತ್ತಿರಲಿಲ್ಲ. ಆದರೆ ಯಾಮುನಾಚಾರ್ಯರಿಗೆ ಅವರು ಅಷ್ಟು ವಿದ್ವಾಂಸರೂ ಸಜ್ಜನರೂ ಆದರೂ ಸ್ವಪ್ರತಿಷ್ಠೆ ಎಂಬುದೇ ಇರಲಿಲ್ಲ. ಗ್ರಂಥಮಾಲೆಯ ಪ್ರಥಮ ಸಂಪುಟಗಳನ್ನು ರಾಷ್ಟ್ರಪತಿ ರಾಜೇಂದ್ರ ಪ್ರಸಾದ್‌ರು ಬೆಂಗಳೂರು ಟೌನ್‌ಹಾಲ್‌ನಲ್ಲಿ ಅದಕ್ಕಾಗಿಯೇ ಏರ್ಪಡಿಸಿದ್ದ ಸರಳ ಸಮಾರಂಭದಲ್ಲಿ ಬಿಡುಗಡೆ ಮಾಡುತ್ತಾ " ಸಂಪಾದಕಮಂಡಲಿ ಕೆಲಸಮಾಡಲು ಪ್ರಾರಂಭಿಸಿದ ಬಹಳ ಸ್ವಲ್ಪ ಕಾಲದೊಳಗೆ ಗ್ರಂಥಗಳು ಪ್ರಕಟವಾಗಿ ಬಂದಿವೆ. ಬಹಳ ಬೇಗ ಗ್ರಂಥಮಾಲೆಯ ಇತರ ಸಂಪುಟಗಳೆಲ್ಲ ಪ್ರಕಟವಾಗುವುದರಲ್ಲಿ ನನಗೆ ಸಂದೇಹವಿಲ್ಲ " ಎಂದು ಹೇಳಿದರು.

ಯಾಮುನಾಚಾರ್ಯರು ತಮ್ಮ ಕೆಲಸವನ್ನು ಎಷ್ಟು ಪ್ರಾಮಾಣಿಕರಾಗಿ ಮಾಡುತ್ತಿದ್ದರೆಂಬುದಕ್ಕೆ ಒಂದು ಉದಾಹರಣೆಯನ್ನು ಹೇಳಬಹುದು : 1946ನೆಯ ಇಸವಿಯಲ್ಲಿ ಗಾಂಧೀಜಿ, ದಕ್ಷಿಣ ಭಾರತ ಹಿಂದೂಸ್ಥಾನಿ ಸಭೆಯ ರಜತೋತ್ಸವಕ್ಕಾಗಿ ಮದರಾಸಿಗೆ ಬಂದರು. ಆ ಪ್ರವಾಸದಲ್ಲಿ ಅವರನ್ನು ಅನುಸರಿಸುವ ಸೌಭಾಗ್ಯ ಈ ಲೇಖಕನಿಗೂ ಉಂಟಾಗಿತ್ತು. ಆಗ ರೈಟ್‌ಆನರಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳು ರೋಗದಿಂದ ಹಾಸಿಗೆ ಹಿಡಿದಿದ್ದರು. ಗಾಂಧೀಜಿ, ಶಾಸ್ತ್ರಿಗಳನ್ನು ನೋಡಲು ಅವರ ಮನೆಗೇ ಹೋಗಿದ್ದರು. ಶಾಸ್ತ್ರಿಗಳು ರುಗ್ಣಶಯ್ಯೆಯಲ್ಲಿ ಮಲಗಿದ್ದುದರಿಂದ ಗಾಂಧೀಜಿ ಅವರೊಂದಿಗೆ ಹೆಚ್ಚಾಗಿ ಮಾತನಾಡಲಿಲ್ಲ. ಆಯಾಸವಾಗುವುದೆಂದು ಅವರಿಗೂ ಮಾತನಾಡಲು ಅವಕಾಶ ಕೊಡಲಿಲ್ಲ. ಆದರೂ ಅವರಿಬ್ಬರಿಗೂ ಸ್ವಲ್ಪ ಸಂಭಾಷಣೆ ನಡೆದಿತ್ತು. ಅನಂತರ ನಾನು ಆ ಸಂಭಾಷಣೆಯನ್ನು ಕುರಿತು ಒಂದು ಲೇಖನವನ್ನು ಪ್ರಕಟಿಸಿದೆ. ಕನ್ನಡ ಗಾಂಧೀ ಗ್ರಂಥಮಾಲೆಯಲ್ಲಿ ಗಾಂಧೀಜಿ ತಮ್ಮ

ಸಮಕಾಲೀನರೊಂದಿಗೆ ನಡೆಸಿದ ಸಂಭಾಷಣೆಯನ್ನು ಕುರಿತು, ಒಂದು ಗ್ರಂಥವನ್ನು ಪ್ರಕಟಿಸಬೇಕೆಂದು ಮುಖ್ಯ ಸಂಪಾದಕರು ನಿಶ್ಚಯಿಸಿದರು. ಅದರಲ್ಲಿ "ಗಾಂಧೀ ಶಾಸ್ತ್ರಿ ಸಂದರ್ಶನ ಸಂವಾದ" ಹಿಂದೆ ಅಚ್ಚಾಗಿದ್ದ ನನ್ನ ಲೇಖನವನ್ನು ಸೇರಿಸಬೇಕೆಂದು ನಿರ್ಣಯಿಸಿದರು. ಆದರೆ ಅದಕ್ಕೆ ಒಂದು ತಡೆ ಇತ್ತು. ಸಂಭಾಷಣೆಯನ್ನು ನಾನು ಪ್ರತ್ಯಕ್ಷವಾಗಿ ಕಿವಿಯಲ್ಲಿ ಕೇಳಿರಲಿಲ್ಲ. ಅಲ್ಲಿ ಒಳಕ್ಕೆ ಹೋಗಲು ನಮಗಾರಿಗೂ ಪ್ರವೇಶವಿದ್ದಿರಲಿಲ್ಲ. ಒಳಗೆ ಹೋಗಿ ಬಂದವರಿಂದ ನಾನು ಸಂಭಾಷಣೆಯ ವಿಷಯವನ್ನು ಕೇಳಿ ಲೇಖನ ಬರೆದಿದ್ದೆ. 'ಬರೆದವನಿಗೇ ಪ್ರತ್ಯಕ್ಷವಾಗಿಲ್ಲದ ಸಂಗತಿಯನ್ನು ತಾನು ಸಂಪಾದಕನಾಗಿ ಅಚ್ಚುಹಾಕಬಹುದೆ?' ಎಂಬ ಸಂಶಯ ಶ್ರೀ ಯಾಮುನಾಚಾರ್ಯರಿಗೆ ಹತ್ತಿತು. ಅವರು "ನೀವು ಸಹ ಆ ಸಂಭಾಷಣೆಯನ್ನು ಕಿವಿಯಲ್ಲಿ ಕೇಳಲಿಲ್ಲ. ಕೇಳಿದವರಿಂದ ಕೇಳಿದೆ ಅನ್ನುತ್ತೀರಿ. ನಿಮ್ಮ ಮಾತಿನಲ್ಲಿ ನನಗೆ ನಂಬಿಕೆಯುಂಟು. ಆದರೆ ಗಾಂಧೀ ಗ್ರಂಥದಲ್ಲಿ 'ನಾನು ಪ್ರತ್ಯಕ್ಷವಾಗಿ ನೋಡಿದೆ, ಕೇಳಿದೆ ಎಂದು ಹೇಳದವನ, ನಡೆದ ಸಂಗತಿಗೆ ಸಂಬಂಧಿಸಿದ ಲೇಖನವನ್ನು ಪ್ರಕಟಿಸುವುದು ಹೇಗೆ?' ಎಂದು ಸಂಶಯಕ್ಕೊಳಗಾದರು. ನಾನು "ಈ ಸಂಭಾಷಣೆ ಹೀಗೆ ನಡೆಯಿತೆಂಬುದು ನನಗೆ ಚೆನ್ನಾಗಿ ಖಾತರಿಯಾಗಿದೆ. ನನಗೆ ಹೇಳಿದವರು "ಇಂತಹವರು." ಅವರು ಆ ಕಾಲದಲ್ಲಿ ಅಲ್ಲಿದ್ದರು. ಅವರು ಗಾಂಧೀಜಿಯ ಅತ್ಯಂತ ನಿಕಟವರ್ತಿ ಎಂಬುದು ನಿಮಗೂ ಗೊತ್ತಿದೆ" ಎಂದೆ. ಆದರೂ ಯಾಮುನಾಚಾರ್ಯರು "ಗಾಂಧೀಜಿ ಇಂತಹ ಮಾತನ್ನು ಹೇಳಿದರು ಎಂದು ಹೇಳಬೇಕಾದರೆ ಅದನ್ನು ಪ್ರತ್ಯಕ್ಷವಾಗಿ ಕೇಳಿದವರು ಹೇಳಬೇಕು. ಅದಕ್ಕೆ ಬೇರೆ ಇನ್ನೇನಾದರೂ ಆಧಾರ ಬೇಕು" ಎಂದರು.

ಅನೇಕ ತಿಂಗಳು ಕಳೆದು, ಸಂಪಾದಕರ ಸಭೆ ಮತ್ತೆ ಸೇರಿದಾಗ ಯಾಮುನಾಚಾರ್ಯರು ನನ್ನೊಂದಿಗೆ "ನಿಮ್ಮ 'ಗಾಂಧೀ-ಶಾಸ್ತ್ರಿ ಸಂವಾದ' ಲೇಖನವನ್ನು ಗ್ರಂಥದಲ್ಲಿ ಸೇರಿಸಿದ್ದೇನೆ" ಎಂದರು. ನನಗೆ ಆಶ್ಚರ್ಯವೂ ಸಂತೋಷವೂ ಆಯಿತು. ನಾನು "ಅಷ್ಟು ಪ್ರಮಾಣಮಾಡಿ ಹೇಳಿದರೂ ಆಗುವುದಿಲ್ಲ ಎಂದಿರಿ. ಆಧಾರ ಬೇಕು ಎಂದಿರಿ. ಈಗ ನಿಮಗೆ ಯಾವ ಆಧಾರ ಸಿಕ್ಕಿತು, ಹದಿನೈದು ಹದಿನಾರು ವರುಷಗಳ ಹಿಂದೆ ನಡೆದ ಸಂಗತಿಗೆ?" ಎಂದು ಕೇಳಿದೆ. ಅವರು ನಗುತ್ತ "ಅದನ್ನೆಲ್ಲ ತಿಳಿದುಕೊಳ್ಳದಿದ್ದರೆ, ನಾನು ನಿಮ್ಮಗಳ ಕೈಯಲ್ಲಿ ಸಿಕ್ಕಿಕೊಂಡು ಮುಖ್ಯ ಸಂಪಾದಕನಾಗಿ ಕಳೆಯುವುದಕ್ಕಾಗುತ್ತದೆಯೇ? ಸಂಗತಿ ಮದರಾಸಿನಲ್ಲಿ ನಡೆದುದರಿಂದ ನಾನು ಹಿಂದು ಪತ್ರಿಕೆಯ ಆಫೀಸಿಗೆ ಬರೆದು ಕೇಳಿದೆ. ಅವರು ಆ ಕಾಲದ ತಮ್ಮ ಪತ್ರಿಕೆಯ ಹಳೆಯ ಸಂಚಿಕೆಗಳನ್ನು ಹುಡುಕಿ ನೋಡಿ ನೀವು ನಿಮ್ಮ ಲೇಖನದಲ್ಲಿ ಹೇಳಿರುವ ಅಂಶಗಳು ಹೆಚ್ಚುಕಡಿಮೆ ಸರಿಯಾಗಿವೆ ಎಂದು ಹೇಳಿದ್ದಾರೆ" ಎಂದರು.

ಶ್ರೀ ಯಾಮುನಾಚಾರ್ಯರ ಪರಿಚಯ ನಮಗೆ ಹೆಚ್ಚು ಹೆಚ್ಚು ನಿಕಟವಾದಂತೆ ಅವರ ಗುಣಗಳ ಔನ್ನತ್ಯವೂ ನಮಗೆ ಮನದಟ್ಟಾಗತೊಡಗಿತು. ಅವರಿಗೆ ಸ್ವಪ್ರತಿಷ್ಠೆ

ಎಂಬುದು ಇವರಲ್ಲೇ ಇಲ್ಲ. ಅವರ ವಿನಯವಂತೂ ಒಬ್ಬ ಭಕ್ತನಿಗೆ ಮಾತ್ರ ಸಾಧ್ಯ. ನಮ್ಮ ಸಂಪಾದಕ ಮಂಡಲಿಯ ಮತ್ತು ಆಫೀಸಿನ ಸಿಬ್ಬಂದಿಯನ್ನೆಲ್ಲ ಅವರು ತಮ್ಮ ಸಂಸಾರದವರಂತೆ ಕಂಡರು. ಯಾರನ್ನೂ ನೌಕರ, ಕೈಕೆಳಗಿನವನು ಎಂದು ಕಾಣು ವುದು ಅವರ ಸ್ವಭಾವಕ್ಕೆ ವಿರುದ್ಧವಾದುದು. ನಾವೆಲ್ಲರೂ ಒಂದು ಸಭೆಯ ದಿನವೂ ತಪ್ಪದೆ ಆ ಏಳು ಎಂಟು ವರುಷಗಳ ಕಾಲವೂ ಸಭಾಕಾರ್ಯವನ್ನು ಮುಗಿಸಿಕೊಂಡು ಅವರ ಮನೆಗೇ ಊಟಕ್ಕೆ ಹೋಗಿಬಿಡುತ್ತಿದ್ದೆವು. ಅವರೂ ಅವರ ಪತ್ನಿಯವರೂ ಪ್ರತಿ ಯೊಂದು ಸಭೆಯಿಂದ ನಾವು ಮನೆಗೆ ಹೋದಾಗಲೂ, ಆ ದಿನವೇ ಮನೆಗೆ ಮೊದಲ ಬಾರಿಗೆ ಬಂದಿರುವ ಹೊಸ ವ್ಯಕ್ತಿಯೇ ಎಂಬಂತೆ ಸಂಭ್ರಮದಿಂದಲೇ ನಮ್ಮನ್ನು ಆದರಿಸುತ್ತಿದ್ದರು. ಸಭೆಯಲ್ಲಿ ಎಷ್ಟೇ ಖಡಾಖಂಡಿತವಾಗಿ ಇಂತಿಂತಹ ಕಾರ್ಯ ಇಂತಿಂತಹ ಕಾಲಕ್ಕೇ ಆಗಬೇಕೆಂದು ದೃಢತೆಯ ಅಪ್ಪಣೆಯ ಧ್ವನಿಯಲ್ಲಿ ಹೇಳುತ್ತಿದ್ದ ವ್ಯಕ್ತಿ ಯಾಮುನಾಚಾರ್ಯರು, ಮನೆಯಲ್ಲಿ ಮಗುವಿಗಿಂತ ಸರಳವಾಗಿ ಬೀಗರನ್ನು ಉಪ ಚರಿಸುವಂತೆ ನಮ್ಮನ್ನೆಲ್ಲ ಉಪಚರಿಸುತ್ತಿದ್ದರು. ಒಂದು ಸಲ ನಾನು "ಮನೆಯಲ್ಲಿ ಸಾಹೇಬರು ಮೀಟಿಂಗಿನಲ್ಲಿರುವಷ್ಟು ಖಡಾ ಖಂಡಿತವಾಗಿಲ್ಲ. ನಾವು ನಿರಾಳವಾಗಿ ಉಸಿರುಬಿಡಬಹುದು ; ಬಹುಶಃ ಪತ್ನಿಯವರ ಪ್ರಭಾವವೇನೋ" ಎಂದು ವಿನೋದ ಮಾಡಿದುದುಂಟು. ಯಾಮುನಾಚಾರ್ಯರು ನಗುತ್ತ "ನೀವು ನಿಮ್ಮ ಮನೆಯಲ್ಲಿ ಹೇಗೋ, ನಾನು ನನ್ನ ಮನೆಯಲ್ಲಿ ಹಾಗೆ" ಎನ್ನುವರು. ಕೆಲವು ದಿನಗಳಲ್ಲಿಯಂತೂ ಮೀಟಿಂಗಿನಲ್ಲಿ ಕೆಲಸ ಹೆಚ್ಚಾಗಿದ್ದಾಗ ಯಾಮುನಾಚಾರ್ಯರು ನಮಗೆ ಮನೆಯಲ್ಲಿ ವಿಶ್ರಾಂತಿಗೆ ಸಹ ಅವಕಾಶಕೊಡದೆ, ಊಟವಾದ ಕೂಡಲೇ ಕಾಫಿಯನ್ನೋ ಚಹ ವನ್ನೋ ಕೊಟ್ಟು ಷಾಂಪಸಂದ್ ಗಾಡಿಯನ್ನೂ ಸಹ ತರಿಸಿ, ಮತ್ತೆ ಗ್ರಂಥಮಾಲೆಯ ಆಫೀಸಿಗೆ ಎಳೆತಂದು ಸಭೆಯ ಕಾರ್ಯ ಕಲಾಪಗಳನ್ನು ಪ್ರಾರಂಭಿಸುವರು. ಒಂದೆರಡು ಘಂಟೆ ಕೆಲಸ ಮಾಡಿದಮೇಲೆ ನಾವು (ಸದಸ್ಯರು) ಆಕಳಿಸುತ್ತಿರುವುದನ್ನು ನೋಡಿ "ಸ್ವಲ್ಪ ಕಾಫಿ ತರಿಸೋಣವೇ ?" ಎನ್ನುವರು. ಎಷ್ಟು ಸಲವಾದರೂ ಕಾಫಿ ಕುಡಿಯುವ ತಾಖತ್ತು ಅಲ್ಪಪ್ರಾಣಿಗೆ ಎಲ್ಲಿರುತ್ತೆ ? ನಮ್ಮ ರಾಮಚಂದ್ರ ವಡವಿಯವರು "ಬೇಡ ಬೇಡ. ಎಷ್ಟುಸಲ ಕಾಫಿ ? ಉಷ್ಣವಾಗುತ್ತೆ" ಎಂದುಬಿಡುತ್ತಿದ್ದರು. ಇವರಿಂದ ಪ್ರಯೋಜನವಿಲ್ಲವೆಂದು ಯಾಮುನಾಚಾರ್ಯರು, ಇಂತಹ ಪ್ರಯತ್ನಗಳಲ್ಲಿ ಯಾವಾ ಗಲೂ ಪ್ರೋತ್ಸಾಹಕನಾದ ನನ್ನ ಕಡೆ ನೋಡುವರು. ಯಾವಾಗಲೂ ಎದುರಿಗೆ ಬಂದು ದನ್ನೆಲ್ಲ ಪಡೆಯಲು ಸಿದ್ಧವಾಗಿರುವೆನೆಂದು ತೋರಿಸಿಕೊಳ್ಳಲು ನನಗೂ ಇಷ್ಟವಿಲ್ಲ. ಇಂತಹ ವಿಷಯದಲ್ಲಿ ಸಂಪದ್ಗಿರಿರಾಯರು ಯಾವಾಗಲೂ ಪ್ರೋತ್ಸಾಹ ಕೊಡುವವರು. ನಾನು ಸಂಪದ್ಗಿರಿರಾಯರತ್ತ ನೋಡುವೆ ; ಅವರು ಸಿದ್ದವನಹಳ್ಳಿ ಕೃಷ್ಣಶರ್ಮರನ್ನು ನೋಡುವುದು. ಕಾಫಿ ನಮಗೆಲ್ಲ ಬೇಕು. ಯಾಮುನಾಚಾರ್ಯರಿಗೂ ಬೇಕು. ಖಾದ್ರಿ ಶಾಮಣ್ಣ, ಪ್ರಾಣೇಶರಾವ್, ನಾರಾಯಣಮೂರ್ತಿ, ಪಟ್ಟಾಭಿರಾಮನ್ ಎಲ್ಲರೂ ತಮ್ಮ ಸಮ್ಮತಿಯನ್ನು ಸೂಚಿಸಲು, ತಲೆಯೆತ್ತಿ ನಾರಾಯಣಸ್ವಾಮಿಯವರನ್ನು

ನೋಡುವರು. ಧೂಮಪ್ರಿಯರಾದವರು ಇತರರ ಸೌಖ್ಯಕ್ಕೆ ಭಂಗತರುವವರಲ್ಲ. ಕಾಫಿ ತರಿಸಿದರೆ ಸ್ವಲ್ಪ ಮೂಸಿ ನೋಡುತ್ತಾರೆ. ಯಾಮುನಾಚಾರ್ಯರು ನಾರಾಯಣಸ್ವಾಮಿಗಳಿಗೆ "ಈಗ ಕಾಫಿಗೆ ಪೂರ್ಣಬಹುಮತ ಸಿಕ್ಕಲಿಲ್ಲ. ಮೊದಲು ಎಳನೀರು ತರಿಸಿ. ಬಿಸಿಲಿಗೆ ಅದೇ ಸರಿ. 4-4½ ಘಂಟೆಯ ವೇಳೆಗೆ ಬಿಸಿ ಕಾಫಿ-ಟಿಫನ್ ತರಿಸೋಣ" ಎನ್ನುತ್ತಿದ್ದರು. ಅಂದರೆ ಸಭೆ ಐದು ಘಂಟೆಯವರೆಗೆ, ಕಾರ್ಯಕ್ರಮದ ಪಟ್ಟಿ ಮುಗಿಯಲೇ ಬೇಕು ಎಂದು ಅರ್ಥ. ಗಾಂಧೀ ಗ್ರಂಥಮಾಲೆಯ ಅವಶ್ಯಕ ವೆಚ್ಚಗಳನ್ನು-ಅದರಲ್ಲಿಯೂ ಲೆಕ್ಕಪರಿಶೋಧಕರು ಒಪ್ಪುವುದನ್ನು ಮಾತ್ರ, ನಿಧಿಯವರು ಒದಗಿಸುತ್ತಿದ್ದುದರಿಂದ ಇಂತಹ ವೆಚ್ಚವೆಲ್ಲಾ ಮುಖ್ಯ ಸಂಪಾದಕರ ಮೇಲೆಯೇ ಬೀಳುತ್ತಿದ್ದಿತು. ಅದಾವುದೂ ಯಾಮುನಾಚಾರ್ಯರಿಗೆ ಲಕ್ಷ್ಯವೇ ಇರಲಿಲ್ಲ. ಅವರು "ಈ ನೆಪದಿಂದಲಾದರೂ ನಾವೆಲ್ಲ ಒಟ್ಟಾಗಿ ಸೇರುವ ಭಾಗ್ಯ ಲಭಿಸಿತಲ್ಲ. ಇದಕ್ಕೆ ಎಷ್ಟು ಬೆಲೆ ಕೊಟ್ಟರೂ ಅಲ್ಪವೇ" ಎನ್ನುತ್ತಿದ್ದರು. ಗ್ರಂಥಮಾಲೆಯ ಕೊನೆಯ ಪುಸ್ತಕ ಪ್ರಕಟವಾಗಿ ಸಮಿತಿಯ ವಿಸರ್ಜನೆಯಾದಾಗ ನಮಗೆಲ್ಲ ಸಂಸಾರದ ಮಿತ್ರರು ಒಬ್ಬರನ್ನೊಬ್ಬರು ಅಗಲಿದಷ್ಟು ದುಃಖವಾಯಿತು. ನಾವೆಲ್ಲ "ಇನ್ನಷ್ಟು ದಿನ ಈ ಸಮಿತಿ ಇದ್ದಿದ್ದರೆ ಚೆನ್ನಾಗಿತ್ತು. ಇನ್ನು ಮೈಸೂರಿಗೆ ನಾವು ಬಂದಾಗ ಊಟಕ್ಕೆ ಹೋಗುವುದೆಲ್ಲಿ?" ಎಂದೆವು. ಯಾಮುನಾಚಾರ್ಯರು "ಆಗ ಸಭೆಯಲ್ಲಿ ನೀವು ಭಾಗವಹಿಸಬೇಕಾದ ಕಷ್ಟವಿತ್ತು. ಮುಂದೆ ಅದೂ ಇಲ್ಲ. ಆನಂದದಿಂದಿರೋಣ ಬನ್ನಿ" ಎನ್ನುತ್ತಿದ್ದರು.

ಗಾಂಧೀ ಕನ್ನಡ ಗ್ರಂಥಮಾಲೆ ತನಗೆ ನಿಗದಿಮಾಡಲ್ಪಟ್ಟ ವಾಯಿದೆಯೊಳಗಾಗಿ ಗ್ರಂಥಗಳನ್ನೆಲ್ಲ ಪ್ರಕಟಿಸಲು ಯಾಮುನಾಚಾರ್ಯರ ಕಾರ್ಯತತ್ಪರತೆ, ಸೌಜನ್ಯ, ತಾವೂ ಕೆಲಸಮಾಡಿ ಇತರರಿಂದಲೂ ಮಾಡಿಸುವ ಸ್ವಭಾವ, ಎಲ್ಲರನ್ನೂ ಒಟ್ಟುಗೂಡಿಸಿ ಅವರಿಂದ ಕೆಲಸ ತೆಗೆಯುವ ವಿವೇಕ, ಸಹೋದ್ಯೋಗಿಗಳನ್ನೆಲ್ಲ ಒಂದು ಸಂಸಾರದಂತೆ ಕಾಣುವ ಉದಾರಬುದ್ಧಿ ಇವು ಮುಖ್ಯ ಕಾರಣಗಳಾಗಿದ್ದವು. ಭರತಖಂಡದ ಎಲ್ಲ ಹದಿನಾಲ್ಕು ಹದಿನೈದು ಭಾಷೆಗಳಲ್ಲಿಯೂ ಗಾಂಧೀ ಗ್ರಂಥ ಪ್ರಕಟನೆಯ ವ್ಯವಸ್ಥೆಯಾಗಿ ಅದು ನಡೆದಿದೆ. ಆದರೂ ಕನ್ನಡ ಭಾಷೆಯಲ್ಲಿ ಆದಷ್ಟು ಶೀಘ್ರವಾಗಿ ಅಚ್ಚುಕಟ್ಟಾಗಿ ಕೆಲಸ ಮತ್ತಾವ ಭಾಷೆಯಲ್ಲಿಯೂ ನಡೆದಿಲ್ಲವೆಂಬುದು ನಮ್ಮ ಗಮನಕ್ಕೆ ಬಂದಿದೆ. ಇದಕ್ಕೆ ಶ್ರೀ ಯಾಮುನಾಚಾರ್ಯರ ಅವಿರತ ಕಾರ್ಯದಕ್ಷತೆ ಮತ್ತು ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷ ಶ್ರೀ ಆರ್. ಆರ್. ದಿವಾಕರ್ ಅವರು ಈ ಕಾರ್ಯದಲ್ಲಿ ತೋರಿಸಿದ ಉತ್ಸಾಹ ಇವೇ ಮುಖ್ಯಕಾರಣವಾಗಿವೆ.

ಶ್ರೀ ಯಾಮುನಾಚಾರ್ಯರು ಬಹುಶ್ರುತರು. ತುಂಬ ವ್ಯಾಸಂಗ ಮಾಡಿದವರು. ಧರ್ಮಶಾಸ್ತ್ರ, ತರ್ಕ (ಪೌರ್ವಾತ್ಯ, ಪಾಶ್ಚಾತ್ಯ), ಗ್ರೀಕ್ ತತ್ವಶಾಸ್ತ್ರ, ಸಮಾಜ ಶಾಸ್ತ್ರ, ಗಾಂಧೀ ದರ್ಶನ, ಇತಿಹಾಸ ಇವುಗಳಲ್ಲೆಲ್ಲ ಅವರು ಪ್ರವೀಣರಾಗಿದ್ದರು.

ಅವರ ಪ್ರತಿ ಉಸಿರಿನಲ್ಲಿಯೂ ವೇದ ಉಪನಿಷತ್ತು ಸಾಂಖ್ಯ–ಭಾರತೀಯತ್ವ ಜಾಗೃತ ವಾಗಿತ್ತು. ಅವರ ಮಹಡಿ ತುಂಬ ಎಲ್ಲ ಶಾಸ್ತ್ರಗಳ ಮೇಲೂ ಅನೇಕ ಭಾಷೆಯ ಅಮೂಲ್ಯ ಗ್ರಂಥಗಳಿದ್ದವು. 'ಕೋಶೋವಾನ್ ಆಚಾರ್ಯಃ' ಎಂಬಂತೆ ಅವರು ಗ್ರಂಥ ಗಳನ್ನು ಇಟ್ಟು ಕೊಂಡಿದ್ದುದು ಮಾತ್ರವಲ್ಲದೆ, ಅವುಗಳನ್ನೆಲ್ಲ ಒಂದು ಸಲ ಎರಡುಸಲ, ನಾಲ್ಕು ಸಲ ಸಹ ಓದಿರುತ್ತಿದ್ದರು. ಯಾರಾದರೂ ಗ್ರಂಥಗಳನ್ನು ಕೇಳಿದರೆ "ಪರಹಸ್ತಗತಂ ಗತಃ" ಎಂಬ ಉಕ್ತಿ ಅವರಿಗೆ ಗಳಿಗೆ ಗಳಿಗೆಗೂ ಅನುಭವವಾಗುತ್ತಿದ್ದರೂ ನಿರ್ಲಕ್ಷ್ಯದಿಂದ ಆ ಅಮೂಲ್ಯಗ್ರಂಥಗಳನ್ನೇ ಎತ್ತಿ ಕೊಟ್ಟುಬಿಡುತ್ತಿದ್ದರು. "ಇಲ್ಲ" ಎಂದು ಉಚ್ಚರಿಸು ವುದು ಸಂಕೋಚ ಪ್ರಕೃತಿಯವರಾದ ಅವರಿಗೆ ತುಂಬ ಕಷ್ಟವಾಗುತ್ತಿತ್ತು. ಸಭೆಗೆ ಬನ್ನಿ ಎಂದು ಕರೆಯಲಿ, ಉಪನ್ಯಾಸಮಾಡಿ ಎಂದು ಕರೆಯಲಿ, ಬೇರೆ ಊರಿಗೆ ಬಂದು ಉಪನ್ಯಾಸಕರಾಗಿ, ಅಧ್ಯಕ್ಷರಾಗಿ ಎಂದು ಕರೆಯಲಿ, ಲೇಖನ ಬರೆದುಕೊಡಿ, ಗ್ರಂಥ ಬರೆದು ಕೊಡಿ, ಎಂದು ಕೇಳಲಿ, ಸನ್ಮಾನ ಸಮಿತಿಯ ಅಧ್ಯಕ್ಷರಾಗುವ ಹೊರೆ ಹೊರಿ ಎನ್ನಲಿ, ಯಾವ ಕಾರ್ಯಕ್ಕೆ ಚಂದಾಹಣ ಕೇಳಲಿ, ಇಲ್ಲ ಎಂಬ ಶಬ್ದವನ್ನು ಅವರ ಬಾಯಿಂದ ಹೊರಡಿಸಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. 'ದೇಹಿ ಇತಿ ವಚನಂ ಕಷ್ಟಂ ನಾಸ್ತೀತಿ ವಚನಂ ತಥಾ' ಒಪ್ಪಿಕೊಂಡ ತಪ್ಪಿಗೆ ಅವರು ಅನೇಕ ಕಷ್ಟಗಳನ್ನು ಸಹಿಸಿ ದೇಹಶ್ರಮವನ್ನೂ ಲೆಕ್ಕಿಸದೆ ಪ್ರವಾಸಮಾಡಿ, ಓದಿ, ಬರೆದು, ಭಾಷಣಮಾಡಿ, ತುಂಬ ಆಯಾಸಗೊಳ್ಳುತ್ತಿದ್ದರು. ಹಾಗಲ್ಲದೆ ಬಾಳುವುದು ಸತ್ಪುರುಷರಿಗೆ ಸಾಧ್ಯವೂ ಅಲ್ಲ. ಅದು ಅವರ ರಕ್ತಗತವಾದ ಗುಣ.

ಲೇಖನ ರಚನೆ, ಗ್ರಂಥ ನಿರ್ಮಾಣ ಇವುಗಳನ್ನು ಯಾಮುನಾಚಾರ್ಯರು ತಮ್ಮ ಮುಖ್ಯ ವೃತ್ತಿಯೆಂದು ಭಾವಿಸಲಿಲ್ಲ. "ನನ್ನ ಪಾಡಿಗೆ ನನ್ನನ್ನು ಬಿಟ್ಟರೆ ನನಗೆ ಏನೂ ಬೇಡ. ನನಗೆ ತಿಳಿದುದನ್ನು ನಾಲ್ಕು ಜನರಿಗೆ ಹೇಳಿಕೊಂಡು ಶಾಸ್ತ್ರಚಿಂತನೆ ಮಾಡುತ್ತ ರಾಮಾಕೃಷ್ಣ ಎಂದು ಹೇಳಿಕೊಂಡು ಕಾಲ ಕಳೆಯುತ್ತೇನೆ." ಎನ್ನುತ್ತಿದ್ದರು. ಆದರೂ ಅವರು ಭಾಷಣ ಮಾಡಿದ್ದು, ಬರೆದದ್ದು ಕಡಿಮೆ ಅಲ್ಲ. ಯಾವ ವಿಷಯದ ಮೇಲೂ ಅವರು ವಿದ್ವತ್ ಮತ್ತು ಅನುಭವಪೂರ್ಣ ಭಾಷಣ ಮಾಡುತ್ತಿದ್ದುದರಿಂದ, ಅವರಿ ಗಾಗಿ ದೇಶದಲ್ಲೆಲ್ಲ ಭಾಷಣಕ್ಕೆ ಆಹ್ವಾನವಿರುತ್ತಲೇ ಇದ್ದಿತು. ಪತ್ರಿಕಾಕರ್ತರ, ಸಂಪಾದಕರ ಬೇಡಿಕೆಗೆ ಮಣಿದು ಅವರು ಅನೇಕ ಲೇಖನಗಳನ್ನು ಬರೆಯುತ್ತಿದ್ದರು. ಮಹದ್ವಿಷಯಗಳಿಗೆ ಸಂಬಂಧಿಸಿದ ಗಂಭೀರ ಲೇಖನಗಳು, ವೇದಾಂತ ವಿಷಯ, ಸಮಾಜ ಸಮಸ್ಯೆಗಳು, ಭಗವದ್‌ಭಕ್ತಿ, ರಾಮಾನುಜ ದರ್ಶನ, ಚರಿತ್ರೆ, ಸ್ಥಿತ ಪ್ರಜ್ಞ ಲಕ್ಷಣ, ಸಂತರ ಮತ್ತು ಭಕ್ತರ ಜೀವನ, ಧಾರ್ಮಿಕ ವಿಷಯ, ಆಳ್ವಾರುಗಳ ಚರಿತ್ರೆ, ಹಿಂದೂ ತತ್ವಶಾಸ್ತ್ರ, ಗಾಂಧೀ ದರ್ಶನದ ಸಮಗ್ರರೂಪ ಇವೆಲ್ಲ ಅವರ ಲೇಖನಿಯಲ್ಲಿ ರೂಪುಗೊಂಡಿವೆ. ಅವರ ಮನೆಗೆ "ವೇದಗೃಹ"ವೆಂಬ ಹೆಸರು ಅನ್ವರ್ಥವಾಗಿದೆ. ಯಾಕೆಂದರೆ ಅಲ್ಲಿಯ ವಾತಾವರಣವೆಲ್ಲ ಆ ಮನೆ ಹುಟ್ಟಿದಂದಿನಿಂದ ಅಲ್ಲಿ ಬೆಳೆದು

ಯಾಮುನಾಚಾರ್ಯರ ಕಾಲದಲ್ಲಿ ಶಿಖರವನ್ನೇರಿದ ವೇದಸಂಸ್ಕೃತಿಯು ಅವಿಚ್ಛಿನ್ನ ಅನುಸರಣೆ, ಚಿಂತನದಿಂದ ಪುನಶ್ಚೇತನಗೊಂಡಿದೆ. ಪರಮಾತ್ಮನ ಕೃಪೆಗೆ ಪಾತ್ರನಾಗುವುದೇ ಈ ಬಾಳನ್ನು ಎತ್ತಿದುದಕ್ಕೆ ಸಾರ್ಥಕ್ಯವೆಂದು ಅವರು ನಂಬಿದ್ದರು (ವಿಚಿತ್ರಾ ದೇಹ ಸಂಪತ್ತಿಃ ಈಶ್ವರಾಯ ನಿವೇದಿತುಮ್.) ಕಥೆ ಕಾದಂಬರಿ ಪದ್ಯಗಳನ್ನು ಬರೆದು ಕಾಲ ಹಾಕುತ್ತಿದ್ದ ನಮ್ಮಂಥವರನ್ನು ನೋಡಿ "ನಿಜವಾದ ಲೇಖಕರೆಂದರೆ ನೀವು. ನಮ್ಮದೆಲ್ಲ ಬಲಾತ್ಕಾರ ಪ್ರಸವ" ಎನ್ನುತ್ತಿದ್ದರು. ಆದರೆ ಅವರ ಒಂದೊಂದು ಲೇಖನದಲ್ಲಿಯೂ ಒಂದೊಂದು ಗುರಿಯಿದ್ದು, ಅದು ಈ ನಶ್ವರಬಾಳಿಗೆ ಒಂದು ಉನ್ನತ ಆದರ್ಶವನ್ನು ಕೊಡುತ್ತದೆ. ಅವು ನಮ್ಮಲ್ಲಿ ಸುಪ್ತವಾಗಿರುವ ದೈವಭಕ್ತಿ, ಗುರುಭಕ್ತಿ ಸಾತ್ವಿಕಜೀವನ ಇಂದ್ರಿಯನಿಗ್ರಹ, ಸಂಯಮ, ಅಪರಿಗ್ರಹಗಳ ಜ್ಯೋತಿಯನ್ನು ಉಜ್ವಲಗೊಳಿಸಿ ಬಾಳಿನ ಗುರಿಯನ್ನು ತೋರಿಸುತ್ತವೆ. ಹೀಗೆ ನಮ್ಮನ್ನು ದಿವ್ಯಜೀವನದ ಕಡೆಗೆ ಒಯ್ಯುವುದೇ ನಿಜವಾದ ಗುರುವಿನ ಲಕ್ಷಣ.

ವಿಶಿಷ್ಟಾದ್ವೈತ ದರ್ಶನದಲ್ಲಿ, ಯಾಮುನಾಚಾರ್ಯರು ಅತ್ಯಂತ ನುರಿತವರಾಗಿದ್ದರು. ಆ ದರ್ಶನದಲ್ಲಿ ಅವರು ದಕ್ಷಿಣದೇಶದಲ್ಲಿಯೇ ಶ್ರೇಷ್ಠಜ್ಞಾನಿ ಎಂದು ಹೇಳಬಹುದು. ಪರಮಾತ್ಮನಲ್ಲಿ ಪೂರ್ಣಶರಣಾಗತಿ, ಭರನ್ಯಾಸ–ಪ್ರಪತ್ತಿ ತನ್ನ ಸಮಸ್ತ ಹೊರೆಯನ್ನೂ ದೇವರ ಮೇಲೆ ಹಾಕಿ ಅವನು ನಿಯಮಿಸಿದಂತೆ ಭಕ್ತನಾಗಿ ಬಾಳುವುದೇ ರಾಮಾನುಜದರ್ಶನದ ತಿರುಳು. ಯಾಮುನಾಚಾರ್ಯರು ಆ ದರ್ಶನದಲ್ಲಿ ಶ್ರೇಷ್ಠ ವಿದ್ವಾಂಸರಾಗಿದ್ದುದು ಮಾತ್ರವೇ ಅಲ್ಲ, ಆ ಬಾಳನ್ನೇ ಬಾಳುತ್ತಿದ್ದರು. ಪರಮಾತ್ಮನಲ್ಲಿ ಭಕ್ತಿ, ಜನತೆಯ ಸೇವೆ, ಸಂಯಮ, ಯದೃಚ್ಛಾಲಾಭ ಸಂತುಷ್ಟಿ, ಕೈಂಕರ್ಯ: ಯಾಮುನಾಚಾರ್ಯರು ಆಫೀಸಿನಲ್ಲಿರಲಿ, ಕಾಲೇಜಿನಲ್ಲಿರಲಿ, ಡಿಲ್ಲಿಯಲ್ಲಿರಲಿ, ಅಮೆರಿಕದಲ್ಲಿರಲಿ ಇವೇ ಅವರ ಗುರಿಗಳಾಗಿದ್ದವು. ಆ ಗುಣಗಳೆಲ್ಲ ಅವರಿಗೆ ವಂಶಪಾರಂಪರ್ಯವಾಗಿ–ಮುಖ್ಯವಾಗಿ ಅವರ ಅಜ್ಜಂದಿರು ಬ್ರಹ್ಮಶ್ರೀ ಗೋವಿಂದಾಚಾರ್ಯ ಸ್ವಾಮಿಗಳಿಂದ ಬಂದು, ಅವರಲ್ಲಿ ರಕ್ತಗತವಾಗಿ ನೆಲೆಸಿ, ಅವರ ಜೀವನ ಪಥಕ್ಕೆ ಮಾರ್ಗದರ್ಶನವಾಗಿದ್ದುವು. ಯಾಮುನಾಚಾರ್ಯರನ್ನು ನೋಡುವವರಿಗೆ ಎಲ್ಲಕ್ಕಿಂತ ಹೆಚ್ಚಾಗಿ "ಇವನೊಬ್ಬ ಸತ್ಪುರುಷ, ದೈವಭಕ್ತ, ಸಾತ್ವಿಕ, ಇವನಿಗೆ ಇತರರು ಬೇಕಾದರೆ ಕೇಡು ಮಾಡಬಹುದೇ ಹೊರತು, ಇವನು ಇತರರಿಗೆ ಕೇಡುಮಾಡುವವನಲ್ಲ; ಇವನು ಜೈಯಿಸಿ ಕೊಳ್ಳುವನೇ ಹೊರತು ಬಯ್ಯುವವನಲ್ಲ" ಎಂಬ ಭಾವ ವುಂಟಾಗುತ್ತಿದ್ದಿತು. ಯಾಮುನಾಚಾರ್ಯರು ಯಾವಾಗಲೂ ಆತುರ, ಅಶಾಂತಿ, ಕಾತರ, ಗಾಬರಿ ಗೊಂಡವರಲ್ಲ. ಅವರು ದೇವರನ್ನು ನಿಜವಾಗಿಯೇ ನಂಬಿದ್ದುದರಿಂದ ಎಂತಹ ಕಷ್ಟದಲ್ಲಿಯೂ ಉದ್ವಿಗ್ನರಾಗದೆ ತುಂಬ ತಾಳ್ಮೆಯಿಂದಿರುತ್ತಿದ್ದರು. ಅವರಲ್ಲಿ ಬಂದು ತಮ್ಮ ಕಷ್ಟಸುಖಗಳನ್ನು ಹೇಳಿಕೊಳ್ಳುವವರಿಗೆ ಅವರು ಸಾಧಾರಣವಾಗಿಯೇ ಸ್ವಲ್ಪ ಅನಾಸಕ್ತಿಯನ್ನು ಅನುದ್ವೇಗವನ್ನು ಬೋಧಿಸುತ್ತಿದ್ದರು. ಆಸೆ, ರಾಗ, ಭಯ, ಕ್ರೋಧಗಳಿಂದ ಮುಕ್ತನಾಗಿ

ಪೂರ್ಣ ಮನಶ್ಶಾಂತಿಯಿಂದ ಇತರರಿಗೆ ಬೋಧಿಸಬಲ್ಲವನ ಸಾಂತ್ವನ ವಚನಗಳಿಂದ, ದುಃಖಿತರಿಗೆ, ಕಷ್ಟದಲ್ಲಿರುವವರಿಗೆ ಸಮಾಧಾನ ದೊರೆಯುವುದು.

ಆರೋಗ್ಯ ಚೆನ್ನಾಗಿಲ್ಲದಿದ್ದರೂ, ಯಾಮುನಾಚಾರ್ಯರು ಕರ್ತವ್ಯದ ಕರೆಗೆ ಒಲಿದು, ಗಾಂಧೀ ತತ್ವನಿರ್ದೇಶಕರಾಗಿ ಡಿಲ್ಲಿ ಕೇಂದ್ರಕ್ಕೆ ಹೋದರು. ಅಲ್ಲಿ ಅವರಿಗೆ ಹೃದಯದ ತೊಂದರೆಯುಂಟಾಗಿ, ಅಜ್ಞಾನಾವಸ್ಥೆಯಲ್ಲಿ ಆಸ್ಪತ್ರೆಯನ್ನು ಸೇರಿದರು. ಅಲ್ಲಿ ಅವರಿಗಾದ ಒಂದು ಅಲೌಕಿಕ ಅನುಭವವನ್ನು ಅವರ ಮಾತಿನಲ್ಲಿಯೇ ಮುಂದು ವರಿಸೋಣ; " ಒಂದು ದಿನ ಮಧ್ಯಾಹ್ನ ಆಸ್ಪತ್ರೆಯಲ್ಲಿ ಹಾಸಿಗೆ ಮೇಲೆ ಮಲಗಿದ್ದೆ. ದೇಹ, ಪೂರ್ಣ ಸೋತಿತ್ತು. ಉಸಿರು ಬರಬರುತ್ತಾ ನಿಧಾನವಾಗುತ್ತ ಇನ್ನೇನು ಕೊನೆಯ ಉಸಿರನ್ನು ಎಳೆಯುವೆನೇನೋ ಎಂದುಕೊಂಡೆ. ಆ ವೇಳೆಗೆ ಒಬ್ಬರು ವ್ಯಕ್ತಿಗಳು ನನ್ನ ಕೊಠಡಿಗೆ ಬಂದರು. ತೇಜಸ್ವೀ ಇಲ್ಲದ ನನ್ನ ಕಣ್ಣುಗಳಿಂದ ಕುರಿತು ನೋಡಿದೆ. ಅವರು ನಮ್ಮ ಅಜ್ಜ ಗೋವಿಂದಾಚಾರ್ಯರು. (ಅವರು ಸ್ವರ್ಗಸ್ಥರಾಗಿ ಎಷ್ಟೋ ವರುಷಗಳಾಗಿತ್ತು) ಅವರು ಬಂದು ನನ್ನ ಹಾಸಿಗೆಯ ಮೇಲೆ, ಮಂಚದ ಕೊನೆಯಲ್ಲಿ ಕುಳಿತು ನನ್ನ ಕಯ್ಯನ್ನು ತಮ್ಮ ಕಯ್ಯಲ್ಲಿ ಹಿಡಿದುಕೊಂಡು " ಅಪ್ಪಾ ಅಷ್ಟಾಕ್ಷರೀ ಮಂತ್ರವನ್ನು ಜಪಿಸು, ಯಾವಾಗಲೂ ಜಪಿಸು; ಅದು ನಿನ್ನನ್ನು ಕಾಪಾಡುವುದು " ಎಂದು ಹೇಳಿ " ಓಂ ನಮೋ ನಾರಾಯಣಾಯ " ಎಂದು ಜಪಿ ಸಿದರು. ನಾನು ಕಷ್ಟದಿಂದ " ಓಂ ನಮೋ ನಾರಾಯಣಾಯ " ಎಂದು ಜಪಿಸಿದೆ. ಹೀಗೆ ಜಪಿಸುತ್ತಲೇ ಇದ್ದೆ. ಅವರು ಯಾವಾಗ ಅಂತರ್ಧಾನರಾದರೋ ತಿಳಿಯದು. ನಾನು ಯಾವಾಗಲೂ ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತಲೇ ಇದ್ದೆ. ಮರುದಿನ ಡಾಕ್ಟರು ನನ್ನ ದೇಹಸ್ಥಿತಿ ಉತ್ತಮವಾಗುತ್ತಿದೆಯೆಂದು ಹೇಳಿದರು. ಕೊನೆಗೂ ನನಗೆ ಗುಣ ವಾದುದು ಅಷ್ಟಾಕ್ಷರೀ ಮಂತ್ರದಿಂದಲೇ." ಈ ಸಂಗತಿಯನ್ನು ಶ್ರೀ ಯಾಮುನಾ ಚಾರ್ಯರೇ ನನಗೆ ಹೇಳಿದರು. " ಅದು ನನಗೆ ದಿವ್ಯ ದರ್ಶನ. ನಾನು ಮರೆತಿದ್ದುದನ್ನು ಹಿರಿಯರು ಬಂದು, ಪರಮಕಾರುಣ್ಯದಿಂದ ಜ್ಞಾಪಿಸಿದರು. ಈಗಲೂ ಕುಳಿತಲ್ಲಿ ನಿಂತಲ್ಲಿ ಆ ಮಂತ್ರ ಉಚ್ಚರಿಸುವುದೇ ನನ್ನ ಅಭ್ಯಾಸವಾಗಿದೆ " ಎಂದರು.

ಯಾಮುನಾಚಾರ್ಯರು ನಿಜಕ್ಕೂ ಸುಖಿಗಳು. ತೃಪ್ತರು ಮತ್ತು ಪುಣ್ಯವಂತರು. ತಮಗೆ ಪ್ರಿಯವಾದ ವೃತ್ತಿಯನ್ನು ಆರಿಸಿಕೊಂಡು, ಪ್ರಿಯವಾದ ರೀತಿಯಲ್ಲಿ ಅದನ್ನು ನಿರ್ವಹಿಸಿ, ಪ್ರಾಪಂಚಿಕ ಸುಖಗಳನ್ನೆಲ್ಲ ತಾವರೆಯ ಎಲೆಯ ಮೇಲಿನ ನೀರಿನಂತೆ ಅನಾಸಕ್ತರಾಗಿ ಅನುಭವಿಸಿ, ಪರಮಾತ್ಮನ ಬೆಂಬಲದಿಂದ ಈ ಬಾಳ ಹೋರಾಟವನ್ನು ಲೀಲೆಯಾಗಿ ಸಾಗಿಸಿ, ಪುನರಾವರ್ತನೆಯಿಲ್ಲದ ಸಾಯುಜ್ಯವನ್ನು ಸಂಪಾದಿಸಿಕೊಂಡರು. ಇಲ್ಲಿ ನಮ್ಮ ನಡುವೆ ಇರುವಷ್ಟು ದಿನವೂ ತಮ್ಮ ಪಾಲಿಗೆ ಬಂದ ಕರ್ತವ್ಯಗಳನ್ನು ಪರಮಾತ್ಮನ ಕೈಂಕರ್ಯವೆಂದು ಭಾವಿಸಿ ನೆರವೇರಿಸಿದರು. ಇಂತಹ ಭಕ್ತನ ಸ್ವಭಾವ, ಲಕ್ಷಣಗಳನ್ನು ಯಾಮುನಾಚಾರ್ಯರೇ ಹೇಳಿರುವುದನ್ನು ಅವರಿಗೇ ಅನ್ವಯಿಸಬಹುದು.

" ರಾಮಾನುಜದರ್ಶನದಲ್ಲಿ ಕೈಂಕರ್ಯವೆನ್ನುವ ಮಾತು ಮಹತ್ವಪೂರ್ಣವಾದ ಮಾತು : ಇದು ಭಗವತ್ ಕೈಂಕರ್ಯ. ಈ ಕೈಂಕರ್ಯ ಪೂರ್ಣವಾಗಿ ಸಾಧಿತವಾಗುವುದು ಭಾಗವತರ ಸೇವೆಯಲ್ಲಿಯೇ. ಮನುಷ್ಯನು ಸಾಧಿಸಬಹುದಾದ ಬಹು ದೊಡ್ಡ ಗುರಿ ಇದೇಯೆ. ಭಗವಂತನ ಶಾಶ್ವತ ಸೇವಕನಾಗುವುದೇ ಮನುಷ್ಯನ ಅತಿದೊಡ್ಡ ಸೌಭಾಗ್ಯ ರಾಮಾನುಜರಿಗೆ ಹಿಂದಲ ವೈಷ್ಣವ ಗುರುಗಳೂ ಸಹ, ಮನುಷ್ಯನಿಗೆ ಮೋಕ್ಷ ದೊರೆಯುವುದು, ಪರಮಾತ್ಮನನ್ನೂ ಪರಮಾತ್ಮನ ಭಕ್ತರನ್ನೂ ಎಂದೆಂದಿಗೂ ಸೇವಿಸುವುದರಿಂದ ಮಾತ್ರವೇ ಎಂದು ಸಾರಿದ್ದಾರೆ. ಇದೇ ಸೇವೆಯ ಆನಂದ, " ಭಕ್ತಿರತಿ " ಎಂಬುದು. ಒಬ್ಬ ಶ್ರೀವೈಷ್ಣವ ಗುರುಗಳು " ಪರಮಾತ್ಮನನ್ನು ನಿತ್ಯಸೇವಿಸುವ ಸೌಭಾಗ್ಯವೇ ಮುಕ್ತಿ " ಎನ್ನುವವರೆಗೆ ಹೋದರು. (ನಿತ್ಯ ಕೈಂಕರ್ಯ ಪ್ರಾಪ್ತಿರೇವ ಮೋಕ್ಷಃ) ಈ ಸ್ಥಿತಿಗೆ ಏರಿದಾಗ, ಮನುಷ್ಯನಿಗೆ ತನ್ನ ಜೀವಿತದ ಅತ್ಯುನ್ನತ ಗುರಿ ಸಾಧಿತವಾದಂತೆ ಆಯಿತು. ಹೀಗೆ ಸುಪ್ತಾವಸ್ಥೆಯಿಂದ ಚೇತನ ಜಾಗ್ರತವಾದಮೇಲೆ, ಸಂಸಾರದ ಮತ್ತು ಜಗತ್ತಿನ ಕಷ್ಟಕಾರ್ಪಣ್ಯ ತಾಪತ್ರಯಗಳಿಂದ ಪರಿಶುದ್ಧವಾದ ಜೀವ, ದೈವೋನ್ಮುಖವಾಗಿ, ಭಗವಂತನ ಕೈಂಕರ್ಯರತಿಯಲ್ಲಿ ಜೀವಿತದ ಪರಮೋದ್ದೇಶಸಾಧನೆಯನ್ನು ಕಾಣುತ್ತದೆ. ಅದೇ ಸಾಯುಜ್ಯ ; ಶ್ರೀವೈಷ್ಣವ ಸಂತರು ಬಯಸಿದ ಮೋಕ್ಷ ಇದೇಯೆ. ಈ ಸಾಧನೆಗಾಗಿ, ಪರಮಾತ್ಮನನ್ನು ಮತ್ತು ಪರಮಾತ್ಮನಿಗಾಗಿ ಸೇವೆಮಾಡುವುದಕ್ಕಾಗಿ ಶಾಶ್ವತವಾಗಿ ಭೂಮಿಯಮೇಲೆ ಇರಬೇಕಾದರೂ ಶ್ರೀವೈಷ್ಣವ ಸಂತರು ಅದಕ್ಕೂ ಸಿದ್ಧರು. " ಪರಮಾತ್ಮನ ಸಾಯುಜ್ಯ ಇಲ್ಲಿಯೇ ಇದೆ. ನಮಗೆ ದೊರಕಿದೆ." ಭೂಮಿಯ ಮೇಲಿರುವಾಗ ಪರಮಪದ ಅಥವಾ ವೈಕುಂಠವನ್ನು ಸಾಧಿಸುವುದು ಅವರ ನಿತ್ಯದ ಕನಸಾಗಿತ್ತು. ಪರಲೋಕದಲ್ಲಿ ದೊರೆವ ಸಾಯುಜ್ಯ ಇಲ್ಲಿಯೇ ದೊರೆಯುತ್ತೆ ಎಂಬ ನಂಬಿಕೆಯಿಂದಲೇ ಅವರು ಈ ಲೋಕದ ಕಾರ್ಪಣ್ಯದ ಬಾಳನ್ನು ಬಾಳಲು ಶಕ್ತರಾದರು. ಒಬ್ಬ ಆಳ್ವಾರರು " ನಾವು ಇರುವ ಸ್ಥಳವೇ ವೈಕುಂಠ, ಪವಿತ್ರ ಕ್ಷೇತ್ರ " ಎಂದು ಹೇಳಿದ್ದಾರೆ " ( ಇರಪ್ಪಿಡಂ ವೈಕುಂದಂ, ವೆಂಗಡಂ )

ಈ ಆದರ್ಶದಿಂದಲೇ ಯಾಮುನಾಚಾರ್ಯರು ಈ ಇಪ್ಪತ್ತನೆಯ ಶತಮಾನದಲ್ಲಿಯೂ ಬದುಕಿದರು. ಅವರ ಮಾತಾಪಿತೃಗಳು ಅವರಿಗೆ ಇಟ್ಟ ಹೆಸರು ಅನ್ವರ್ಥವೂ ಸಾರ್ಥಕವೂ ಆಯಿತು. ಯಾಕೆಂದರೆ ಯಮುನಮುನಿಗಳೆಂಬುವರು ರಾಮಾನುಜಾಚಾರ್ಯರಿಗಿಂತ ಹಿಂದಲವರಾಗಿ ಶ್ರೀವೈಷ್ಣವ ಸಿದ್ಧಾಂತದ ಪರಮಾಚಾರ್ಯರು. ಅವರು ರಚಿಸಿದ " ಸ್ತೋತ್ರರತ್ನ " ವೆಂಬುದು, ರಾಮಾನುಜ ಮತಸಂಪ್ರದಾಯ ಪ್ರತಿಪಾದನೆಯ ಒಂದು ಭಾವಪೂರ್ಣ ಭಕ್ತಿಕಾವ್ಯ. ಯಾಮುನಾಚಾರ್ಯರು ಆ ಕಾವ್ಯವನ್ನೇ ಬಾಳಿದ ನಮ್ಮ ಕಾಲದ ಒಬ್ಬ ಸನ್ಮಿತ್ರಸಂತರು. ಇಂಥವರ ಸಾವಿಗಾಗಿ ನಾವು ಕೊರಗುವುದು ಬೇಡ. ಪರಮಾತ್ಮನ ಕಂಠಕೌಸ್ತುಭದಲ್ಲಿ ಮೆರೆವ ಪುನರಾವರ್ತನೆಯಿಲ್ಲದ ಭಾಗ್ಯ ಅವರಿಗೆ ಲಭಿಸಿದೆ. ನಮ್ಮ ಕಾಲದಲ್ಲಿ ನಮ್ಮ ಜೊತೆ ಅವರು ಇದ್ದು ನಮ್ಮೊಂದಿಗೆ

ಒಡನಾಡಿ ನಕ್ಕು, ನಲಿದು, ನಗಿಸಿ ನಮ್ಮ ಕಷ್ಟಸುಖಗಳಲ್ಲಿ ಭಾಗಿಗಳಾಗಿ ನಮ್ಮ ಜೀವಿತಕ್ಕೂ ಅನುಪಮ ಒಂದು ಬೆಲೆಯನ್ನು ತಂದುಕೊಟ್ಟ ನಮ್ಮ ಪುಣ್ಯಕ್ಕಾಗಿ ನಾವು ಸಂತೋಷಪಡೋಣ.

ಯಾಮುನಾಚಾರ್ಯರು ನಮ್ಮಗಳೆಲ್ಲರ ಮನೆಗೂ ಬಂದಿದ್ದರು. ಇನ್ನು ಆ ಭಾಗ್ಯವನ್ನು ನಾವು ಕಳೆದುಕೊಂಡೆವು.

ನಂದಂತಿ ಪಿತರಸ್ಸರ್ವೇ ನೃತ್ಯಂತಿಚ ಪಿತಾಮಹಾಃ
ಪ್ರಪಿತಾಮಹಾಶ್ಚಿಗಾಯಂತಿ ಶ್ರೋತ್ರಿಯೇ ಗೃಹಮಾಗತೇ

ಇಂತಹ ಶ್ರೋತ್ರಿಯರು ಕೆಲವು ದಿನ ಇಲ್ಲಿಗೆ ಬಂದು ಈ ಜೀವನವನ್ನು ನಡೆಸಿ ತಮ್ಮ ಶಾಶ್ವತ ಗೃಹಕ್ಕೆ ಹೊರಟು ಹೋದರು.

# ಪೂಜ್ಯಯಾಮುನಾಚಾರ್ಯ: ಮಾತೃಪ್ರೇಮದ ಪ್ರತೀಕ

**ಎಂ. ಬಿ. ರಾಜಾಮಣಿ**

ನಾನು ನನ್ನ ಕಾಲೇಜು ವಿದ್ಯಾರಂಗದ ಕೊನೆಯ ಸೋಪಾನದ ಮೇಲೆ ಒಂದು ಕಾಲನ್ನಿರಿಸಿದಾಗ, ಪೂಜ್ಯ ಯಾಮುನಾಚಾರ್ಯ ನನ್ನ ಜೀವನದಲ್ಲಿ ಒಂದು ಭವ್ಯವಾದ ಬೆಳಕಾಗಿ ಬಂದರು. ವಿಶ್ವವಿದ್ಯಾಲಯದ ಆ ವಾರಗಳಲ್ಲಿ ಆಚಾರ್ಯರ ಆಳವಾದ ಜ್ಞಾನದ ಸುಮಧುರ ಸಂಗೀತದ ಸುಧೆಯನ್ನನುಭವಿಸುವ ಅದೃಷ್ಟ ನನ್ನದಾಗಿರಲಿಲ್ಲವಾದರೂ, ಆ ತುಂಬು ಗಾನದ ಪ್ರತಿಧ್ವನಿಯನ್ನಾಲಿಸುವ ಭಾಗ್ಯ ನನ್ನದಾಯಿತು. ಪೂಜ್ಯರ ಸಂದರ್ಶನ ನನಗೆ ಲಭಿಸಲು, ಅವರ ಸತ್ಸಂಗ ನನ್ನದಾಗಲು ಬಹಳ ದಿನಗಳೇನು ಬೇಕಾಗಲಿಲ್ಲ. ಭಾಸ್ಕರನು ರಕ್ತವರ್ಣರಂಜಿತ ಪೂರ್ವದಿಶೆಯ ರಂಗಮಂಚದ ಮೇಲೆ ದಿವ್ಯವಾಗಿ, ನಯನ ಮನೋಹರವಾಗಿ ನರ್ತಿಸಿದ ಒಂದೂವರೆ ಗಂಟೆಗಳ ನಂತರ, ಭಾರತೀಯ ಸನಾತನ ಧರ್ಮವನ್ನು ನೆನೆಪಿಗೆ ತರುವ ಆ 'ವೇದಗೃಹ'ದ ಚಿಕ್ಕ-ಚೊಕ್ಕ ವರಾಂಡದಲ್ಲಿ, ವಿವಿಧ ರಂಗು, ಆಕಾರ ಹಾಗೂ ಸುವಾಸನಾಭರಿತ ಸುಮಗಳ ಮಧ್ಯೆ ವಿರಾಜಮಾನ ಋಷಿಯಂತೆ, ವೈವಿಧ್ಯತೆಯ ಪ್ರತೀಕವಾದ, ಅವರ ಉತ್ಕೃಷ್ಟ ಅಭಿರುಚಿಗಳ ಪ್ರತಿಬಿಂಬವಾದ ಶ್ರೇಷ್ಠ ಗ್ರಂಥಗಳ ನಡುವೆ ರಾರಾಜಮಾನ ಮುಗುಳುನಗುವಿನ ಆಚಾರ್ಯರನ್ನು ಮೊದಲು ದರ್ಶಿಸಿದಾಗ, ಆ ವರಾಂಡದ ಗೋಡೆಯ ಮೇಲೆ ನೃತ್ಯವಾಡಿದ ಪ್ರಭಾಕರ ಕಿರಣಗಳ ಪ್ರಭೆಯನ್ನು ಮೀರಿಸಿದಂತಹ ದಿವ್ಯ ಪ್ರಭಾವಳಿಯಿಂದ ಕೂಡಿದ ತಾಯಿಯ ದರ್ಶನವಾಯಿತೆನಗೆ. ಸಹಸ್ರಾರು ವಿದ್ಯಾರ್ಥಿಗಳ ಗುರುವನ್ನು ನಾನು ಕಾಣಲಿಲ್ಲ ಅಂದು, ಅಲ್ಲಿ. ನಾನು ಕಂಡಿದುದ್ದು ಶಾಂತಿ–ಸಂತೃಪ್ತಿ–ಸಮೃದ್ಧತೆಗಳ ಸಮರಸವಾದ ಮಾತೆ ಯಮುನೆಯನ್ನು; ಸೌಜನ್ಯ–ಸೌಮ್ಯತೆ–ಸೌಶೀಲ್ಯ–ಸದ್ಭಾವನೆಗಳ ಸಂಪನ್ನ ಬತ್ತದ ಬಯಲನ್ನು; ಸರಳತೆ–ಸಹೃದಯತೆ–ಸತ್ಯಪ್ರಿಯತೆಗಳ ತ್ರಿವೇಣಿ ಸಂಗಮವನ್ನು; ಆತ್ಮಸಂಯಮ–ಆತ್ಮಗೌರವ–ಆತ್ಮತೃಪ್ತಿಯ ಆಲಯವನ್ನು. ನಗುವ–ನಲಿವ ನರ್ತಿಪ ಹಸಿರು ಬಯಲಿನ ಸಮೃದ್ಧತೆಯ ಮೂಲ ಯಮುನಾಜಲವಲ್ಲಿ ನನ್ನ ಜೀವನದ ಸಾರ್ಥಕತೆಯ ಮೂಲವನ್ನು ಕಂಡೆ ಈ ತಾಯಿಯಲ್ಲಿ, ಈ ಆಚಾರ್ಯ ಯಾಮುನಾವಿನಲ್ಲಿ. ಪಾಂಡಿತ್ಯವೇ ಮೂರ್ತಿವೆತ್ತಂತೆ ಆಚಾರ್ಯರಾಗಿ ನನ್ನ ಜೀವನದ ಮಾರ್ಗದರ್ಶಕ ಜ್ಞಾನ ದೀಪಗೃಹವಾಗಿದ್ದರೂ, ಸರಿಯಾದ ತಿಳುವಳಿಕೆಯನ್ನೀಡುವ ತಂದೆಯಂತೆ ನನ್ನ ಪ್ರಗತಿಪಥದ ಕೈಮರವಾಗಿ

ದ್ದರೂ, ಪೂಜ್ಯ ಯಾಮುನಾಚಾರ್ಯ ನನ್ನನ್ನು ಆಕರ್ಷಿಸಿದುದು ಮಾತೃಪ್ರೇಮದ ಪ್ರತೀಕರಾಗಿ, ವಿಚಾರ-ನಡೆ-ನುಡಿಗಳಲ್ಲಿ ವಾತ್ಸಲ್ಯದ ಸಾಕಾರವಾಗಿ. ಅವರ ಅಕ್ಕರೆಯ ಪ್ರಭಾವ ನನ್ನ ನರ-ನರಗಳಲ್ಲಿ ಸಂಜೀವಿನಿಯಂತೆ ಹರಿಯಿತು. ನನ್ನ ನಾಡಿಗಳಲ್ಲಿ ಮಿಡಿಯಿತು ಮತ್ತು ನನ್ನ ಹೃದಯದಲ್ಲಿ ಅವರು ಮನೆಮಾಡಿಕೊಂಡರು. ಪೂಜ್ಯ ಯಾಮುನಾಚಾರ್ಯ ಮಮತೆಯ ಪ್ರತಿರೂಪವಾದ ಮಾತೃವಿನಂತೆ, ಶಾಂತಿಯ ದೂತರಂತೆ,ಪರಮ ಸತ್ವ-ಆದರ್ಶಗಳ ಉನ್ನತ ಗೋಪುರದಂತೆ, ಪೌರ್ವಾತ್ಯಪಾಶ್ಚಾತ್ಯ ಹಾಗೂ ಪುರಾತನ-ಆಧುನಿಕ ಭಾವನೆ ಹಾಗೂ ಮೌಲ್ಯಗಳ ಸಾಮರಸ್ಯದ ಸಾರಾಂಶದಂತೆ ನನಗೆ ಗಾಂಧೀದರ್ಶನವನ್ನು ಮಾಡಿಸಿದ ಈ ಮಹಾನುಭಾವರು, ತಮ್ಮ ಜೀವನದ ಚೌಕಟ್ಟಿನಲ್ಲಿ, ತಮ್ಮ ಭವ್ಯ ವ್ಯಕ್ತಿತ್ವದ ದರ್ಪಣದಲ್ಲಿ ಗಾಂಧೀಜಿಯವರನ್ನು ಸಾಕಾರವಾಗಿ ತೋರಿದ ಈ ಪುಣ್ಯಾತ್ಮರು, ಸರಳತೆಯಲ್ಲಿ ಭವ್ಯತೆಯನ್ನು ಪ್ರದರ್ಶಿಸಿ ಸರ್ವೋದಯದ ಸಾಕ್ಷಾತ್ಕಾರವನ್ನು ಮಾಡಿಸಿದ ಈ ಸದಾಚಾರಿ-ಸುವಿಚಾರಿ ಆಚಾರ್ಯರು ಸಹಸ್ರಾರು ಹೃದಯಪೀಠಗಳಲ್ಲಿ ರಾರಾಜಿಸುತ್ತಿರುವ ಆಧುನಿಕ ಮಹರ್ಷಿ. ಸರಳತೆಯನ್ನೇ ಹಣತೆಯನ್ನಾಗಿಯೂ, ಪರಮಮೌಲ್ಯಗಳ ಪ್ರತಿ ಭಕ್ತಿಯನ್ನೇ ಎಣ್ಣೆಯನ್ನಾಗಿಯೂ, ಪರಿಶುದ್ಧ ಧಾರ್ಮಿಕತೆಯನ್ನೇ ಬತ್ತಿಯನ್ನಾಗಿ, ಮಮತೆಯನ್ನೇ ಜ್ಯೋತಿಯನ್ನಾಗಿಯೂ ಮಾಡಿ ಕೊಂಡ ಅಖಂಡ ನಂದಾದೀಪದಂತೆ ನಮ್ಮ ಜೀವನವನ್ನು ರೂಪಿಸಿಕೊಳ್ಳುವುದೇ ಈ ಹೃದಯಶ್ರೀಮಂತ ಮಹಾಸಾಧುವಿಗೆ, ಈ ವಾತ್ಸಲ್ಯ ತವರಿಗೆ ನಾವು ಅರ್ಪಿಸಬೇಕಾದ ಸುಯೋಗ್ಯ ಕೃತಜ್ಞತೆ, ಭಕ್ತಿಪೂರ್ವಕ ಗುರುದಕ್ಷಿಣೆ.

# ಶ್ರೀ ಯಾಮುನಾಚಾರ್ಯರು ಕಂಡ ಗಾಂಧೀ ದರ್ಶನ

**ಕೆ. ಎಸ್. ನಾರಾಯಣಸ್ವಾಮಿ**

ಮೆಲುನಗೆಯ ಆ ಪ್ರಶಾಂತ-ಮುಖ ಮುದ್ರೆ ; ಯಾರು ಬರಲಿ ಮುಂಬಾಗಿಲಿಗೆ ಬಂದು ಗೌರವದಿಂದ ಬರಮಾಡಿಕೊಳ್ಳುತ್ತಿದ್ದ ಸೌಜನ್ಯ. ವಿನಯಕ್ಕೇ ಮತ್ತೊಂದು ಹೆಸರೋ ಎಂಬಂತೆ ವಿಶ್ವಾಸದಿಂದ ಸೂರೆಗೊಳ್ಳುತ್ತಿದ್ದ ಆ ನುಡಿ–ನಡೆ; ಯಾಮುನಾ ಚಾರ್ಯರನ್ನು ಕಂಡೊಡನೆ ಒಡಮೂಡುತ್ತಿದ್ದ ಆ ಸ್ನೇಹಭಾವ ; ಮೂವತ್ತು ವರ್ಷಗಳ ಅವರ ಉಪಾಧ್ಯಾಯ ವೃತ್ತಿ ಸುಮಧುರ ತಪಸ್ಸಿನಂತೆ ಸಾಗಿದ ರೀತಿ ; ಪ್ರಾಮಣಿಕತೆ ಸತ್ಯನಿಷ್ಠೆಗಳು ತಮ್ಮ ಕಠೋರತೆಯನ್ನುಳಿದು ಮಾನವೀಯತೆಯೊಡನೆ ಅವತರಿಸಿ ಬಂದಂತೆ ಭಾಸವಾಗುತ್ತಿದ್ದ ಆ ಕೋಮಲ ವ್ಯಕ್ತಿತ್ವ ; ಪಾಂಡಿತ್ಯ ತನ್ನ ಹೆಮ್ಮೆಯನ್ನು ಮರೆತು ಸೇವಾದೀಕ್ಷೆ ತೊಟ್ಟು ಆತ್ಮಶ್ರೀಗೆ ಪರಿಪುಷ್ಟತೆಯನ್ನು ತಂದುಕೊಟ್ಟಂತಿದ್ದ ಆ ಘನತೆ ; ಗುರುವರ್ಯ ಯಾಮುನಾಚಾರ್ಯರ ಸಂಪರ್ಕಕ್ಕೆ ಬಂದವರಿಗೆಲ್ಲ ಇವು ಅನು ಭವವೇದ್ಯವಾಗುತ್ತಿತ್ತು. ಅಂತರ್ಯದಲ್ಲೂ ಬಾಹ್ಯದಲ್ಲೂ ಒಂದು ಅಪೂರ್ವ ನಿರ್ಮ ಲತೆ ಅವರಿದ್ದ ಕಡೆ ಹಬ್ಬಿ ನಿಲ್ಲುತ್ತಿತ್ತು. ಅಹಿಂಸೆ ಅವರಿಗೆ ಕೇವಲ ತತ್ವಜಿಜ್ಞಾಸೆಯ ವಿಷಯುವಾಗಿರಲಿಲ್ಲ, ಬಾಳನಿಯಮವಾಗಿತ್ತು. "ಮಾನವೀಯ ಬಾಂಧವ್ಯಗಳಲ್ಲಿ ತಾತ್ವಿಕ ಮೌಲ್ಯಗಳನ್ನು ನೆಲೆಗೊಳಿಸುವ ಏಕೈಕ ಸಾಧನೆ ಎಂದರೆ ಅಹಿಂಸೆಯಲ್ಲಿ ಶ್ರದ್ಧೆ" ಎನ್ನುತ್ತಿದ್ದರು ಪ್ರೊ. ಯಾಮುನಾಚಾರ್ಯರು. ಗಾಂಧೀದರ್ಶನ ಇಂಥ ಬಾಳಿನ ಊರು ಗೋಲು ಎಂಬುದನ್ನು ಸಾಕ್ಷಾತ್ಕರಿಸಿಕೊಂಡಿದ್ದ ಕೆಲವೇ ವ್ಯಕ್ತಿಗಳಲ್ಲಿ ಶ್ರೀ ಯಾಮುನಾಚಾರ್ಯರು ನಮ್ಮ ಹತ್ತಿರದ ಮಹಾವ್ಯಕ್ತಿ.

ಒಂದು ಸಾರಿ ನಾವು ಕೆಲವು ಕಿರಿಯರು ಅವರೊಡನೆ ಚರ್ಚೆ ನಡೆಸಿದ್ದೆವು. ಅವರ ಸಾನ್ನಿಧ್ಯದಲ್ಲಿ ಅಪರಿಚಿತರೂ ಆತ್ಮೀಯ ವಿಚಾರವಿನಿಮಯದಲ್ಲಿ ನಿಸ್ಸಂಕೋಚ ವಾಗಿ ತೊಡಗಿಬಿಡುತ್ತಿದ್ದರು. "ಭಾರತೀಯ ಸಮಾಜವಾದ ಎತ್ತಸಾಗಿದೆ ? ಹೇಗೆ ಸಾಗಿದೆ ? ನಮ್ಮ ತತ್ವಜ್ಞಾನದ ಪರಂಪರೆಯಲ್ಲಿ ನಮ್ಮ ಸಾಮಾಜಿಕ ಚೌಕಟ್ಟಿನಲ್ಲಿ ಸಮಾಜವಾದ ವಿರೂಪವಾಗಿ ಬಿಡುವುದಿಲ್ಲವೆ ? ಆರ್ಥಿಕ ಮತ್ತು ರಾಜಕೀಯ ಸಿದ್ಧಾಂತಗಳ ನೂತನ ಆವಿಷ್ಕಾರಗಳು ನಮ್ಮ ಧಾರ್ಮಿಕ ಪರಂಪರೆಗೆ ತೀರ ವಿರುದ್ಧ ಮಾರ್ಗಗಳಲ್ಲಿ ಹೊರಟಿವೆ. ಶುದ್ಧ ಸೈದ್ಧಾಂತಿಕ ವಿಶ್ಲೇಷಣೆ ನಮಗೆ ಅಸಾಧ್ಯವಾಗು

ತ್ತವೆ. ಹೊಸ ಹೊಸ ಆಕಾಂಕ್ಷೆಗಳು ಜನಮನವನ್ನಾವರಿಸಿ ನಿಲ್ಲುತ್ತಿರುವಾಗ ಹಳೆಯ ಮೌಲ್ಯಗಳನ್ನು ಕಳಚಿ ಬಿಸುಡಬೇಕಾಗುತ್ತದೆ "....ಎಂದೆಲ್ಲ ವಾದವಾಡುತ್ತ ವಿಚಾರ ಗೊಂದಲದಲ್ಲಿ ಸಿಕ್ಕಿಕೊಂಡಿದ್ದೆವು. ಎಂದಿನಂತೆ ಎಲ್ಲರ ದೃಷ್ಟಿಕೋನವೂ ಸರಿಯೇ ಎನ್ನುವಷ್ಟು ಆದರದ ಸ್ವಾಗತ ಶ್ರೀ ಯಾಮುನಾಚಾರ್ಯರಿಂದ ಸಿಗುತ್ತಿದ್ದುದೇ ನಮ್ಮ ಸ್ವಚ್ಛಂದ ತರ್ಕಕ್ಕೆ ದಾರಿಯಾಗಿತ್ತು. ಹಠಾತ್ತನೆ ಒಂದು ಪ್ರಶ್ನೆ ಆ ಗೋಷ್ಠಿಯ ಮುಂದೆ ಬಂದಿತು : " ಭಾರತೀಯ ಸಮಾಜವಾದಕ್ಕೆ ಒಂದು ಧ್ಯೇಯವಾಕ್ಯ ಬೇಕಾದರೆ ಅದನ್ನು ನಾವು ಹೊರಗಡೆಯೇ ಅರಸಬೇಕು. ನಾವು ಹೆಮ್ಮೆ ಪಡುವ ಪ್ರಾಚೀನ ಜ್ಞಾನಭಂಡಾರ ಅದನ್ನು ಒದಗಿಸಲಾರದು " ಎಂದರು ಕಿರಿಯ ಸಮಾಜವಾದಿ ಒಬ್ಬರು. ಶ್ರೀ ಯಾಮುನಾಚಾರ್ಯರು ನಸುನಕ್ಕು, "ಹಾಗಾದರೆ ನಮ್ಮ ಸಂಸ್ಕೃತಿ ಎಂದಿಗೂ ನವನವೋನ್ಮೇಷಶಾಲಿನಿಯಾದುದು ಎನ್ನುವುದು ಸುಳ್ಳಾದೀತು. ತಿಲಕರು, ರವೀಂದ್ರರು, ಗಾಂಧೀಜಿ, ವಿನೋಬಾ ಇವರೆಲ್ಲರ ಜ್ಞಾನನಿಧಿ ಅಸಂಗತವಾದೀತು" ಎಂದು ನುಡಿದು, ಮರುದನಿಯಲ್ಲೇ, "ಮಹಾಭಾರತದ ಒಂದು ಶ್ಲೋಕ ನನಗೆ ಬಹಳ ಕಾಲದಿಂದ ಮೆಚ್ಚುಗೆಯಾಗಿತ್ತು. ಸಾಮಾಜಿಕ ಆರ್ಥಿಕ ರಾಜಕೀಯ ಕ್ರಾಂತಿಗೆ ಬುನಾದಿಯಾಗಬಹುದಾದ ಉನ್ನತ ಆದರ್ಶ ಇಲ್ಲಿದೆ ಎಂದೆನಿಸುತ್ತಿತ್ತು. ಬಹಳ ವರ್ಷಗಳ ನಂತರ ಗಾಂಧೀಜಿಯ ಲೇಖನಗಳನ್ನೋದುತ್ತಿದ್ದಾಗ ಅವರೂ ಅದನ್ನು ಪೂರ್ಣವಾಗಿ ಅಂಗೀಕರಿಸಿ ಉದ್ಧರಿಸಿದ್ದುದನ್ನು ಕಂಡು ನನ್ನ ಹೃದಯ ಮನಸ್ಸುಗಳು ಅಪೂರ್ವ ಬೆಳಕಿನಿಂದ ತುಂಬಿದಂತಾಯಿತು. ಗಾಂಧೀಜಿ ನಮ್ಮ ಸಂಸ್ಕೃತಿಯ ಕೆನೆ. ಆತ ಮನೀಷಿ, ದ್ರಷ್ಟಾರ. ಆತನ ಜೀವನದರ್ಶನ ಅತ್ಯಮೋಘವಾದುದು ಎಂಬುದನ್ನರಿತೆ " ಎಂದರು. ಆ ಶ್ಲೋಕವನ್ನು ಅವರದೇ ಆದ ಮಧುರ ರೀತಿಯಲ್ಲಿ ಉಚ್ಚರಿಸಿದರು :

" ತ್ಯಜೇತ್ ಏಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥ "

[ಕುಲದ ಸಲುವಾಗಿ ಸ್ವಾರ್ಥ ತ್ಯಜಿಸು, ಗ್ರಾಮಕ್ಕಾಗಿ ಕುಲವನ್ನು ಬಿಡು, ಜನಪದದ ಹಿತಕ್ಕಾಗಿ ಗ್ರಾಮದ ತ್ಯಾಗವಾಗಲಿ ; ಆತ್ಮೋದ್ಧಾರಕ್ಕಾಗಿ ಪೃಥ್ವಿಯನ್ನೇ ತ್ಯಜಿಸು.]

ಆ ದಿನ ನಮ್ಮ ಮಧ್ಯೆ ಇದ್ದ ಉತ್ತರ ಭಾರತದ ಪ್ರಸಿದ್ಧ ಸಮಾಜ ಶಾಸ್ತ್ರಜ್ಞರು ಅದನ್ನು ಕೇಳಿ ಕುಣಿದಾಡಿಬಿಟ್ಟರು. ಗಾಂಧೀ ದರ್ಶನದ ತಿರುಳನ್ನೇ ಯಾಮುನಾಚಾರ್ಯರು ಮರುಧ್ವನಿಸಿದುದು ಎಲ್ಲರಿಗೂ ವೇದ್ಯವಾಯಿತು.

## ಭಾರತೀಯ ನವೋದಯ ಮತ್ತು ಗಾಂಧೀ

ಪ್ರೊ. ಹಿರಿಯಣ್ಣ, ಪ್ರೊ. ರಾಧಾಕೃಷ್ಣನ್‌ರಂತಹ ತತ್ವಶಾಸ್ತ್ರ ದಿಗ್ಗಜಗಳ ಶಿಷ್ಯವೃತ್ತಿಯನ್ನು ವಿನೀತರಾಗಿ ಕೈಗೊಂಡು ಬೆಳೆದ ಶ್ರೀ ಯಾಮುನಾಚಾರ್ಯರು ಅದೇ ಪರಂಪರೆಯನ್ನುಳಿಸಿಕೊಂಡು ವಿಶ್ವವಿದ್ಯಾನಿಲಯದ ಪದವಿಯನ್ನಲಂಕರಿಸಿದರು. ಅವರ ಪ್ರಥಮ ಗುರು ತಾತಂದಿರಾದ ಶ್ರೀ ಗೋವಿಂದಾಚಾರ್ಯ ಸ್ವಾಮಿಗಳು. ಶ್ರೀವೈಷ್ಣವ ಪಂಥದಲ್ಲಿ ವಿಚಾರ ಕ್ರಾಂತಿಯನ್ನೇ ಎಬ್ಬಿಸಿದ ಇಂಜಿನಿಯರ್–ವೇದಾಂತಿ ಶ್ರೀ ಗೋವಿಂದಾಚಾರ್ಯರು. ಅಸ್ಪೃಶ್ಯರೆನಿಸಿಕೊಂಡಿದ್ದವರಿಗೂ ಧರ್ಮದೀಕ್ಷೆ ಕೊಟ್ಟು ಸನ್ಮಾರ್ಗ ಪಂಥದಲ್ಲಿ ನೆಲೆಗೊಳಿಸಿದ ಕೀರ್ತಿ ಅವರದು. ಈ ಶತಮಾನದ ಆದಿಯಲ್ಲಿ ಹಿಂದೂ ಸಂಸ್ಕೃತಿ ಕಂಡ ಪುನಶ್ಚೇತನ ಶಕ್ತಿಗಳನ್ನು ಗುರುತಿಸಿ ಮುನ್ನಡೆದ ತಾತಂದಿರಿಂದ ಶ್ರೀ ಯಾಮುನಾಚಾರ್ಯರ ತತ್ವಶಾಸ್ತ್ರ ನಿಷ್ಠೆ ಪ್ರಗತಿಶೀಲ ಧಾರ್ಮಿಕ ಮೌಲ್ಯಗಳ ಕಡೆಗೇ ಹೆಜ್ಜೆ ಹಾಕುತ್ತಾ ಸಾಗಿತು. ಇಪ್ಪತ್ತನೆಯ ಶತಮಾನದ ಭಾರತೀಯ ನವೋದಯ ಶತಶತಮಾನಗಳ ಕಾಲ ಬೇರೂರಿ ನಿಂತ ಸನಾತನ ಜ್ಞಾನಾನುಭವಗಳ ಮೂಲಕವೇ ವಿಕಾಸವಾಗುತ್ತ ಸಾಗಿದೆ ಎಂಬುದರಲ್ಲಿ ಅವರಿಗೆ ಎಂದೂ ಸಂಶಯ ಉಳಿಯಲಿಲ್ಲ.

" ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ, ಥಿಯಸಾಫಿಕಲ್ ಸಂಘ, ಶ್ರೀ ರಾಮಕೃಷ್ಣ ಪಂಥಗಳಂತಹ ಚಳುವಳಿಗಳು ನಮ್ಮ ದೇಶದ ಅಂತರ್ಯಾಮಿ ಸತ್ತ್ವದ ಕುರುಹುಗಳು. ದಯಾನಂದ ಸರಸ್ವತಿ, ರವೀಂದ್ರನಾಥ ಠಾಕೂರರು, ರಾಮಕೃಷ್ಣ–ವಿವೇಕಾನಂದ, ಅರವಿಂದರು, ರಮಣಮಹರ್ಷಿಗಳೇ ಮೊದಲಾದ ದಿವ್ಯ ಜ್ಯೋತಿಗಳು ಬೆಳಗಿದ ಪಥ ನಮ್ಮ ಧಾರ್ಮಿಕ ಜೀವನದ ನವೋನವ ಆವಿಷ್ಕಾರ, ಜೀವಂತ ಸಂಸ್ಕೃತಿಯ ಜೀವಂತ ಕ್ರಾಂತಿಪಥ. ಮಾನವ ಸಮಾಜವನ್ನೇ ಸುಧಾರಣೆ ಮಾಡುವ ಧರ್ಮನವನೀತ ಇದರಲ್ಲಡಗಿದೆ. ಈ ಒಂದೆರಡು ಶತಮಾನಗಳ ತೀಕ್ಷ್ಣ ವಿಚಾರಮಂಥನ, ಅವಿರತ ತಪಸ್ಸಾಧನೆ ಮತ್ತು ಸಾಹಸಪೂರ್ಣ ಜೀವನ ಪ್ರಯೋಗಗಳಿಂದ ಭಾರತ ವಿಶ್ವಮಾನವನ ಚೇತನವಿಕಾಸಕ್ಕೆ ನೀಡಿದ ಅಮೂಲ್ಯ ನಿಧಿಯೇ ಈ ಮಹಾ ಪರಂಪರೆ. ಅದರ ಸಾರಸರ್ವಸ್ವದಂತೆ ಅರಳಿ ನಿಂತಿರುವ ಶಾಶ್ವತ ಸುಗಂಧ ಪುಷ್ಪ ಗಾಂಧೀಜಿ. ಅವರ ಬಾಳು, ಅವರ ನಿಷ್ಠೆ, ಅವರ ನಡೆ, ಅವರ ನುಡಿ ಎಲ್ಲವೂ ಒಂದು ಮಹಾ ದರ್ಶನಸಂಹಿತೆ. ಚಿಂತಿಸಿದಷ್ಟೂ ಅದು ಆಳ–ವಿಸ್ತಾರ."—ವೇದಾಂತಿ ಯಾಮುನಾಚಾರ್ಯರ ಅಂತರಾಳದ ನುಡಿಗಳಿವು.

## ಸ್ವಧರ್ಮೇ ನಿಧನ ಶ್ರೇಯಃ

ಗಾಂಧೀ ವಿಚಾರಮಾರ್ಗದ ಪ್ರಭಾವ ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ

ಶ್ರೀ ಯಾಮುನಾಚಾರ್ಯರನ್ನು ಸ್ಪರ್ಶಿಸಿತ್ತು. ಆದರೆ ಅವರು ಯಾವ ಪ್ರತ್ಯಕ್ಷ ರಾಜಕೀಯ ಚಳುವಳಿಯಲ್ಲೂ ಆಸಕ್ತರಾಗಲಿಲ್ಲ. ಭಾರತೀಯತೆಯ ಬಗ್ಗೆ ನಮ್ಮ ಯುವ ಜನರಲ್ಲಿ ಆಳವಾದ ಅಭೇದ್ಯವಾದ ರಚನಾತ್ಮಕವಾದ ಸದ್ಭಾವನೆ ಉಂಟಾದಲ್ಲದೆ ನಮ್ಮ ಸ್ವಾತಂತ್ರ್ಯಕ್ಕೆ ಬೆಲೆ ಬರಲಾರದು ಎಂಬ ನಂಬಿಕೆ ಮಾತ್ರ ಅವರಲ್ಲಿ ಬೇರೂರಿತ್ತು. "ನನ್ನ ಉಪಾಧ್ಯಾಯ ವೃತ್ತಿಯಲ್ಲಿ ಧಾರ್ಮಿಕ ನಿಷ್ಠೆ, ನನ್ನ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಸಾಂಸ್ಕೃತಿಕ ಪ್ರಜ್ಞೆಯ ಜಾಗೃತಿ—ಇವು ನನ್ನ ಸ್ವಧರ್ಮ ಎಂದು ಗಾಂಧೀ ಜೀವನ ಸಂದೇಶ ನನಗೆ ಬೋಧಿಸಿತು" ಎಂದು ಪದೇ ಪದೇ ಹೇಳುತ್ತಿದ್ದರು. ಸ್ವಧರ್ಮದ ಅರಿವಾಗುವುದು ಎಲ್ಲರಿಗೂ ಸುಲಭವಲ್ಲ. ಸ್ವಾರ್ಥದಮನ ಇಲ್ಲದೆ ಆತ್ಮ ನಿರೀಕ್ಷಣೆ ಅಸಾಧ್ಯ. ನಾವು ಭ್ರಮಿಸುವ ಇಂದ್ರಿಯಭೂಯಿಷ್ಠವಾದ ಅಭಿರುಚಿಗಳು, ನಾವು ಆಕಾಂಕ್ಷಿಸುವ ಸುಲಭ ಭೋಗಜೀವನ, ಬುದ್ಧಿಯ ಜಾಣ್ಮೆಯೇ ಜ್ಞಾನದ ಪರಮಾವಧಿ ಎಂಬ ನಮ್ಮ ವಿಕೃತ ತರ್ಕ ಎಲ್ಲವೂ ನಮ್ಮ ಸ್ವಾಭಾವಿಕ ಸಹಜ ವಿಕಾಸ ಮಾರ್ಗಕ್ಕೆ ಅಡ್ಡಿಗಳಾಗುತ್ತವೆ. "ಸಾ ವಿದ್ಯಾ ಯಾ ವಿಮುಕ್ತಯೇ" ನಮ್ಮನ್ನು ನಮ್ಮದೇ ಆದ ಸಂಕೋಲೆಗಳಿಂದ ಬಿಡಿಸುವುದೇ ವಿದ್ಯೆ—ಎಂಬ ಪ್ರಾಚೀನ ಉಕ್ತಿ ಶ್ರೀ ಯಾಮುನಾಚಾರ್ಯರ ನುಡಿಗಳಲ್ಲಿ ಹಾಸು ಹೊಕ್ಕಾಗಿ ಸೇರಿರುತ್ತಿತ್ತು. ಲೋಕಸಂಗ್ರಹಾರ್ಥವಾಗಿ ನಿಃಸ್ವಾರ್ಥ ಸೇವೆ, ಅದಕ್ಕಾಗಿಯೇ ನಮ್ಮ ಸರ್ವವಿಧ ಶಕ್ತಿಗಳನ್ನು ಬೆಳೆಸಿಕೊಳ್ಳುವಂತಹ ಸರಳ ಸಂಯಮ ಜೀವನ, ಈ ಸಾಧನೆಯಲ್ಲಿ ಸ್ವಧರ್ಮದ ದರ್ಶನವಾದೀತು. ಸಹಜ ಸ್ವಧರ್ಮವನ್ನೇ ನಮ್ಮ ಸುತ್ತಲಿನ ಜೀವನಕ್ಕೆ ಅಳವಡಿಸಿಕೊಂಡು ಬಾಳನ್ನು ರೂಪಿಸಿಕೊಂಡಾಗ ಅದು 'ಸ್ವದೇಶೀ' ಅನ್ನಿಸಿಕೊಳ್ಳುತ್ತದೆ. ಗಾಂಧೀಜಿಯವರ ದಿನಚರಿ ಮತ್ತು ಅವರ ಸ್ವದೇಶೀ ವ್ರತ ಈ ಸಾಧನೆಗೆ ಅದ್ವಿತೀಯ ಮಾರ್ಗದರ್ಶನ. 'ಅತ್ಯಂತ ಚಿಕ್ಕ ಕ್ರಿಯೆಯಲ್ಲೂ ನಮ್ಮ ಈ ಸ್ವಧರ್ಮದ ಮುದ್ರೆ ಅನಿವಾರ್ಯವಾಗಿ ಅಚ್ಚೊತ್ತಿ ನಿಲ್ಲುತ್ತದೆ' ಅನ್ನುವ ಗಾಂಧೀ ವಾಣಿಯಲ್ಲಿ ಶ್ರೀ ಯಾಮುನಾಚಾರ್ಯರಿಗೆ ಅಪಾರ ಶ್ರದ್ಧೆಯಿತ್ತು.

'ವೇದ ಗೃಹ' ಅವರ ಮನೆಯ ಹೆಸರು. ಹಲವು ತಲೆಮಾರುಗಳಿಂದ ಅವರ ಪೂರ್ವಿಕರು ಸಮಾಜದಲ್ಲಿ ಸುಪ್ರತಿಷ್ಠಿತ ವ್ಯಕ್ತಿಗಳು. ಶ್ರೀ ಯಾಮುನಾಚಾರ್ಯರಂತೂ ಇಂಗ್ಲಿಷ್ ಭಾಷಾಪಾಂಡಿತ್ಯ ಪಡೆದುಕೊಂಡ ಸುಪ್ರಸಿದ್ಧ ಪ್ರಾಧ್ಯಾಪಕರು. ಇಂಗ್ಲಿಷ್ ಪ್ರಭುತ್ವದಡಿಯಲ್ಲಿ ಶ್ರೇಷ್ಠ ವರ್ಗದವರೆನಿಸಿಕೊಂಡು ಪಾಶ್ಚಾತ್ಯ ಶ್ವೇತಪ್ರಭುಗಳ ಅನುಕರಣೆಯನ್ನೇ ಅತ್ಯಾಧುನಿಕ ನಾಗರಿಕತೆ ಎಂದು ನಂಬಿ, ಭಾರತೀಯ ಜೀವನ ಮೌಲ್ಯಗಳನ್ನು ತುಚ್ಛೀಕರಿಸುತ್ತಿದ್ದ 'ಸಾಹೇಬರು'ಗಳ ಕಾಲ ಅದು. ವಿಶ್ವವಿದ್ಯಾನಿಲಯಗಳ ತತ್ವಶಾಸ್ತ್ರ ವಿಭಾಗವೂ ಪಶ್ಚಿಮ ಪ್ರಭಾವಕ್ಕೇ ಒಳಗಾಗಿ ಭಾರತೀಯ ಜ್ಞಾನಪರಂಪರೆಗೆ ಉನ್ನತ ವಿದ್ಯಾಪೀಠಗಳಲ್ಲಿ ಸ್ಥಾನವನ್ನು ಯಾಚಿಸುವ ದೌರ್ಭಾಗ್ಯ ನಮ್ಮದಾಗಿತ್ತು. ಈ

ಚೌಕಟ್ಟಿನಲ್ಲಿ ಕೆಲಸ ಮಾಡುವಾಗಲೂ ಶ್ರೀ ಯಾಮುನಾಚಾರ್ಯರ ಬೋಧನಾಕ್ರಮವೇ ವಿಶಿಷ್ಟ ರೀತಿಯದಾಗಿತ್ತು. ಅವರ ಶಿಷ್ಯಕೋಟಿ ಮುಂದೆ ಸಂಶೋಧನಾ ಶಾಖೆಗಳಲ್ಲಿ ಭಾರತೀಯ ತತ್ವಶಾಸ್ತ್ರಗಳ ಮೂಲ ಮೌಲ್ಯಗಳನ್ನೇ ಎತ್ತಿಹಿಡಿದು ನಿರ್ಮಾಣ ಮಾಡಿದ ಮಾಡುತ್ತಿರುವ, ಅಮೂಲ್ಯ ಸಾಹಿತ್ಯವೇ ಇದಕ್ಕೆ ಸಾಕ್ಷಿ.

"ಅರವಿಂದರು, ರಾಮಕೃಷ್ಣರು, ರಮಣಮಹರ್ಷಿ ಇಂಥವರುಗಳನ್ನು ಸ್ವಲ್ಪ ಸ್ವಲ್ಪವಾಗಿ ಅಂಗೀಕರಿಸಿದರೂ ನಮ್ಮ ಇಂಗ್ಲಿಷ್-ಪಕ್ಷಪಾತಿ ವಿದ್ವಾಂಸರು ಗಾಂಧೀಜಿ ಒಬ್ಬ ಶ್ರೇಷ್ಠ ವಿಚಾರವಂತ ಎಂಬುದನ್ನು ಪ್ರಾಮಾಣಿಕವಾಗಿ ಅಂಗೀಕರಿಸಲೇ ಇಲ್ಲ" ಎನ್ನುತ್ತಿದ್ದರು ಶ್ರೀ ಯಾಮುನಾಚಾರ್ಯರು. "ಇದಕ್ಕೆ ಕಾರಣ ನಮ್ಮ ಸಾಂಸ್ಕೃತಿಕ ದಾಸ್ಯ. ಗಾಂಧೀಯುಗ ನಮ್ಮ ಮೌಢ್ಯವನ್ನು ಹರಿಸುವ ಪ್ರಯತ್ನದಲ್ಲಿ ಒಂದು ಕ್ರಾಂತಿಕಾರೀ ಹೆಜ್ಜೆ. ಒಂದಲ್ಲ ಒಂದು ದಿನ ನಮ್ಮ ವಿಶ್ವವಿದ್ಯಾನಿಲಯಗಳ ಚಿಂತನಕ್ಷೇತ್ರ ಗಾಂಧಿಯವರನ್ನಂಗೀಕರಿಸಲೇ ಬೇಕು. ಮಾನವೀಯ ಪ್ರಜ್ಞೆ ನಮ್ಮ ತತ್ವಶಾಸ್ತ್ರಗಳೆಲ್ಲದರ ಆಧಾರ ಶೃತಿಯಾಗಬೇಕಾಗಿರುವ ಈ ಕಾಲಕ್ಕೆ ಈ ಮಹಾ ವಿಭೂತಿಯ ಸತ್ಯಶೋಧನೆ, ಅಹಿಂಸಾತ್ಮಕ ಜೀವನ ದರ್ಶನ ಮತ್ತು ಸತ್ಯಾಗ್ರಹಮಾರ್ಗ ಇವನ್ನುಳಿದು ಯಾವ ಜ್ಞಾನಸೌಧವೂ ನಿಲ್ಲಲಾರದು. ಭಾರತಕ್ಕೆ ಒಂದು ಅಪೂರ್ವ ಅವಕಾಶ ಇರುವಾಗ ವಿದ್ವಜ್ಜನ ತಮ್ಮ ಸ್ವಧರ್ಮವನ್ನರಿತು ಬಾಳನ್ನು ರೂಪಿಸಲು ಸಿದ್ಧರಾದರೆ ಮಾತ್ರ ಇತಿಹಾಸ ಅವರನ್ನು ಸ್ಮರಿಸೀತು. ಇಲ್ಲವಾದರೆ ನಾವು ಕ್ರಾಂತಿ ಪ್ರವಾಹದಲ್ಲಿ ಕೊಚ್ಚಿಹೋಗುತ್ತೇವೆ"—ವಿದ್ವತ್ ಗೋಷ್ಠಿಗಳಲ್ಲಿ ಶ್ರೀ ಯಾಮುನಾಚಾರ್ಯರು ಮೊಳಗಿಸಿದ ದುಂದುಭಿ ಇದು.

## ಗಾಂಧೀ ಗ್ರಂಥಮಾಲೆ

೧೯೫೬ರಲ್ಲಿ ಶ್ರೀ ಯಾಮುನಾಚಾರ್ಯರು ಮಹಾರಾಜಾ ಕಾಲೇಜಿನಿಂದ ನಿವೃತ್ತರಾದರು. ಆ ಸಮಯಕ್ಕೆ ನಾವು ಕೆಲವು ಸ್ನೇಹಿತರು ಅವರನ್ನು ಕಂಡು ಗಾಂಧೀ ಗ್ರಂಥಮಾಲೆಯ ಯೋಜನೆಯ ನೇತೃತ್ವ ವಹಿಸಲು ಕೇಳಿಕೊಂಡೆವು. ಸಂಪಾದಕೀಯ ಮಂಡಲಿಯ ಸದಸ್ಯರಾಗಲು ಒಪ್ಪಿದರೂ ಇತರ ಸದಸ್ಯರು ಗಾಂಧೀ ಸಾಹಿತ್ಯ ನಿರ್ಮಾಣದಲ್ಲಿ ಸುಪ್ರಸಿದ್ಧ ಬರಹಗಾರರೂ ಸ್ವಾತಂತ್ರ್ಯ ಯೋಧರೂ ಆಗಿದ್ದುದನ್ನು ನೋಡಿ ಪ್ರಧಾನ ಸಂಪಾದಕತ್ವವನ್ನು ವಹಿಸಲು ವಿನಯದಿಂದ ಹಿಂಜರಿದರು. ಆಗ ಬಿಹಾರಿನ ರಾಜ್ಯಪಾಲರಾಗಿದ್ದ ಶ್ರೀ ದಿವಾಕರರೂ, ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಶ್ರೀ ಕುವೆಂಪು ಅವರೂ ಸಮಿತಿಯಲ್ಲಿದ್ದು ವಿಶೇಷ ಪ್ರಯತ್ನದಿಂದ ಶ್ರೀ ಆಚಾರ್ಯರನ್ನು ಒಪ್ಪಿಸಿದರು. ಹಲವಾರು ಇತರ ವಿಶ್ವವಿದ್ಯಾನಿಲಯಗಳು ನಾಲ್ಕು

ಪಟ್ಟು ಹೆಚ್ಚು ಸಂಭಾವನೆಯನ್ನು ನೀಡಿ ಅವರ ಸೇವೆಯನ್ನು ಬಯಸಿದ್ದರೂ ಕೂಡ ಗಾಂಧೀ ವಿಚಾರ ವಾಙ್ಮಯವನ್ನು ಕನ್ನಡಿಗರಿಗೆ ಒದಗಿಸಿಕೊಡುವ ಕಾರ್ಯ ಅತ್ಯಂತ ಪವಿತ್ರವೆಂದೇ ಭಾವಿಸಿ ಒಂದು ವ್ರತದೀಕ್ಷೆಯಂತೆ ಈ ಕಾರ್ಯ ಕೈಗೊಂಡರು. ಗಾಂಧೀ ಸ್ಮಾರಕ ನಿಧಿ ಅತ್ಯಲ್ಪ ವೆಚ್ಚದಲ್ಲಿ ಅತ್ಯಮೂಲ್ಯ ಸೇವಾಕಾರ್ಯವನ್ನು ಅವರ ಮೂಲಕ ಸಾಧಿಸಿದುದು ನಮಗೆ ಹೆಮ್ಮೆಯೆನಿಸಿತು. ಆರು ವರ್ಷಗಳಲ್ಲಿ ಗಾಂಧೀಜಿಯ ಎಲ್ಲ ಬರಹಗಳನ್ನೂ ಪರಿಶೀಲಿಸಿ, ವಿಷಯ ವಿಂಗಡಣೆ ಮಾಡಿ, ಗ್ರಂಥ–ಸಂಪಾದನೆಯನ್ನು ನಿರ್ವಹಿಸಿ, ಇಂಗ್ಲಿಷ್ ಕರಡುಪ್ರತಿ ತಯಾರಿಸಿ, ನಂತರ ಕನ್ನಡ ಭಾಷಾಂತರವನ್ನು ಪರೀಕ್ಷಿಸಿ ಸುಮಾರು ಎಂಟು ಸಾವಿರ ಪುಟಗಳನ್ನು ಇಪ್ಪತ್ತು ಸಂಪುಟಗಳಲ್ಲಿ ಪ್ರಕಟಿಸಿದುದು ಬೇರೆ ಎಲ್ಲ ಭಾಷಾ ವಿಭಾಗಗಳಿಗೂ ಒಂದು ಮಾದರಿಯಾಗಿ ನಿಂತಿತು. ಈ ತಪಸ್ಸಿನ ಫಲವಾಗಿ ಅಖಿಲಭಾರತ ಗಾಂಧೀ ಪರಿವಾರಕ್ಕೆ ಶ್ರೀ ಆಚಾರ್ಯರು ಒಂದು ಅಮೂಲ್ಯ ಜ್ಞಾನನಿಧಿಯಾದರು.

ಗ್ರಂಥಮಾಲೆಗೆ ಮುನ್ನುಡಿಯಾಗಿ ಗಾಂಧೀಜಿಯ ಮಾತುಗಳಲ್ಲೇ ಒಂದು 'ನಿವೇದನ'ದ ಕರಡು ಪ್ರತಿಯನ್ನು ಶ್ರೀ ಯಾಮುನಾಚಾರ್ಯರು ಇಂಗ್ಲಿಷಿನಲ್ಲಿ ಸಿದ್ಧ ಮಾಡಿದರು. ಸಮಗ್ರ ಗಾಂಧೀ ಸಾಹಿತ್ಯದಿಂದ ಆಯ್ದು ಮೂವತ್ತೆರಡು ಸಣ್ಣ ವಾಕ್ಯಗುಚ್ಛಗಳಲ್ಲಿ ಆ ಮಹಾಪ್ರವಾದಿಯ ಸತ್ಯಭೂಯಿಷ್ಠವಾದ ಅಹಿಂಸಾ ತತ್ತ್ವ ದರ್ಶನ ಸರಳಸುಂದರವಾಗಿ ಸುಸ್ಪಷ್ಟವಾಗಿ ಮೂಡಿಬಂದಿತ್ತು. ಸಂಪಾದಕೀಯ ಮಂಡಲದ ಮೊದಲ ಸಭೆಯಲ್ಲಿ ಈ ಮೊದಲ ಸಂಪಾದಿತ ಸಂಕಲನವನ್ನು ಓದುವಾಗ ಶ್ರೀ ಯಾಮುನಾಚಾರ್ಯರ ಹೃದಯ ತುಂಬಿಬಂದು ಕಣ್ಣುಗಳು ಹನಿಗೂಡಿದ್ದವು. ಕೇಳಿದ ಶ್ರೋತೃಗಳು ಹತ್ತು ನಿಮಿಷದ ಆ ಅವಧಿಯಲ್ಲಿ ಒಂದು ದಿವ್ಯಾತ್ಮ ಮಹಾ ಮೇರುವಿನ ಗೌರೀಶಂಕರವನ್ನು ತಲುಪಿಬಂದವರಂತೆ ರೋಮಾಂಚನದಿಂದ ಪುಳಕಿತ ರಾದೆವು. ಶ್ರೀ ಕುವೆಂಪು ಅವರ ಕವಿ ಹೃದಯ ಒಂದು ಅಪೂರ್ವ ದರ್ಶನಸಾನ್ನಿಧ್ಯ ವನ್ನೇ ಅನುಭವಿಸಿದಂತೆ ಕಂಡಿತು. ಕೊನೆಯ ವಾಕ್ಯವನ್ನು ಮುಗಿಸಿ ಶ್ರೀ ಯಾಮುನಾ ಚಾರ್ಯರು ಕುಳಿತುಕೊಳ್ಳುವ ಮುನ್ನವೇ ಶ್ರೀ ಕುವೆಂಪು ಥಟ್ಟನೆದ್ದು "ಇದೊಂದು ಪೂರ್ಣದರ್ಶನದ ಕಾವ್ಯಮಯ ಸಂದೇಶ. ಇದನ್ನು ನಾನೇ ಕನ್ನಡಿಸಿ ಕೊಡುತ್ತೇನೆ. ಎಲ್ಲ ಸಂಪುಟಗಳ ಆದಿಭಾಗದಲ್ಲೂ ಈ ಸಣ್ಣ ಸಂಕಲನ ಗಾಂಧೀ ಅವರ 'ನಿವೇದನೆ' ಆಗಿ ಪ್ರಕಟವಾಗಲಿ" ಎಂದರು. ಆ ಮಹಾವಿದ್ವಾಂಸ ಗೋಷ್ಠಿ ತುಂಬು ಹೃದಯದಿಂದ 'ಅಸ್ತು' ಎಂದಿತು. ಗಾಂಧೀ ಸಾಹಿತ್ಯದ ಸಂಪುಟ ಶ್ರೇಣಿಗೆ ಮಂಗಳ ತಿಲಕಧಾರಣಾ ಮಹೋತ್ಸವದ ದಿನವೋ ಎಂಬಂತೆ ಆ ದಿನ ನಮ್ಮ ಮನಸ್ಸಿನಲ್ಲಿ ಅಜ್ಯೋತಿ ನಿಂತಿತು. ಆ ನಿವೇದನದ ಕೆಲವು ಪ್ರಧಾನ ವಾಕ್ಯಸಮುಚ್ಚಯಗಳಿಂದ ಶ್ರೀ ಯಾಮುನಾ ಚಾರ್ಯರು ಕಡೆದು ನಿಲ್ಲಿಸಿದ ಗಾಂಧೀ ವಿಚಾರ ದರ್ಶನದ ದಿವ್ಯಶಿಲ್ಪ ಸುಸ್ಪಷ್ಟ ವಾಗುತ್ತದೆ :

" ....ಸತ್ಯದ ಸಮ್ಯಕ್ ದರ್ಶನವೇ ಆತ್ಮಸಾಕ್ಷಾತ್ಕಾರ; ಅದೇ ಜೀವನದ ಅಂತಿಮ ಗುರಿ. ಅಂದರೆ ಪರಿಪೂರ್ಣತೆಯ ಸಿದ್ಧಿ. ನನ್ನ ನ್ಯೂನತೆಗಳು ಎಷ್ಟೆಂಬುದನ್ನು ನಾನು ವ್ಯಸನದಿಂದ ಅರಿತಿದ್ದೇನೆ. ಆ ಅರಿವು ನನಗೆ ದುಃಖ ತರುವಷ್ಟೂ ಇದೆ. ಈ ಅರಿವೇ ನನ್ನ ಸರ್ವಶಕ್ತಿಯ ಮೂಲ; ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ....

....ದಾರಿ ನನಗೆ ಗೊತ್ತು : ಅದು ನೇರ ಮತ್ತು ಇಕ್ಕಟ್ಟು–ಕತ್ತಿಯ ಅಲುಗಿನಂತೆ; ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ.

........ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ ನಾನೆಂದಿಗೂ ಶ್ರದ್ಧೆಗೆಡುವುದಿಲ್ಲ........

... ....ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ ಮತ್ತು ಪ್ರೇಮ........

ಅಹಿಂಸೆ ನನ್ನ ದೇವರು ; ಸತ್ಯ ನನ್ನ ದೇವರು : ಅಹಿಂಸೆಯ ಸಾಧನೆಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ—'ನನ್ನ ಮೂಲಕವೇ ಅದರ ಸಿದ್ಧಿ' ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ —" ನನ್ನ ಮೂಲಕವೇ ಅದರ ಸಿದ್ಧಿ."

....ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧ ವಿಮುಕ್ತವಾದಾಗಲೇ ಭರತಖಂಡ ಸತ್ಯಸ್ವರೂಪನಾದ ಭಗವಂತನನ್ನು ಪೂಜಿಸಬಲ್ಲುದು.

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದರ್ಶಿಸ ಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯ ವಾಗಲೇಬೇಕು. ಈ ಹಂಬಲವನ್ನು ತುಂಬಿಕೊಂಡವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ....

....ಆತ್ಮಶ್ರೀ ನಿಯಮಕ್ಕೆ ತನ್ನದೇ ಆದ ಒಂದು ಪ್ರತ್ಯೇಕ ಕ್ಷೇತ್ರವಿದೆ ಎಂಬುದನ್ನು ನಾನು ಒಪ್ಪಲಾರೆ. ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ....

ಈಶ ಸೇವೆ ಅರ್ಥಾತ್ ಮಾನವ ಸೇವೆಯೇ ನನ್ನ ಧರ್ಮ....ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ತ್ಯಾಗ ಧರ್ಮ ಒಂದರಿಂದಲೇ.

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡಬಿಡದೆ ದುಡಿಯುವುದೇ

ನನ್ನ ಮೋಕ್ಷ ಪಥ. ಜೀವಸಮುಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ.

ಗಾಂಧೀ ಪಂಥ ಎಂಬುದೊಂದಿಲ್ಲ...ಯಾವ ನೂತನ ತತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯ ಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ....

....ಸತ್ಯ ಅಹಿಂಸೆಗಳು ಅಜರಾಮರ. ಆದರೆ ಗಾಂಧೀ ಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶಯೋಗ್ಯವೇ ಸರಿ.... ....ಸತ್ಯ ಅಹಿಂಸೆಗಳನ್ನು ಕೇವಲ ವೈಯಕ್ತಿಕ ಅನುಷ್ಠಾನದ ತತ್ವಗಳನ್ನಾಗಿ ಮಾಡಿಕೊಂಡರೆ ಸಾಲದು ; ಸಮಾಜ ಸಮುದಾಯಗಳು, ರಾಷ್ಟ್ರಗಳು ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು. ...ನನ್ನದು ಧರ್ಮ ಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗಿಂತ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಅಪಾಯ ಯಾವಾಗಲೂ ಇದ್ದೇ ಇದೆ. ಇತರರಿಂದ ನಾನು ನಿರೀಕ್ಷಿಸುವಂತೆಯೇ ಸ್ವವಿಮರ್ಶೆಯಲ್ಲಿ ಸತ್ಯದಂತೆಯೇ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ.

....ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರದುರನೆ ನೋಡಿದರೂ ಸರಿ. ನೀನು ಅದರ ದೃಷ್ಟಿಗೆ ದೃಷ್ಟಿಕೊಟ್ಟು ನಿಲ್ಲಬೇಕಾಗುತ್ತದೆ, ಭೀತಿ ಬೇಡ. ನಿನ್ನ ಹೃದಯದಲ್ಲಿ ನೆಲೆಸಿ ಹೀಗೆಂದು ಹೇಳುತ್ತಿರುವ ಆ ಅಣುರೂಪಿಯಲ್ಲಿ ನಿನಗೆ ಶ್ರದ್ಧೆಯಿರಲಿ. ಯಾವುದಕ್ಕಾಗಿ ನೀನು ಬದುಕಿದ್ದೀಯೋ ಯಾವುದಕ್ಕಾಗಿ ನೀನು ಮಡಿಯಬೇಕೋ ಅದಕ್ಕಾಗಿ ಸರ್ವಸ್ವವನ್ನೂ ತ್ಯಜಿಸು ; ಆದರೆ ಸತ್ಯಕ್ಕೆ ಸಾಕ್ಷಿಯಾಗಿ ಬಾಳು."

ಗಾಂಧೀ ನುಡಿಗಳು
[ಗಾಂಧೀ ಗ್ರಂಥಮಾಲೆಯ ' ನಿವೇದನ ' ದಿಂದ]
(ಕುವೆಂಪು ಅವರ ಭಾಷಾಂತರ)

**ಜೀವನ ಪರಿವರ್ತನೆ**

ಕೇವಲ ಬೌದ್ಧಿಕ ತತ್ವಪ್ರತಿಪಾದನೆ ಶ್ರೀ ಯಾಮುನಾಚಾರ್ಯರಿಗೆ ಹೆಚ್ಚು ರುಚಿಸುತ್ತಿರಲಿಲ್ಲ. ಆದರೆ ಅವರ ಸಂಕೋಚ ಸ್ವಭಾವ ತಮ್ಮ ಆಚಾರನಿಷ್ಠೆಯಲ್ಲಿ ಯಾವ ಡಾಂಭಿಕ ಪ್ರದರ್ಶನವೂ ನುಸುಳಿ ಬರದಂತೆ ಅವರನ್ನು ಕಾಯುತ್ತಿತ್ತು. ಕುರುಡು

ಧಾರ್ಮಿಕ ಸಂಪ್ರದಾಯಗಳಿಂದ ಮೂಲ ತಾತ್ವಿಕ ಮೌಲ್ಯಗಳಿಗೆ ಆಗಿರುವ ಅಪಾಯ ವನ್ನವರು ಅರಿತಿದ್ದರು. ಆದರೂ ಕಾಲಜೀರ್ಣವಾದ ಸಂಪ್ರದಾಯಗಳ ಕೆಲವು ರೂಢಮೂಲ ಪದ್ಧತಿಗಳ ಹಿಂದೆ ಯಾವ ಉದಾತ್ತ ತಾತ್ವಿಕ ದೃಷ್ಟಿ ಇತ್ತು ಎಂಬು ದನ್ನು ಅತ್ಯಂತ ಉತ್ಸಾಹದಿಂದ ವಿವರಿಸುತ್ತಿದ್ದರು. ಸಮಕಾಲೀನ ಯುಗದ ಬೇಡಿಕೆ ವಿಜ್ಞಾನ ಮತ್ತು ಆಧ್ಯಾತ್ಮಿಕತೆ; ಸಾಂಪ್ರದಾಯಿಕ ಮತಧರ್ಮ ಮತ್ತು ರಾಜ್ಯ ಶಾಸ್ತ್ರಗಳು ಇನ್ನುಳಿಯಲಾರವು ಎಂದೇ ಅವರ ನಂಬಿಕೆಯಾಗಿತ್ತು. "ಪವಾಡಗಳನ್ನೂ ಅತಿಮಾನವ ಶಕ್ತಿಗಳ ಆರೋಪವನ್ನೂ, ನಮ್ಮ ಆಚಾರ್ಯ ಪುರುಷರಿಗೆ ಹೊರಿಸಿ ಅವರನ್ನು ದೂರಮಾಡಿದ್ದೇವೆ. ಗಾಂಧೀದೃಷ್ಟಿಯ ನಿಚ್ಚಳತೆಯಿಂದ ಎಲ್ಲ ಸಂತರ, ಪ್ರವಾದಿಗಳ ಜೀವನನಿಷ್ಠೆಯನ್ನೂ, ಬಲಿದಾನದಿಂದ ಅವರು ಎತ್ತಿಹಿಡಿದ ಮಾನವೀಯ ಮೌಲ್ಯಗಳನ್ನೂ ಅರಿತರೆ ನಮ್ಮ ಆಧ್ಯಾತ್ಮಿಕತೆ ಉಳಿದೀತು" ಎಂದಿದ್ದಾರೆ ಶ್ರೀ ಯಾಮು ನಾಚಾರ್ಯರು. "ನನ್ನ ಅಹಿಂಸೆ ಯಾವ ಧರ್ಮ–ಪರಿವರ್ತನೆಯನ್ನೂ ಒಪ್ಪುವುದಿಲ್ಲ. ಬದಲಾಗಿ ಹಿಂದುವನ್ನು ಶ್ರೇಷ್ಠ ಹಿಂದುವನ್ನಾಗಿ, ಮುಸ್ಲಿಮನನ್ನು ಶ್ರೇಷ್ಠ ಮುಸ್ಲಿಮ ನನ್ನಾಗಿ, ಕ್ರಿಸ್ತಾನನನ್ನು ಕ್ರಿಸ್ತನ ಶ್ರೇಷ್ಠ ಅನುಯಾಯಿಯನ್ನಾಗಿ ಮಾಡಿ ಧರ್ಮ ಸಮನ್ವಯ ದೃಷ್ಟಿಯನ್ನು ಬೆಳೆಸುತ್ತದೆ." ಗಾಂಧೀಜಿಯ ಈ ವಿಚಾರಸರಣಿ ಶ್ರೀ ಯಾಮುನಾಚಾರ್ಯರಿಗೆ ಮನೋಜ್ಞವೆನಿಸಿತ್ತು.

"ಗಾಂಧೀದರ್ಶನದ ಬೆಳಕಿನಲ್ಲಿ ನನ್ನ ಹುಟ್ಟು ಧರ್ಮ ಶ್ರೀವೈಷ್ಣವ ಸಂಪ್ರದಾಯದ ಪ್ರವೃತ್ತಿಮಾರ್ಗ, ಶರಣಾಗತಿ ತತ್ವಗಳನ್ನು ಅಭ್ಯಸಿಸಿದಾಗ ಶ್ರೀ ರಾಮಾನುಜರ ಧೀರೋದಾತ್ತ ಸಾಹಸ ಜೀವನ ನನ್ನ ಅಂತರ್ಯದಲ್ಲಿ ಮತ್ತೆ ಜೀವಂತವಾಗಿ ನಿಂತಿತು. "ಶೇಮುಷೀ ಭಕ್ತಿ ರೂಪಾ" ಎಂಬ ಸನಾತನ ಅಮರವಾಣಿ ಗಾಂಧೀಜಿಯ ರಾಮ ನಾಮ ಪ್ರಾರ್ಥನಾ ಶ್ರದ್ಧೆಯಿಂದ ಸಮಕಾಲೀನ ಸಾಮಾಜಿಕ ಪ್ರಜ್ಞೆಗೂ ಪುಟಕೊಡಬಲ್ಲ ಅಮೋಘಶಕ್ತಿ ಎಂಬ ಅರಿವಾಯಿತು. ಆವರಿಸಿ ನಿಂತಿರುವ ಹಿಂಸಾಪ್ರವೃತ್ತಿಗಳ ವಿಕಟ ನೃತ್ಯದಲ್ಲಿ ನಿರ್ಭೀತಸತ್ಯಾಗ್ರಹಿಯ ಏಕಮೇವ ಆಧಾರ ಮಾನವನ ಹೃದಯದಲ್ಲಿನ ಪ್ರೇಮ ಶಕ್ತಿಯ ಸ್ಫುರಣ. ಹೃದಯ ಹೃದಯಗಳನ್ನು ಬೆಸೆದು ಮಾನವತೆಯನ್ನು ಸುಭದ್ರ ಬುನಾದಿಯ ಮೇಲೆ ಸುಪ್ರತಿಷ್ಠಿತಗೊಳಿಸಲು ನಮಗಿರುವ ಸಾಧನ ನಮ್ರತೆ ಭಕ್ತಿ ಗಳಿಂದ ಹುಟ್ಟಿಬರುವ ವ್ಯಕ್ತಿನಿಷ್ಠ ಅಹಿಂಸಾಪಥ. ಸತ್ಯ–ಅಹಿಂಸೆಗಳು ಪರ್ವತಗಳಷ್ಟೇ ಪುರಾತನವಾದುವು, ಆದರೆ ಅವುಗಳನ್ನು ಜೀವನಕ್ಕೆ ಅನ್ವಯ ಮಾಡುವ ಕಲೆ ಸಾಧು ಸಂತರ ಬಾಳಿನಿಂದಲೇ ನಮಗೆ ಅರಿವಾಗುವುದು" ಎನ್ನುತ್ತಿದ್ದರು ಶ್ರೀ ಆಚಾರ್ಯರು.

ರಸವನ್ನು ವರ್ಧಿಸಿ ವಿರಸವನ್ನು ದಮನಮಾಡುವ ಸಮರಸ ಜೀವನ ತಮ್ಮ ಆಂತರಿಕ ಪ್ರಶಾಂತತೆಗೆ ಅವಶ್ಯಕವೆಂದರಿತು ತಮ್ಮ ಬಾಳಿನ ದಿನಚರಿಯನ್ನೂ ತಮ್ಮ ನಡೆ ನುಡಿಗಳನ್ನೂ ಶ್ರೀ ಯಾಮುನಾಚಾರ್ಯರು ವ್ಯವಸಾಯಾತ್ಮಿಕ ಬುದ್ಧಿ ಯಿಂದ ರೂಪಿಸಿಕೊಂಡಿದ್ದರು. ಸಾಮಾಜಿಕ ಶಿಷ್ಟಾಚಾರಗಳಲ್ಲಿ ನಾವೆಷ್ಟು

ಅಪ್ರಮಾಣಿಕರಾಗಿ ವರ್ತಿಸುತ್ತೇವೆ ಎಂಬುದನ್ನವರು ವೇದನೆಯಿಂದ ವಿವರಿಸುತ್ತಿದ್ದರು. ಊಟದಲ್ಲಿ, ಉಡುಪಿನಲ್ಲಿ ಪೂಜೆಯಲ್ಲಿ ಪುರಸ್ಕಾರದಲ್ಲಿ ನಮಗೆ ಪಾಶ್ಚಾತ್ಯರ ಅಂಧಾನು ಕರಣೆಯಿಂದ ಬಂದಿರುವ ಕೃತಕತೆ ನಮ್ಮ ಸಹಜ ಪ್ರವೃತ್ತಿಗಳನ್ನೂ ಸ್ವತಂತ್ರ ವಿವೇಚನೆಯನ್ನೂ ಕುಂಠಿತಗೊಳಿಸಿವೆ ಎನ್ನುತ್ತಿದ್ದರು. ಮೊದಮೊದಲು ಉಡುಪಿನ ಸೊಗಸುಗಾರಿಕೆಗೆ ಮಾರುಹೋಗಿ ಸೂಟು ಪೇಟ ಬೂಟುಗಳನ್ನು ಧರಿಸುತ್ತಿದ್ದವರು ಬರುಬರುತ್ತ ಅತ್ಯಂತ ಸರಳ ಖಾದಿ ಉಡುಪು ಮತ್ತು ಚಪ್ಪಲಿಗಳನ್ನು ಉಪಯೋಗಿಸತೊಡಗಿದರು. ವಿನೋದವಾಗಿ ಆದರೂ ಅರ್ಥಪೂರ್ಣವಾಗಿ ಒಮ್ಮೆ ಹೀಗೆಂದರು : "The first lesson I learnt from Gandhiji was how to be free from the tyranny of dress. Later I slowly realised how much of Gandhi became part of my inner being and taught me how to breathe and eat freely in an Indian atmosphere"

[ಉಡುಪಿನ ಹಿಂಸೆಯಿಂದ ಸ್ವತಂತ್ರನಾಗಲು ಕಲಿತದ್ದು ಗಾಂಧೀಜಿಯಿಂದ ನನಗೆ ದೊರೆತ ಮೊದಲ ಪಾಠ. ಗಾಂಧೀ ನನ್ನ ಜೀವನದ ಹಾಸುಹೊಕ್ಕಾಗಿಯೇ ಪರಿಣಮಿಸಿ ಭಾರತೀಯ ಸಾಂಸ್ಕೃತಿಕ ವಾತಾವರಣದಲ್ಲಿ ಸ್ವತಂತ್ರವಾಗಿ ಉಸಿರಾಡುವುದನ್ನೂ ಊಟಮಾಡುವುದನ್ನೂ ಕಲಿಸಿದರೆಂಬುದು ಮುಂದೆ ನಿಧಾನವಾಗಿ ಅರಿವಾಯಿತು]

ಅಮೆರಿಕದ ಪ್ರವಾಸದಲ್ಲಿ ಶ್ರೀ ಯಾಮುನಾಚಾರ್ಯರು ಗಾಂಧೀ ವಿನೋಬ ಮತ್ತು ಸರ್ವೋದಯ ದರ್ಶನಗಳ ಬಗ್ಗೆ ವಿಪುಲವಾಗಿ ಪ್ರವಚನ ಮಾಡಿದರು. ಅವೆಲ್ಲದರ ಪ್ರಧಾನಸ್ವೃತಿ ಹೀಗಿತ್ತು: "ಇಡೀ ಮಾನವಲೋಕಕ್ಕೆ ಸೇರಿದ ವ್ಯಕ್ತಿ ಕೇಂದ್ರಬಿಂದು. ವ್ಯಕ್ತಿವಿಕಾಸ ಕೇವಲ ವಿಜ್ಞಾನದಿಂದಾಗಲೀ ಕೇವಲ ಆಧ್ಯಾತ್ಮಿಕ ಸಾಧನೆಯಿಂದಾಗಲೀ ಪೂರ್ಣವಾಗದು. ಒಂದು ಶಾಸ್ತ್ರೀಯ ಸಮತೋಲನ ಸಾಧಿಸಿಕೊಂಡು ಮಾನವನನ್ನು ದಾನವತೆಯ ಅವನತಿಯಿಂದ ಪಾರುಮಾಡಿ ದೈವತ್ವದೆಡೆಗೆ ಕೊಂಡೊಯ್ಯುವ ಹೊಚ್ಚಹೊಸ ದರ್ಶನವೇ ಗಾಂಧೀ ವಿಚಾರಮಾರ್ಗ. ಯಾವ ಕಾರಣದಿಂದಲೂ ಯಾರ ವ್ಯಕ್ತಿತ್ವವನ್ನೂ ದಮನ ಮಾಡುವ ಆವಶ್ಯಕತೆಯೇ ಇಲ್ಲ. ಮಾನವಸಹಜ ಪ್ರವೃತ್ತಿಯೇ ಪರಸ್ಪರ ಮೈತ್ರಿ. ಸ್ವಾರ್ಥಸಾಧನೆಯ ಪ್ರಲೋಭನೆಗಳಿಗೊಳಗಾಗಿ ಬೃಹತ್ಪ್ರಮಾಣದ ಹಿಂಸಾತ್ಮಕ ಸಮಾಜವನ್ನು ನಿರ್ಮಿಸಿಕೊಂಡಿದ್ದೇವೆ. ಶಸ್ತ್ರಾಸ್ತ್ರಗಳ ರಕ್ಷಣೆಯಲ್ಲಿ ಬದುಕುವುದೇ ಕ್ಷೇಮ ಎಂದು ಭ್ರಮಿಸಿ ಸಾವಿರ ರೀತಿಯ ದಾಸ್ಯ ಸಂಕೋಲೆಗಳನ್ನಪ್ಪಿಕೊಂಡಿದ್ದೇವೆ. ದೇಹದ ಪೂಜೆಯನ್ನು ಗೌಣಮಾಡಿ ಆತ್ಮ ಸಂಸ್ಕಾರವನ್ನೆತ್ತಿಹಿಡಿಮ ನೈತಿಕ ಶಾಸನವನ್ನು ಮಾತ್ರ ಅಂಗೀಕರಿಸುವ

ಸ್ವತಂತ್ರ ವ್ಯಕ್ತಿತ್ವವೇ ಲೋಕವ್ಯಾಪಕ ಶಾಂತಿ ನೆಮ್ಮದಿಗಳಿಗೆ ಬುನಾದಿ. ಅದೇ ಸರ್ವೋದಯ ಸಮಾಜದ ಮೂಲದರ್ಶನ. ಗಾಂಧೀ–ವಿನೋಬಾ ಅವರ ಸತ್ಯಾಗ್ರಹ ಪಥ ”

ಅನಾಸಕ್ತಿಯೋಗ ಶ್ರೀ ಯಾಮುನಾಚಾರ್ಯರ ತಪಸ್ಸಿನ ಸಿದ್ಧಿಯಾಗಿ ಪರಿಣಮಿಸಿತ್ತು. ದೇಹದ ನಶ್ವರತೆಯ ಆತ್ಮದ ನಿತ್ಯತೆಯ ಸತ್ಯವನ್ನು ಅರಗಿಸಿಕೊಂಡು ಬಾಳಿದವರು ಅವರು. ಅವರ ಮೈತ್ರಿಯ ಕ್ಷಿತಿಜ ವಿಶ್ವವ್ಯಾಪಕವಾದುದು ಈ ಕಾರಣದಿಂದಲೇ. ಯಾರನ್ನೂ ನೋಯಿಸದೆ ಸತ್ಯಕ್ಕೆ ಸಾಕ್ಷಿಯಾಗಿ ಬಾಳಿದ ಇಂಥ ಮಹನೀಯರ ಸ್ಮರಣೆಯೇ ನಮ್ಮನ್ನೂ ಪವಿತ್ರಗೊಳಿಸುತ್ತದೆ. ಅವರು ನಿತ್ಯ ಪಠನೆ ಮಾಡುತ್ತಿದ್ದ ಒಂದು ಸುಂದರ ಶ್ಲೋಕ ಅವರ ವಿಶಾಲ ಮನೋಧರ್ಮದ ದರ್ಪಣ. ಅವರ ಆತ್ಮೀಯ ಒಲುಮೆಯ ಸೌಭಾಗ್ಯ ಪಡೆದ ನಮ್ಮೆಲ್ಲನೇಕರ ಕಿವಿಯಲ್ಲಿ ಆ ಶ್ಲೋಕ ಮೊಳಗುತ್ತಿದೆ:

ರುಚೀನಾಂ ವೈಚಿತ್ರ್ಯಾತ್
ಋಜುಕುಟಿಲ ನಾನಾಪಥಜುಷಾಂ
ನೃಣಾಂ ಏಕೋಗನ್ಯಃ
ತ್ವಮಸಿ ಪಯಸಾಂ ಅರ್ಣವ ಇವ.

[ರುಚಿಗೆ ತಕ್ಕಂತೆ ಪಂಥಗಳು, ದಾರಿಗಳು ಕಂಗೊಳಿಸುತ್ತವೆ. ಆದರೆ ಎಲ್ಲರೂ ಮುಟ್ಟುವುದು ಒಂದೇ ಗುರಿ, ನಮ್ಮ ಗಮ್ಯಸ್ಥಾನ ಸಮುದ್ರನಂತೆ ಒಂದೇ]

# ಗಾಂಧೀಜಿ ದೃಷ್ಟಿಯಲ್ಲಿ ಸ್ವದೇಶಿ

**ಎ. ಎಲ್. ಶಿವರುದ್ರಪ್ಪ**

ಮಹಾತ್ಮ ಗಾಂಧಿಯವರು ಕೈಗೊಂಡ ಸತ್ಯಾನ್ವೇಷಣೆಯ ಮಹಾತಪಸ್ಸಿನಿಂದ ಮೂಡಿಬಂದ ಅನರ್ಘ್ಯರತ್ನಗಳವೆಷ್ಟೋ! ಸತ್ಯದ ಸಾಕ್ಷಾತ್ಕಾರಕ್ಕೆಂದು ಹೊರಟ ಈ ಸಾಹಸಿಯ ಮುಂದೆ ಮೊಟ್ಟಮೊದಲಿಗೆ ತ್ರಿವಿಕ್ರಮರೂಪದಲ್ಲಿ ನಿಂತ ತತ್ವವೆಂದರೆ ಅಹಿಂಸೆ. ಅಹಿಂಸೆಯ ವ್ರತದಿಂದ ಕಾಯಾವಾಚಾಮನಸಾ ಪರಿಶುದ್ಧನಾಗದ ಹೊರತು ಸತ್ಯದ ಸಾಕ್ಷಾತ್ಕಾರ ಕೇವಲ ಕನಸಿನ ಗಂಟೆಂಬುದು ಗಾಂಧೀಜಿಯವರಿಗೆ ಮನವರಿಕೆಯಾಗಲು ಬಹುಕಾಲ ಬೇಕಾಗಲಿಲ್ಲ. ಆರಂಭದ ದೆಶೆಯಿಂದಲೂ ಸತ್ಯ ಮತ್ತು ಅಹಿಂಸೆ ಅವರ ಬಾಳಿನ ದಾರಿದೀಪಗಳಂತಾದವು. ಅಹಿಂಸೆ ಅಥವ ಪ್ರೇಮವು ಸತ್ಯದ ಸೋಪಾನ. ಚೇತನಾತ್ಮಕವಾದ ದಿವ್ಯತತ್ವದ ವ್ಯಕ್ತಸ್ವರೂಪವೆನಿಸಿದ ಈ ವಿಶ್ವದ ಸಕಲ ಜೀವರಿಗೆ ಲೇಸ ಬಯಸುವ ಹಂಬಲವೇ ಅಹಿಂಸೆಯ ಬುನಾದಿ. ವಿಶ್ವಪ್ರೇಮವಿಲ್ಲದವನಿಗೆ ವಿಶ್ವಸತ್ಯದ ಸಾನ್ನಿಧ್ಯವಾದರೂ ಹೇಗೆ ಲಭಿಸೀತು?

ಅಹಿಂಸೆಯ ವಿವಿಧ ಪ್ರಾಕಾರಗಳನ್ನು ಹೊಕ್ಕು ಅವುಗಳನ್ನು ತಮ್ಮ ಬಾಳಿನಲ್ಲಿ ಕೈಗೂಡಿಸಿಕೊಳ್ಳಲು ಗಾಂಧೀಜಿಯವರು ತಮ್ಮ ಜೀವನಪರ್ಯಂತ ಶ್ರಮಿಸಿದರು ಈ ಅಹಿಂಸೆಯ ಯೋಗಸಾಧನೆಯಲ್ಲಿ ಸ್ವದೇಶಿ ತತ್ವವು ಒಂದು ಅಂಗವೆನಿಸಿ ದಿನ ನಿತ್ಯದ ಉಪಾಸನೆಗೆ ಯೋಗ್ಯವೆನಿಸಿತು. ಸ್ಥೂಲವಾಗಿ ನೋಡಿದಾಗ ಸ್ವದೇಶಿ ಎಂಬ ಮಾತು ರಾಜಕೀಯ ಮತ್ತು ಆರ್ಥಿಕ ಮೌಲ್ಯಗಳಿಗೆ ಸೀಮಿತವಾಗಿರುವಂತೆ ಕಾಣುತ್ತದೆ. ತನ್ನ ದೇಶದ ವ್ಯಾಪ್ತಿಗೆ ಮಿತಿಗೊಂಡು ಆರ್ಥಿಕ ಹಾಗೂ ರಾಜಕೀಯ ಸಂತೃಪ್ತಿಯನ್ನು ಗಳಿಸುವುದು ಸ್ವದೇಶಿ ತತ್ವದ ಅಂತಿಮ ಆದರ್ಶವೇನೊ ಎಂಬಂತೆ ತೋರುತ್ತದೆ. ಆದರೆ ಗಾಂಧೀಜಿಯವರ ಆಚಾರ ಮತ್ತು ವಿಚಾರದ ಹಿನ್ನೆಲೆಯಲ್ಲಿ ಈ ಮಾತಿಗೆ ಎಲ್ಲಿಲ್ಲದ ವ್ಯಾಪ್ತಿ ಕಾಣಬರುತ್ತದೆ. ಇದಕ್ಕೆ ಅವರು ಜೀವನವನ್ನು ನೋಡುವ ರೀತಿಯೇ ಕಾರಣ. ಅನ್ಯರಿಗೆ ಬಹು ಅಲ್ಪವೆನಿಸಿದ ಘಟನೆಗಳು ಮತ್ತು ಜೀವನದ ಆಗುಹೋಗುಗಳು ಇವರಿಗೆ ಬಹು ಗಹನವೂ ಗಂಭೀರವೂ ಆಗಿ ಕಾಣುತ್ತವೆ. ಅವು

ಗಳನ್ನು ಕಾಣುವಾಗ ಇವರು ಅನುಸರಿಸುವ ವ್ಯಾಪಕ ದೃಷ್ಟಿ, ತೋರುವ ನಿಷ್ಠೆ ಮತ್ತು ಗಾಂಭೀರ್ಯ ಇವು ಯಾವ ಕಾರಣದಿಂದಲೂ ಸಂಕೀರ್ಣಗೊಳ್ಳುವುದಿಲ್ಲ. ಬಾನಿನಷ್ಟು ವ್ಯಾಪಕವೂ, ಸಾಗರದಷ್ಟು ಗಾಂಭೀರ್ಯವೂ ಆದ ಈ ಮಹನೀಯರ ವಿಚಾರ ವಾರಿಧಿಯಲ್ಲಿ ಎಂತಹ ವಿಕೃತತತ್ವವೂ ಸುಸ್ವರೂಪವನ್ನು ಪಡೆದು ಅವರ ಮನೋಭೂಮಿಕೆಯಿಂದ ಮೂಡಿಬರುತ್ತದೆ. ಸ್ವದೇಶಿ ತತ್ವವನ್ನು ರೂಪಿಸುವಲ್ಲಿ ಅವರು ತೋರಿಸಿರುವ ದಾರ್ಶನಿಕ ದೃಷ್ಟಿ ಮತ್ತು ಜೀವನ ನಿಷ್ಠೆಯೇ ಇದಕ್ಕೆ ಸಾಕ್ಷಿ.

ಅಹಿಂಸೆ ಅಂದರೆ ಪರಿಶುದ್ಧವಾದ ಪ್ರೇಮವು ಯಾವ ಮಾನವನ ಹೃದಯದಲ್ಲಿ ಮೂಡಿಬರುತ್ತದೆಯೋ ಅವನು ತನ್ನ ಪರಿಸರದಲ್ಲಿ ಕಾಣಬರುವ ನೋವು ನಲಿವು, ಸುಖದುಃಖಗಳ ಸಂವೇದನೆಯ ಸೆಳೆತವನ್ನು ತನಗರಿವಿಲ್ಲದೆ ಅನುಭವಿಸಲು ಕಲಿಯುತ್ತಾನೆ. ಅವನಿಂದ ಸಹಾನುಭೂತಿಯ ಸೂಕ್ಷ್ಮ ಸ್ಪರ್ಶವು ತಾನಾಗಿಯೇ ಹೊರಹೊಮ್ಮುತ್ತದೆ. ಅವನು ದೀನ ದುರ್ಬಲರ ನೆರವಿಗೆ ಧಾವಿಸುತ್ತಾನೆ. ಈ ರೀತಿ ಸೇವೆಯ ವ್ರತ ತೊಟ್ಟವರು ತನ್ನ ಸುತ್ತಣ ಸನ್ನಿವೇಶವನ್ನೇ ತನ್ನ ಕಾರ್ಯಕ್ಷೇತ್ರವಾಗಿ ಆರಿಸಬೇಕು. ಪ್ರೇಮದಿಂದ ಪ್ರೇರಿತವಾದ ಇಂತಹ ಸೇವೆಯು ತನ್ನ ನೆರೆಹೊರೆಯವರಿಗೆ ಮೀಸಲಾಗಬೇಕೆಂಬುದೇ ಸ್ವದೇಶೀ ತತ್ವದ ಅರ್ಥ.[1] ತನ್ನ ನೆರೆಹೊರೆಯನ್ನು ಮರೆತು ಸೇವೆಗೆಂದು ಕಾಣದ ಜಾಗಕ್ಕೆ ಹೋಗಿ ಮಾಡುವ ಸೇವೆಯೇ ಶ್ರೇಷ್ಠ ಎಂಬ ಮನೋಧರ್ಮವನ್ನು ಗಾಂಧೀಜಿ ಪೂರ್ಣವಾಗಿ ಅಲ್ಲಗಳೆದರು ಅಂದ ಮೇಲೆ, ನಮ್ಮ ಸುತ್ತಣ ಜನತೆಯ ಹೊರತು ಅನ್ಯರ ಸೇವೆ ನಮಗೆ ಸೇರಿದ್ದೇ ಅಲ್ಲ ಎಂದಲ್ಲ. ಏಕೆಂದರೆ ಸ್ವದೇಶಿ ತತ್ವದಲ್ಲಿ ನಮ್ಮವರು ಅಥವ ಅನ್ಯರು ಎಂಬ ಭೇದಕ್ಕೆ ಎಡೆಯೇ ಇಲ್ಲ. ಮಾನವರೆಲ್ಲರೂ ನಮ್ಮವರೆ, ಅಷ್ಟೇ ಏಕೆ, ಸಕಲ ಜೀವವೂ ನಮ್ಮವರೇ. ಆದರೆ ಮಾನವನ ಸಾಮರ್ಥ್ಯಕ್ಕೆ ಮಿತಿಯೆಂಬುದೊಂದಿಯಷ್ಟೆ ! ಅತ್ಯಲ್ಪ ಶಕ್ತಿಯಿಂದ ವಿಶ್ವದ ಸೇವೆಗೆ ತೊಡಗುತ್ತೇವೆಂಬುದು ಬಹು ದಾರ್ಷ್ಟ್ಯ ಇಲ್ಲವೆ ಅಹಂಕಾರದ ಮಾತಾದೀತು ಆದ್ದರಿಂದ ನಮ್ಮ ಶಕ್ತಿ ಸಾಹಸಗಳಿಗನುಗುಣವಾಗಿ ನಾವಿರುವ ಆವರಣವನ್ನೇ ನಮ್ಮ ಸೇವಾಕ್ಷೇತ್ರವಾಗಿಟ್ಟುಕೊಂಡು ಅಲ್ಲಿಂದ ಎಷ್ಟು ದೂರ ಬೇಕಾದರೂ ವ್ಯಾಪಿಸಬಹುದು ನಮ್ಮ ಶಕ್ತಿ ವಿಕಾಸಗೊಂಡಂತೆಲ್ಲಾ ನಮ್ಮ ಕ್ಷೇತ್ರವೂ ವಿಶಾಲಗೊಳ್ಳುತ್ತದೆ. ಮಾನವ ಹಿತಕ್ಕಾಗಿ ಮಾಡಿದ ಕೆಲಸ ಅದು ಎಲ್ಲಿಯೇ ನಡೆಯಲಿ ಅದರ ಸ್ಪಂದನದ ವ್ಯಾಪ್ತಿ ಅಗೋಚರ. ತುಂಬಿದ ಕೊಳದಲ್ಲಿ ಮೂಡಿದ ಅಲೆಯಂತೆ ಮಾನವನ ಸೇವೆಯು ಬಹುದೂರದವರೆಗೂ ಮಾರ್ದನಿಸುತ್ತದೆ.

ಈ ವಿವರಣೆಯಿಂದ ಗಾಂಧೀಜಿಯವರ ದಾರ್ಶನಿಕ ವ್ಯಕ್ತಿ ಹಿಂಗಿದಂತೆ ಕಾಣಲಿಲ್ಲ. ಆದ್ದರಿಂದಲೇ ಸ್ವದೇಶಿ ತತ್ವದಲ್ಲಿ ಇವಕ್ಕಿಂತಲೂ ಗಹನವಾದ ಪಾರಮಾರ್ಥಿಕ

---

1. My Philosophy of Life – M K. Gandhi P. 225.

ಉದ್ದೇಶ ಒಂದನ್ನು ಅವರು ಕಂಡುಕೊಂಡರು. ನಿತ್ಯಮುಕ್ತನಾದ ಆತ್ಮನು ಜೀವ ಸ್ವರೂಪದಲ್ಲಿ ತನ್ನದಲ್ಲವಾದ ಶರೀರೇಂದ್ರಿಯಗಳಲ್ಲಿ ಬಂಧಿತನಾಗಿ ಅನ್ಯದೇಶಿಯೆನಿಸಿದ್ದಾನೆ. ಈ ಬಂಧನದಿಂದ ಮುಕ್ತನಾಗಿ ಸಕಲ ಜೀವರೊಂದಿಗೆ ಐಕ್ಯತೆಯನ್ನು ಗಳಿಸುವುದೇ ನಿಜವಾದ ಸ್ವದೇಶಿ.[1] ಈ ಗುರಿಯನ್ನು ಸಾಧಿಸಲೋಸುಗ ಸಾಧಕನು ಹಂತಹಂತವಾಗಿ ಸುತ್ತೆಲ್ಲ ಕಾಣುವ ಜೀವಿಗಳ ಸೇವೆಯಲ್ಲಿ ತನ್ನನ್ನು ತೊಡಗಿಸುತ್ತಾನೆ. ಸ್ವದೇಶಿ ಸಾಧನೆ ಹೀಗೆ ಮೊದಲಾಗಬೇಕು. ಅಂದ ಮೇಲೆ ಮುಕ್ತಿಯ ಸಾಧನೆಯೇ ಸ್ವದೇಶಿ ತತ್ವದ ಪರಮ ಧ್ಯೇಯ ಎಂದಂತಾಯಿತು.

ಈ ರೀತಿಯ ಪಾರಮಾರ್ಥಿಕ ಸಾಧನೆಗೆ ಸಹಕಾರಿಯಾಗಿ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ರಂಗಗಳಲ್ಲಿಯೂ ಸ್ವದೇಶಿಯ ಆಚರಣೆ ಅತ್ಯಂತ ಅವಶ್ಯಕವೆಂದರಿತು ಗಾಂಧೀಜಿಯವರು ಈ ತತ್ವವನ್ನು ಬಾಳಿನ ತುಂಬ ಹರವಾಗಿ ಹಂಚಿದರು. ಲೌಕಿಕ, ಪಾರಮಾರ್ಥಿಕವೆಂಬ ಭೇದವಿಲ್ಲದೆ ಎಲ್ಲೆಲ್ಲಿಯೂ ಸ್ವದೇಶಿ ಆಚರಣೆ ಬೇಕೆಂದರು.

ಅಂದಮೇಲೆ ಆತ್ಮಲಾಭಕ್ಕೆ ಸಾಧನವೆನಿಸುವ ಈ ತತ್ವದ ಆಚರಣೆಗಾಗಿ ಯಾರೊಬ್ಬರೂ ತನ್ನ ವೃತ್ತಿಯನ್ನಾಗಲಿ, ಗೃಹಕೃತ್ಯವನ್ನಾಗಲಿ, ನಾಗರಿಕ ಸಮಾಜದ ಮರ್ಯಾದೆಗಳನ್ನಾಗಲಿ ತ್ಯಜಿಸಬೇಕೆಂದಿಲ್ಲ. ಈಗಿರುವ ಎಲ್ಲ ವ್ಯವಸ್ಥೆಗಳ ನೆರಳಿನಲ್ಲಿಯೇ ಇದ್ದು ಆತ್ಮವಿಕಾಸವನ್ನು ಗಳಿಸುವುದೇ ನಿಜವಾದ ಸ್ವದೇಶಿ.

ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ರಂಗದಲ್ಲಿ ಸ್ವದೇಶಿ ಆಚರಣೆ ಹೇಗಿರಬೇಕೆಂಬುದನ್ನು ಕುರಿತು ಗಾಂಧಿಜಿ ಹೀಗೆ ಸೂಚಿಸಿದ್ದಾರೆ: ಪರಸ್ಪರ ಅವಲಂಬನೆಯ ಆಧಾರದ ಮೇಲೆ ನಿಂತ ಈ ಮಾನವ ಸಮಾಜದಲ್ಲಿ ಆರ್ಥಿಕ ಉತ್ಪಾದನೆ, ರಾಜಕೀಯ ವ್ಯವಸ್ಥೆ ಮತ್ತು ಸಾಮಾಜಿಕ ಕಟ್ಟುಪಾಡುಗಳು ಜನತೆಯ ಹಿತಸಾಧನೆಗಾಗಿಯೇ ಬೆಳೆದು ಬಂದಿವೆ. ವೃತ್ತಿ ವೈವಿಧ್ಯಗಳು ಜನತೆಯ ಅವಶ್ಯಕತೆ ಮತ್ತು ಆಕಾಂಕ್ಷೆಗಳಿಗೆ ನೀರೆರೆದು ಪೋಷಿಸುತ್ತಿವೆ. ಗ್ರಾಮದ ಜನರ ಸೇವೆಗೆಂದೇ ಅಲ್ಲೊಬ್ಬ ಕ್ಷೌರಿಕ, ಚಮ್ಮಾರ, ಬಡಗಿ, ಬೇಸಾಯಗಾರ ಮುಂತಾಗಿ ವಿವಿಧ ಕಾಯಕದ ಜನರು ಬದುಕಿದ್ದಾರೆ. ಆ ಗ್ರಾಮದ ಆವರಣದಲ್ಲಿನ ಉತ್ಪಾದನೆ ಪ್ರಥಮತಃ ಅಲ್ಲಿನ ಜನರಿಗಾಗಿ, ಅನಂತರವೇ ಅದು ದೂರದ ನೆರೆಹೊರೆಯವರಿಗೆ. ಅಂದ ಮೇಲೆ ಆ ಗ್ರಾಮದ ಜನರೆಲ್ಲರೂ ಅಲ್ಲಿ ಉತ್ಪಾದನೆಗೊಂಡ ವಸ್ತುಗಳನ್ನು ಬಳಸುವುದು ಒಂದು ರೀತಿಯ ಕರ್ತವ್ಯವೇ ಸರಿ. ಹಾಗೆ ಮಾಡಿದಲ್ಲಿ ಮಾತ್ರ ಅವರು ತಮ್ಮ ಸಾಮಾಜಿಕ ಹೊಣೆಯನ್ನು ನಿರ್ವಹಿಸಿದಂತಾಗುತ್ತದೆ, ಅಷ್ಟೇ ಅಲ್ಲದೆ

1. Harijan. 20-4-1935.

ಕಾಯಕದ ಗೌರವವೂ ಉಳಿಯುತ್ತದೆ. ಹಾಗಿಲ್ಲದೆ ಬೇರೆಲ್ಲಿಯೋ ಕಂಡ ವಸ್ತುವಿಗೆ ಮಾರುಹೋಗುವುದು ಸ್ವದೇಶಿಯೂ ಅಲ್ಲ; ಸಾಮಾಜಿಕ ನೀತಿಯೂ ಅಲ್ಲ. ಈ ರೀತಿಯ ವಿಚಾರವಾಹಿನಿ [1] ಗಾಂಧಿಜಿಯವರನ್ನು ಖಾದಿ ಮತ್ತು ಗ್ರಾಮೋದ್ಯೋಗದ ಪ್ರಚಾರಕಾರ್ಯಕ್ಕೆ ನಿಯಂತ್ರಿಸಿತು.

ಸ್ವದೇಶಿ ಎಂಬುದು ಕೇವಲ ಒಂದು ಬೌದ್ಧಿಕ ಸೂತ್ರವೆಂದಾದರೆ ಖಾದಿ ಅದರ ಮೂರ್ತಸ್ವರೂಪ ಎಂದು ಗಾಂಧೀಜಿ ಹೇಳುತ್ತಿದ್ದರು. ಭಾರತದಲ್ಲಿ ಲಕ್ಷಾಂತರ ಜನರು ನೂಲುವ ಮತ್ತು ನೆಯ್ಗೆಯ ವೃತ್ತಿಯಲ್ಲಿ ತೊಡಗಿದ್ದಾಗ ಅವರ ಉತ್ಪಾದನೆಯನ್ನು ಅಗೌರವಿಸಿ ಇಂಗ್ಲೆಂಡ್ ಇಲ್ಲವೆ ಜಪಾನಿನಲ್ಲಿ ತಯಾರಿಸಿದ ಬಟ್ಟೆಯನ್ನು ಭಾರತೀಯರು ತೊಡುವುದು ಕೇವಲ ವಿರೋಧಾಭಾಸವಷ್ಟೆ! [2]ಆದ್ದರಿಂದಲೇ ಗಾಂಧೀಜಿಯವರು ಖಾದಿಯ ಪ್ರಚಾರಕ್ಕೆ ತಮ್ಮ ಕಾರ್ಯಕ್ರಮದಲ್ಲಿ ಪ್ರಥಮ ಸ್ಥಾನವನ್ನಿತ್ತರು. ಅದನ್ನು ಹರಿಜನೋದ್ಧಾರದಷ್ಟೇ ಆತ್ಮೀಯವಾಗಿ ಕೈಗೆತ್ತಿಕೊಂಡರು. ನೂಲುವ ಕೆಲಸ ಸೂತ್ರಯಜ್ಞವೆನ್ನುವಂತಾಯಿತು. ಚಿಕ್ಕಂದಿನಿಂದಲೂ ಚರಕವನ್ನು ಕಂಡರಿಯದ ಇವರಲ್ಲಿ ಸ್ವದೇಶಿ ತತ್ವವು ಸ್ಫುಟಗೊಂಡಂತೆಲ್ಲಾ, ದೈವದ ಕೃಪೆಯೋ ಎಂಬಂತೆ ಚರಕ ಮತ್ತು ಖಾದಿಯ ಮಹಿಮೆ ಅವರಿಗೆ ಅರಿವಾಯಿತಂತೆ. ಚರಕವನ್ನು ಜನತೆಯ ಅಭೀಷ್ಟಗಳನ್ನೆಲ್ಲಾ ಈಡೇರಿಸುವ ಕಾಮಧೇನುವೆಂದರು. ನೂಲುವುದು ಯಜ್ಞವಾದರೆ ಅದರ ನಾದವು ವೇದಘೋಷವೆಂದೆನಿಸಿತು ಅದರಿಂದ ಮೂಡಿ ಬಂದ ಓಂಕಾರದ ಧ್ವನಿಯಲ್ಲಿ ಸತ್ಯದ ಸಾಮೀಪ್ಯವನ್ನನುಭವಿಸಿದರು. ಚರಕದ ನೆರಳಿನಲ್ಲಿ ಆರ್ಥಿಕ ಉನ್ನತಿ ಮಾತ್ರವೇ ಅಲ್ಲದೆ, ನೈತಿಕ, ಧಾರ್ಮಿಕ ಹಾಗೂ ಸಾಮಾಜಿಕ ಒಳಿತನ್ನೂ ಸಾಧಿಸಬಹುದೆಂದು ಅವರು ಮನಗಂಡಿದ್ದರು.

ನಮ್ಮ ಪರಿಸರದಲ್ಲಿ ಉತ್ಪಾದಿತವಾದ ವಸ್ತುವನ್ನು ಬಳಸುವುದು ಮಾತ್ರವೇ ಸ್ವದೇಶಿಯಲ್ಲ. ಆ ವಸ್ತುವಿನ ಉತ್ಪಾದನೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಎಲ್ಲರ ಕೈವಾಡವೂ ಇರಬೇಕು. ಹಾಗೆ ಮಾಡುವುದರಿಂದ ಪ್ರತಿಯೊಬ್ಬರಿಗೂ ಅದು ತಮ್ಮದೇ ಎಂಬ ಪ್ರೇಮ ಬೆಳೆಯುತ್ತದೆ. ಆಗ ಮಾತ್ರ ಅದು ಪೂರ್ಣ ಸ್ವದೇಶಿ ಎನಿಸುತ್ತದೆ. ಅದಕ್ಕಾಗಿಯೇ, ಖಾದಿಯನ್ನು ಎಲ್ಲರೂ ಧರಿಸಿದರೆ ಸಾಲದು, ಎಲ್ಲರೂ ನೂಲುವುದರಲ್ಲಿಯೂ ತೊಡಗಬೇಕೆಂದು ಅವರು ಹೇಳಿದುದು. ಕವಿ ರವೀಂದ್ರರಿಗೇ ಗಾಂಧೀಜಿಯವರು ನೂಲುವ ಕಾಯಕದ ಉಪದೇಶವಿತ್ತರು ಮತ್ತು ಹೀಗೆ ಮಾಡುವುದರಿಂದ ನಿಮ್ಮ ಕವಿತೆ ಮತ್ತಷ್ಟು ಹೃದಯಂಗಮವಾಗಲು ಸಾಧ್ಯವೆಂದಿದ್ದರು.

---

1 From Yervada Mandir P.66.

2. Young India 12-3-1925

ಹಾಗಾದರೆ ಸ್ವದೇಶಿ ಹೆಸರಿನಲ್ಲಿ ಅನ್ಯದೇಶಿ ವಸ್ತುಗಳನ್ನು ಬಹಿಷ್ಕರಿಸುವುದರಿಂದ ಅದರ ಉತ್ಪಾದಕರಿಗೆ ಮತ್ತು ಕಾರ್ಮಿಕರಿಗೆ ಅನ್ಯಾಯವೆಸಗಿದಂತಾಗುವುದಿಲ್ಲವೇ ? ಇದೂ ಒಂದು ಧರ್ಮಸೂಕ್ಷ್ಮವಲ್ಲವೇ ? ಇದಕ್ಕೆ ಗಾಂಧೀಜಿಯವರಲ್ಲಿ ಪರಿಹಾರ ಉಂಟು. ಪರದೇಶೀ ವಸ್ತುಗಳ ಬಹಿಷ್ಕಾರವು ನ್ಯಾಯವೂ ಹಾಗೂ ಧರ್ಮಸಮ್ಮತವೂ ಅಹುದೆಂದು ಅವರು ಅಭಿಪ್ರಾಯಪಡುತ್ತಾರೆ. ಹಾಗೆ ಮಾಡಿದಲ್ಲಿ ಪರದೇಶದ ಉತ್ಪಾದಕರ ನೈತಿಕ ಜಾಗ್ರತಿಗೆ ಸಹಾಯವಾಗುತ್ತದೆ. ಒಂದು ದೇಶದ ಜನತೆಯ ಕುಶಲತೆ ಮತ್ತು ಕೃತುಶಕ್ತಿಯನ್ನು ಕುಂದಿಸಿ ಅವರಲ್ಲಿ ಪರಾವಲಂಬನೆಯ ದೌರ್ಬಲ್ಯವು ಬೆಳೆಯುವಂತೆ ಮಾಡಿ ತಮ್ಮ ವಸ್ತುಗಳಿಗೆ ಮಾರುಕಟ್ಟೆಯನ್ನು ಗಳಿಸುವ ಶೋಷಣೆಯ ಕ್ರಮವು ಎಂದಿಗೂ ಧರ್ಮವೆನಿಸುವುದಿಲ್ಲ. ಇದು ಆರ್ಥಿಕ ಹಾಗೂ ಮಾನಸಿಕ ದಾಸ್ಯಕ್ಕೆ ನಾಂದಿಯಾಗುತ್ತದೆ. ತಮ್ಮ ಈ ವಿಚಾರಧಾರೆಯನ್ನು, ದುಂಡು ಮೇಜಿನ ಪರಿಷತ್ತಿಗೆಂದು ತಾವು ಲಂಡನ್ನಿಗೆ ಹೋಗಿದ್ದಾಗ ಅಲ್ಲಿಯ ಗಿರಣಿ ಮಾಲೀಕರ ಮತ್ತು ಕಾರ್ಮಿಕರ ಮುಂದೆ ವಿವರಿಸಿದಾಗ ಆ ಜನರಲ್ಲಿ ಒಂದು ನೂತನ ಧಾರ್ಮಿಕ ಪ್ರಜ್ಞೆಯೇ ಮೂಡಿದಂತಾಯಿತು. ಭಾರತದಲ್ಲಿ ಖಾದಿ ಪ್ರಚಾರ ಹೆಚ್ಚಿದಂತೆಲ್ಲಾ ಲಾಂಕಶೈರ್ ಗಿರಣಿಗಳ ಮಾಲೀಕರು ಮತ್ತು ಕಾರ್ಮಿಕರು ಕುಪಿತರಾದದ್ದು ನಿಜ. ಆದರೆ ಗಾಂಧೀಜಿಯವರ ಸ್ವದೇಶಿ ತತ್ವದ ಪೂರ್ಣಪಾಠ ಅವರಿಗೆ ತಿಳಿದಾಗ ತಮ್ಮ ತಪ್ಪಿನ ಅರಿವು ಅವರಿಗಾಯಿತು. ದ್ವೇಷದ ಬದಲು ಪ್ರೇಮ, ಕ್ರೌರ್ಯವಿದ್ದಲ್ಲಿ ಕರುಣೆ, ಮೂಡುವಂತಾಯಿತು. ತಾವು ಉತ್ಪಾದಿಸಿದ ಗಿರಣಿ ಬಟ್ಟೆಯಿಂದಾಗಿ ಭಾರತದಲ್ಲಿ ಅಸಂಖ್ಯಾತ ನೆಯ್ಗೆ ಕಸುಬಿನ ಜನ ವೃತ್ತಿ ಹೀನರಾಗಿ ಕಡುಬಡತನದಲ್ಲಿ ತೊಳಲುವ ಕರುಣೆಯ ಕಥೆಯನ್ನು ಕೇಳಿದ ಲಾಂಕಶೈರ್ ಕಾರ್ಮಿಕರು ಅನುಕಂಪದಿಂದ ಕರಗಿ ಹೋದರು. ಅಹಿಂಸೆಯ ಒಂದು ಪವಾಡವೇ ನಡೆಯಿತು

ಸ್ವದೇಶಿ ತತ್ವವು ಪ್ರಗತಿಗೆ ವಿರೋಧಿ ಎಂಬ ಒಡಕು ಧ್ವನಿಯೊಂದು ಕೇಳುವುದುಂಟು. ನಮ್ಮ ಜನತೆಯ ಉತ್ಪಾದನೆ, ಕ್ರಿಯಾಶಕ್ತಿ ಮತ್ತು ಬದುಕಿಗೆ ನೆರವಾಗುವುದು ಸ್ವದೇಶಿಯ ಉದ್ದೇಶವೂ ಸಹ ಉತ್ಪಾದನೆಯ ಗುಣಮಟ್ಟವನ್ನು ಅಲ್ಲಗಳೆಯುವುದು ಇದರ ಉದ್ದೇಶವಲ್ಲ. ನಮ್ಮವರ ಉತ್ಪಾದನೆಯೆಂದ ಮಾತ್ರಕ್ಕೆ ಅವು ಅಪಕ್ವ ಹಾಗೂ ಕಲಾತ್ಮಕವಲ್ಲದ ರೀತಿಯಲ್ಲಿರಬೇಕೆಂದಲ್ಲ. ಬಳಕೆಯೇ ಇಲ್ಲದಿದ್ದಾಗ ಗುಣಮಟ್ಟವಾಗಲಿ, ಕುಶಲತೆಯಾಗಲಿ ಹೆಚ್ಚುವುದು ಕಷ್ಟತಾನೆ. ಆದ್ದರಿಂದ ಬಳಕೆ ಹೆಚ್ಚಿದಂತೆ ಗುಣಮಟ್ಟವೂ ಹೆಚ್ಚಬೇಕು. ಸ್ವದೇಶಿ ತತ್ವದ ಉಪಾಸಕರು ಸುಧಾರಕರ ಹೊಣೆಗಾರಿಕೆಯನ್ನೂ ಹೊರಬೇಕಾಗುತ್ತದೆ. ಉತ್ಪಾದಕರಲ್ಲಿ ಕುಶಲತೆ ಮತ್ತು ಗುಣಮಟ್ಟದ ಅರಿವು ಮೂಡಲು ಎಷ್ಟೆಲ್ಲ ರೀತಿಯಲ್ಲಿ ಸಾಧ್ಯವೋ ಅಷ್ಟು ಅವರಿಗೆ ನೆರವಾಗಬೇಕು. ಮದ್ರಾಸ್ ಪ್ರಾಂತದ ಗ್ರಾಮೀಣ ಜನರಿಗೆ ಸ್ವದೇಶಿ ತತ್ವವನ್ನು ವಿವರಿಸುತ್ತಾ, ಗಾಂಧೀಜಿ, ' ನೀವು ನಿಮ್ಮ

ಗ್ರಾಮದ ನಾಪಿತನಿಂದ ಕ್ಷೌರ ಮಾಡಿಸಿಕೊಳ್ಳಬೇಕೆಂಬುದೇ ಸ್ವದೇಶಿ. ಮದ್ರಾಸ್ ನಗರದಿಂದ ಬಂದ ನಾಪಿತ ಅವನೆಷ್ಟೇ ಕುಶಲನಿರಲಿ ಅವನಿಂದ ಕ್ಷೌರ ಮಾಡಿಸಿಕೊಳ್ಳುವುದು ಸಲ್ಲದು. ಅಂದಮಾತ್ರಕ್ಕೆ ನಿಮ್ಮ ಗ್ರಾಮದ ಕ್ಷೌರಿಕನನ್ನು ನಗರಕ್ಕೆ ಕಳುಹಿಸಿ ಹೆಚ್ಚು ಕುಶಲತೆಯನ್ನು ಗಳಿಸುವಂತೆ ಮಾಡುವುದು ಸ್ವದೇಶಿಗೆ ವಿರೋಧವಲ್ಲ' ಎಂದರು. ಅಂದನೇಲೆ ಕುಶಲತೆಯ ವಿನಿಮಯ ತಪ್ಪಲ್ಲ, ಆದರೆ ಜನತೆಯಲ್ಲಿ ಕುಶಲತೆ ಮತ್ತು ದುಡಿಮೆಯನ್ನು ಕುಂದಿಸುವ ಕ್ರಮವು ಸ್ವದೇಶಿ ಎನಿಸದು.

ಆರ್ಥಿಕ ರಂಗದಂತೆಯೇ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರದಲ್ಲಿಯೂ ಸ್ವದೇಶಿ ಪ್ರಜ್ಞೆ ಬೆಳೆಯಬೇಕು. ತಾನು ಹುಟ್ಟಿಬೆಳೆದ ಆವರಣದಲ್ಲಿ ಬೆಳೆದುಬಂದಿರುವ ಹಾಗೂ ಜನತೆಯ ಪ್ರಗತಿಗೆ ಸಹಕಾರಿಯಾಗಿರುವ ರಾಜಕೀಯ ಹಾಗೂ ಸಾಮಾಜಿಕ ಸಂಸ್ಥೆಗಳನ್ನು ಕಾಪಾಡಿಕೊಂಡುಬರುವುದೂ ಸ್ವದೇಶಿಯೆ.[1] ಅವುಗಳ ಜೊತೆಯಲ್ಲಿ ಬೆಳೆದುಬಂದಿರಬಹುದಾದ ಲೋಪ ದೋಷಗಳನ್ನು ತೊಡೆದು ಹಾಕುವುದು ಕೇವಲ ಕರ್ತವ್ಯ. ಆದರೆ ಇಂತಹ ಸಂಸ್ಥೆಗಳಲ್ಲಿ ಕಾಣಬಹುದಾದ ಅಲ್ಪ ದೋಷಗಳಿಗಾಗಿ ಮತ್ತೆಲ್ಲಿಯೋ ಕಾಣಬರುವ ನಮ್ಮದಲ್ಲದ ವ್ಯವಸ್ಥೆಯೊಂದನ್ನು ತಂದು ನಮ್ಮ ನಡುವೆ ಸ್ಥಾಪಿಸುವ ಯತ್ನ ಎಂದಿಗೂ ಸರಿಯಲ್ಲ. ಬೇರೆ ಸಂಸ್ಥೆಗಳಲ್ಲಿ ಕಾಣಬಹುದಾದ ಒಳಿತನ್ನು ನಮ್ಮ ಸಂಸ್ಥೆಗಳಲ್ಲಿ ಅಳವಡಿಸಬೇಕೇ ಹೊರತು ನಮ್ಮದನ್ನು ಪೂರ್ಣವಾಗಿ ನಾಶಮಾಡಬಾರದು. ಏಕೆಂದರೆ ಅದಕ್ಕೊಂದು ಇತಿಹಾಸವೇ ಇದೆ. ಅಲ್ಲದೆ ಅದು ನಮ್ಮ ಬಾಳಿನೊಂದಿಗೆ ಬಹುನಿಕಟವಾಗಿ ಬೆಳೆದಿರುವುದರಿಂದ ಅದರಲ್ಲಿ ನಮ್ಮತನ ವ್ಯಾಪಕಗೊಂಡಿದೆ. ಪಂಚಾಯಿತಿ ರಾಜ್ಯ ಕ್ರಮದಲ್ಲಿ ಗಾಂಧೀಜಿಗಿದ್ದ ನಂಬಿಕೆ ಮತ್ತು ಪ್ರೇಮಕ್ಕೆ ಇದೇ ಕಾರಣ. ಗ್ರಾಮವನ್ನು ಘಟಕವಾಗಿ ಉಳ್ಳ ವಿಕೇಂದ್ರೀಕೃತ ರಾಜಕೀಯ ವ್ಯವಸ್ಥೆ ನಮ್ಮ ಜನರಿಗೆ ಬಹುಹಿಂದಿನಿಂದಲೂ ಪರಿಚಯವಾಗಿದೆ. ಆ ದಾರಿಯಲ್ಲಿ ಮುಂದುವರಿಯುವುದು ಅವರಿಗೆ ಸೂಕ್ತವೆಂದು ಕಂಡಿತು.

ಬಹುಕಾಲದಿಂದಲೂ ಭಾರತೀಯರಲ್ಲಿ ಬೆಳೆದುಬಂದಿರುವ ವರ್ಣಧರ್ಮದ ವಿಚಾರದಲ್ಲಿ ಗಾಂಧೀಜಿ ಖಚಿತವಾದ ನಿಲುವನ್ನು ತಳೆದಿದ್ದರು. ಮೇಲುಕೀಳೆಂಬ ಭೇದವಿಲ್ಲದ, ಸರ್ವಸಮಾನತೆ, ಹಾಗೂ ಕಾಯಕದ ಗೌರವವನ್ನು ಕಾಪಾಡಿಕೊಂಡು ಬರುವ ಈ ವ್ಯವಸ್ಥೆಯನ್ನು ಅವರು ಮೆಚ್ಚಿದರು. ಭೋಗವಸ್ತುಗಳಲ್ಲಿ ಅಲ್ಪಾಸಕ್ತಿ, ತೃಪ್ತಿ ಮತ್ತು ಶಾಂತಿಯಿಂದ ನಿರಾಡಂಬರ ಜೀವನವನ್ನು ಸಾಗಿಸುವ ಗ್ರಾಮಾಂತರ

---

1. Speeches and writing of Mahatma Gandhi–G. A. Natesh P. 835.

ಜನರ ವಿಚಾರದಲ್ಲಿ ಗಾಂಧೀಜಿಗೆ ಬಹಳ ಗೌರವ. ನಿಜವಾದ ಭಾರತೀಯ ಮೌಲ್ಯಗಳು ಜೀವಂತವಾಗಿ ಕಾಣಬರುವುದು ಬೊಂಬಾಯಿಯಂತಹ ನಗರಗಳಲ್ಲಲ್ಲ, ಭಾರತೀಯರ ಬಡಗುಡಿಸಲಿನಲ್ಲಿ ಎಂದು ಅವರು ಹೇಳುತ್ತಿದ್ದರು. ಭಾರತೀಯ ಸಂಸ್ಕೃತಿಯನ್ನು ಕಾಣಬಯಸಿದ ಪಾಶ್ಚಿಮಾತ್ಯರಿಗೆ ಹಳ್ಳಿಯ ಬದುಕನ್ನು ಸಂದರ್ಶಿಸಿ ಬರುವಂತೆ ಹೇಳಿ ಕಳುಹಿಸುತ್ತಿದ್ದರು.

ಧಾರ್ಮಿಕ ಜೀವನದಲ್ಲಿಯೂ ಸ್ವದೇಶಿ ಆಚರಣೆ ಅತ್ಯವಶ್ಯಕ. ಸ್ವಧರ್ಮದಲ್ಲಿ ಬದುಕಿ, ಬೆಳೆದು ಪುಷ್ಟಿಗೊಳ್ಳಬೇಕೆಂಬುದೇ ಗೀತೆಯ ಸಂದೇಶ. ಜಗತ್ತಿನ ಎಲ್ಲ ಧರ್ಮಗಳನ್ನು ಅರಿತುಕೊಂಡು ಗೌರವಿಸಿದರೂ ಸಹ ಗಾಂಧೀಜಿಯವರು ತಾವು ತಮ್ಮ ಧರ್ಮದಿಂದ ಕಾಲನ್ನು ಸಡಿಲಿಸಲು ಎಂದೂ ಒಪ್ಪಲಿಲ್ಲ. ಕ್ರೈಸ್ತ ಧರ್ಮ, ಇಸ್ಲಾಂ ಧರ್ಮ, ಬೌದ್ಧ ಧರ್ಮ–ಇವುಗಳನ್ನು ಆಯಾ ಧರ್ಮದ ಅನುಯಾಯಿಗಳಷ್ಟೇ ಆಸ್ಥೆಯಿಂದ ಆದರಿಸಿದರು. ಅವರಲ್ಲಿನ ಒಳಿತನ್ನು ತಮ್ಮ ಧರ್ಮದಲ್ಲಿ ಅಳವಡಿಸ ಬಯಸಿದರು. ಪ್ರತಿಯೊಬ್ಬನೂ ತನ್ನ ಧರ್ಮದಲ್ಲಿ ಇದ್ದು ತನ್ನ ಮೋಕ್ಷ ಸಾಧನೆ ಮಾಡಬೇಕೆಂದು ಅನ್ಯಧರ್ಮೀಯರಿಗೆ ಗಾಂಧೀಜಿ ಬೋಧಿಸಿದರು. ಹಾಗೆ ಹಿಂದೂ ಧರ್ಮದಲ್ಲಿ ಕಾಣಬರುವ ದೋಷಗಳ ಸುಧಾರಣೆಗೂ ಶ್ರಮಿಸಿದರು. ಅಸ್ಪೃಶ್ಯತೆ ಯಂತಹ ಕೀಳು ಆಚರಣೆಗೆ ಶಾಸ್ತ್ರ ಸಮ್ಮತವಿರುವುದಾದರೆ ಅದು ನಿಜವಾದ ಹಿಂದೂ ಧರ್ಮವಲ್ಲವೆಂದು ಸಾರಿದರು. ಹಿಂದೂ ಧರ್ಮದಲ್ಲಿ ಕಾಣಬರುವ ದೋಷಗಳನ್ನು ಬಟ್ಟಬಯಲು ಮಾಡಿ ತೋರಿಸಲು ಅನ್ಯಧರ್ಮೀಯರಿಗಿಂತಲೂ ಮೊದಲು ಇವರೇ ಮುಂದೆ ಬಂದರು.

ಜನತೆಯು ಆಡುವ ಭಾಷೆ, ತೊಡುವ ಉಡುಪು, ಆಹಾರ ವಿಹಾರದಲ್ಲಿಯೂ ತನ್ನತನವನ್ನು ಕಾಪಾಡಿಕೊಂಡು ಬರಬೇಕು. ತನ್ನ ತಾಯ್ನುಡಿಯ ಮೂಲಕ ಕಲಿತ ಜ್ಞಾನ ಬಹುಬೇಗ ಅವನ ಮನೋಭೂಮಿಕೆಯನ್ನು ಮುಟ್ಟಿ ವಿಚಾರದ ಮೂಲಕ ಹೊರಹೊಮ್ಮಲು ಸಾಧ್ಯ. ಅನ್ಯಭಾಷೆಯನ್ನು ಸಾರ್ವತ್ರಿಕಗೊಳಿಸಿ ಅದರ ಮೂಲಕ ಜ್ಞಾನಾರ್ಜನೆಯಾಗಬೇಕೆಂಬುದು ಸ್ವದೇಶಿ ತತ್ವಕ್ಕೆ ಅಪಚಾರ ವೆಸಗಿದಂತೆ. ಆದ್ದರಿಂದಲೇ ಗಾಂಧೀಜಿಯವರು, ಮಾತೃಭಾಷೆಯ ಮಾಧ್ಯಮದಿಂದಲೇ ಜನತೆಯ ಶಿಕ್ಷಣವಾಗಬೇಕೆಂದು ಬಹು ಹಿಂದೆಯೇ ಹೇಳಿದರು.

ಒಟ್ಟಿನಲ್ಲಿ ಹೇಳುವುದಾದರೆ ಸ್ವದೇಶಿ ತತ್ವವು ವ್ಯಕ್ತಿ, ಸಮಾಜ ಅಥವ ರಾಷ್ಟ್ರಗಳ ವೈಯಕ್ತಿಕ ಧರ್ಮದ ರಕ್ಷಾಮಣಿ ಇದ್ದಂತೆ. ವ್ಯಕ್ತಿಯು ತನ್ನತನವನ್ನು ಪೂರ್ಣವಾಗಿ ನಾಶಮಾಡಿಕೊಂಡ ಮೇಲೆ ಉಳಿಯುವುದಾದರೂ ಮತ್ತೇನು? ಹಾಗೆಯೇ ಪ್ರತಿ ಸಮಾಜ ಮತ್ತು ರಾಷ್ಟ್ರವೂ ಸಹ ತನ್ನತನವನ್ನು ಬಾಳಿನ ಎಲ್ಲ ರಂಗಗಳಲ್ಲಿಯೂ ರಕ್ಷಿಸಿಕೊಂಡು ತಾನು ವಿಶ್ವದ ಒಂದು ಅಂಗವಾಗಿ ಬದುಕಬೇಕು.

ಯಾವ ವ್ಯಕ್ತಿಯನ್ನೇ ಆಗಲಿ, ರಾಷ್ಟ್ರವನ್ನೇ ಆಗಲಿ, ಅಗೌರವಿಸಿದಲ್ಲಿ ವಿಶ್ವದ ಸಮಷ್ಟಿಯು ಊನಗೊಳ್ಳುತ್ತದೆ. ಆ ಕಾರಣದಿಂದಲೇ ವ್ಯಕ್ತಿ, ಸಮಾಜ ಹಾಗೂ ರಾಷ್ಟ್ರಗಳೂ ಘಟಕಗಳೆನಿಸಿ ಸ್ವದೇಶಿಯನ್ನಾಚರಿಸಿ ಬದುಕಬೇಕೆಂದು ಗಾಂಧೀಜಿ ಬಯಸಿದರು.

ಕೊನೆಯದಾಗಿ, ಸ್ವದೇಶಿ ಆಚರಣೆಯು ಯಶಸ್ವಿಯಾಗಬೇಕಾದರೆ ಆತ್ಮ ಸಂಯಮ, ಹಾಗು ನಮ್ಮ ಆಶೆ ಆಕಾಂಕ್ಷೆಗಳನ್ನು ನಿಯಂತ್ರಿಸುವ ನಿರ್ಣಯಶಕ್ತಿಯೂ ಬೇಕು. ನಾವು ಬಳಸುವ ವಸ್ತುಗಳೆಲ್ಲವೂ ನಮಗೆ ಅವಶ್ಯಕವಲ್ಲವೆಂಬುದರ ವಿವೇಚನೆ ನಮಗೆ ಬೇಕಾಗುತ್ತದೆ. ನಮ್ಮ ಎಲ್ಲ ಸಾಮರ್ಥ್ಯಗಳ ವಿಕಾಸಕ್ಕೆ ಬೇಕೆನಿಸುವ ವಸ್ತುಗಳ, ವ್ಯವಸ್ಥೆಗಳ ಮೇಲೆ ನಾವು ಅವಧರಿಸಿ ನಿಲ್ಲುವುದು ಸರಿಯೇನೋ ಅಹುದು. ಆದರೆ ನಮ್ಮ ಪ್ರಗತಿಗೆ ಬೇಕಾದದ್ದು ಮತ್ತು ಬೇಡವಾದದ್ದು ಇವೆರಡಕ್ಕೂ ನಾವು ಬಹುಮಟ್ಟಿಗೆ ಸಮಾನವಾಗಿ ಅಂಟಿಕೊಂಡಿರುವುದುಂಟು. ಇವುಗಳನ್ನು ಬೇರ್ಪಡಿಸಿ ಬೇಡವಾದದ್ದನ್ನು ನಿರಾಕರಿಸಲು ಕಲಿಯುವುದು ಅಷ್ಟೇನು ಸುಲಭದ ಮಾತಲ್ಲ. ಈ ಅಂಶವನ್ನು ಮನಗಾಣಿಸಬಲ್ಲ ಸ್ವದೇಶಿ ತತ್ವವು ಒಂದು ಉಪಾಸನೆಯೇ ಸರಿ, ಯೋಗ ವೆಂದರೂ ತಪ್ಪಾಗಲಾರದು.

ನಮ್ಮ ಪರಿಸರದಲ್ಲಿ ಸುಲಭ ಸಾಧ್ಯವಲ್ಲದ ವಸ್ತುಗಳ ಬಳಕೆಯನ್ನು ನಿಯಂತ್ರಿಸ ಬೇಕು. ಸಾಧ್ಯವಾದರೆ ಅದನ್ನು ಪೂರ್ಣವಾಗಿ ತ್ಯಜಿಸಿದರೂ ತಪ್ಪಿಲ್ಲ. ಏಕೆಂದರೆ ಹಾಗೆ ಮಾಡುವುದರಿಂದ ವ್ಯಕ್ತಿ ಹಾಗು ರಾಷ್ಟ್ರವು ಹೆಚ್ಚು ಸ್ವಾವಲಂಬಿಯಾಗುತ್ತದೆ. ಮತ್ತು ಸಂಯಮಶಕ್ತಿಯು ಬೆಳೆಯುತ್ತದೆ. ಆದರೆ ಅನಿವಾರ್ಯವೆನಿಸಿದ ವಸ್ತು ಗಳನ್ನು ಬೇರೆಡೆಯಿಂದ ತರಿಸುವುದನ್ನು ಗಾಂಧೀಜಿ ಪೂರ್ಣವಾಗಿ ಅಲ್ಲಗಳೆಯುವುದಿಲ್ಲ. ಶಸ್ತ್ರಚಿಕಿತ್ಸೆಗೆ ಬೇಕಾದ ಉಪಕರಣ, ಔಷಧಿ, ಇಲ್ಲವೇ ಉತ್ತಮವಾದ ಸಾಹಿತ್ಯ ಗ್ರಂಥಗಳ ವಿನಿಮಯಕ್ಕೆ ಸ್ವದೇಶಿ ಆಚರಣೆಯಲ್ಲಿ ಅವಕಾಶವಿದೆ. ಸ್ವಯಂಪರಿಪೂರ್ಣತೆ ಯೆಂಬುದು ಸ್ವದೇಶಿಯ ಸ್ಥೂಲಸ್ವರೂಪವಾದಲ್ಲಿ, ವ್ಯಕ್ತಿ ಮತ್ತು ಆತ್ಮವಿಕಾಸಕ್ಕೆ ಪ್ರಚೋದನೆ ನೀಡುವುದೇ ಇದರ ಸೂಕ್ಷ್ಮಧರ್ಮ. ಭೋಗಾಪೇಕ್ಷೆಯ ಬೆನ್ನ ಹಿಂದೆ ಸಿಕ್ಕಿದ ಕಡೆಗೆಲ್ಲಾ ಹಾರುವ ವ್ಯಕ್ತಿಯ ಮನಸ್ಸನ್ನು ತಡೆದು ತನ್ನ ಪರಿಸರವನ್ನೇ ಕೇಂದ್ರ ಬಿಂದುವಾಗಿ ಪಡೆದಿರುವ ಸೇವಾಕ್ಷೇತ್ರದಲ್ಲಿ ತಾನು ವಿಕಾಸವಾಗಬೇಕೆಂಬುದೇ ಸ್ವದೇಶಿಯ ಮೂಲಧ್ಯೇಯ. ಪರಸ್ಪರ ಅವಲಂಬನೆಯ ಶಾಸನಕ್ಕೊಳಪಟ್ಟ ಮಾನವ ಜೀವನದಲ್ಲಿ ವ್ಯಕ್ತಿಯು ತಾನಿದ್ದೆಡೆಯಲ್ಲಿ ತನ್ನತನವನ್ನು ಕಂಡುಕೊಂಡು ತಾನು ವಿಕಾಸವಾದಂತೆಲ್ಲಾ ವಿಶ್ವದಷ್ಟು ವ್ಯಾಪಕವಾಗಿ ಪ್ರೇಮದ ಪ್ರತಿಧ್ವನಿಯನ್ನು ಅನುಭವಿಸುವ ಈ ಜೀವನರಹಸ್ಯವನ್ನು ಸ್ವದೇಶಿ ಮಂತ್ರದಲ್ಲಿ ಗಾಂಧೀಜಿ ಕಂಡು ಅದನ್ನು ಸಾಧಿಸಿ ತೋರಿಸಿದರು.

# ಕಾರ್ಮಿಕರಿಗೆ ಗಾಂಧಿ ತೋರಿಸಿದ ಮಾರ್ಗ

ಕೆ. ಎ. ವೆಂಕಟರಾಮಯ್ಯ

ಮಹಾತ್ಮಾ ಗಾಂಧಿಯವರು ಸುಸಂಪನ್ನ ಜೀವಿಗಳು,ಮಾನವ ಜೀವನದ ಅನಂತ ಮುಖಗಳಲ್ಲೂ ಯೋಗ್ಯ ಮಾರ್ಗದರ್ಶನ ಮಾಡುವ ಅನುಭವ ಜ್ಞಾನಭಂಡಾರ ಅವರಲ್ಲಿತ್ತು. ಆಹಾರನಿಯಮ ವೈವಾಹಿಕ-ಜೀವನಗಳಿಂದ ಮೊದಲು ಮಾಡಿ, ಸಾಮಾಜಿಕ ಆರ್ಥಿಕ, ತಾತ್ವಿಕ-ವಿಚಾರಗಳು ಕೂಡಿ ಜಗತ್ತಿನ ರಾಜಕಾರಣದವರೆಗೆ ಎಲ್ಲ ದಿಸೆಗಳಲ್ಲೂ ಈ ರಾಷ್ಟ್ರಕ್ಕೂ ಜಗತ್ತಿಗೂ ಮಾರ್ಗದರ್ಶನ ಮಾಡುವ ಸಂಪನ್ನ ಯೋಗ್ಯತೆ ಅವರಿಗಿತ್ತು. ಎಲ್ಲಿ ಅನ್ಯಾಯ ನಡೆದರೂ ಎಲ್ಲಿ ಘರ್ಷಣೆ ಒದಗಿದರೂ ಅಲ್ಲಿ ನ್ಯಾಯ ಸ್ಥಾಪನೆಗಾಗಿ ಮುಂದೆ ಬಂದು ನಿಂತರು. ಅವರ ಜೀವನವು ಒಂದು ಸಂತತ, ಸುಸಂಗತ ಹೋರಾಟ.

ಕರಿಯ ಜನರಿಗೆ ಸಾಮಾಜಿಕ ನ್ಯಾಯ ದೊರಕಿಸಲು ಬಿಳಿಯರೊಡನೆ ಹೋರಾಟ, ಅಸ್ಪೃಶ್ಯತಾ ನಿವಾರಣೆಗಾಗಿ ಹೋರಾಟ, ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ, ನಿರುದ್ಯೋಗಿಗಳಿಗೆ ಉದ್ಯೋಗ ದೊರಕಿಸಲು ಹೋರಾಟ, ಹೀಗೆ ಮಹಾತ್ಮಾ ಗಾಂಧಿಯವರು ಮುಂದಾಳಾಗಿ ನಿಂತು ನಡೆಸಿದ ಅನೇಕ ಹೋರಾಟಗಳಲ್ಲಿ ಬಂಡವಾಳಗಾರರಿಂದ ಕಾರ್ಮಿಕರಿಗೆ ನ್ಯಾಯ ದೊರಕಿಸಲು ನಡೆಸಿದ ಹೋರಾಟವು ಅತ್ಯಂತ ಮಹತ್ವದ್ದು. ಈ ಬಗ್ಗೆ ಮಹಾತ್ಮಾ ಗಾಂಧಿಯವರು ಏಕಾಗ್ರಚಿತ್ತರಾಗಿ ಮಾಡಿದ ವಿವೇಚನೆಯಿಂದ ಬಂಡವಾಳಗಾರರ ಮತ್ತು ಕಾರ್ಮಿಕರ ನಡುವಣ ಸಮಸ್ಯೆಗಳು ಮತ್ತು ಅವುಗಳ ನಿವಾರಣೆಯ ಬಗ್ಗೆ ಸಂಹಿತೆಯೇ ನಿರ್ಮಾಣವಾಯ್ತು.

ರಾಷ್ಟ್ರವನ್ನು ಶಕ್ತಿಶಾಲಿಯಾಗಿ ಬೆಳೆಸುವುದು ಸ್ವರಾಜ್ಯ ಗಳಿಸಿದಷ್ಟೇ ಮಹತ್ವದ್ದು. ಅದಕ್ಕೆ ಇನ್ನೂ ಹೆಚ್ಚಿನ ಪರಿಶ್ರಮ ಮಾಡಬೇಕಾದೀತು. ರಾಷ್ಟ್ರದ ಶಕ್ತಿ ರಾಷ್ಟ್ರದ ಸಂಪತ್ತನ್ನು ಅವಲಂಬಿಸುತ್ತದೆ. ಸಂಪತ್ ನಿರ್ಮಾಣವಾಗಲು ಹಣವೂ ಬೇಕು, ಜನವೂ ಬೇಕು. ಇವನ್ನು ಬಂಡವಾಳ ಮತ್ತು ಕಾರ್ಮಿಕರು ಎಂದು ಹೇಳುತ್ತೇವೆ. ಕೂಲಿಕಾರರು ಅನ್ನುತ್ತಿದ್ದರು. ಅದು ಸರಿಯಲ್ಲವೆಂದು ಕಾಣುತ್ತದೆ. ಕಾಮಗಾರರು ಎನ್ನುತ್ತಾರೆ ಇತರ ಭಾಷೆಗಳಲ್ಲಿ. ಕಾಮಗಾರರು ಅನ್ನಬಹುದು ; ಕಾರ್ಮಿಕರು ಎನ್ನಬಹುದು, ಕೂಲಿಕಾರರು ಎಂಬ ಪದವನ್ನು ಬಿಡಬಹುದು.

ಈ ಎರಡು ಶಕ್ತಿಗಳ ಸಂಯೋಗ್ಯ ಅನುಸಂಧಾನದಿಂದ ಬಳಕೆಯ ವಸ್ತುಗಳ ರೂಪ ದಲ್ಲಿ ರಾಷ್ಟ್ರದ ಸಂಪತ್ತು ನಿರ್ಮಾಣವಾಗುತ್ತದೆ. ಕಾರ್ಮಿಕನ ಪರಿಶ್ರಮ ಹೆಚ್ಚು ಮಹತ್ವದ್ದು. ಬಂಡವಾಳಕ್ಕಿಂತ ಒಂದೊಂದು ರೂಪಾಯಿಗೆ ಯಾವ ಶಕ್ತಿಯೂ ಇಲ್ಲ. ಆದರೆ ಕೋಟಿ ರೂಪಾಯಿಗಳು ಒಟ್ಟಿಗೆ ಸೇರಿ ಬಂಡವಾಳವಾದಾಗ ಅದಕ್ಕೆ ಒಂದು ಶಕ್ತಿ ಇದೆ. ಕಾರ್ಮಿಕನು ಬಡವನೂ, ದುರ್ಬಲನೂ, ಪ್ರಭಾವವಿಲ್ಲದವನೂ ಆಗಿರ ಬಹುದು. ಆದರೆ ಒಟ್ಟಾಗಿ ಪರಿಶ್ರಮ ಮಾಡಿ ಅಣುಶಕ್ತಿಯನ್ನು ಬಿಡುಗಡೆ ಮಾಡಬಲ್ಲ ಲಕ್ಷ-ಲಕ್ಷ ಕಾರ್ಮಿಕರ ಮಂಡಲಿಗೆ ಮಹಾನ್‌ಶಕ್ತಿ ಲಭ್ಯವಲ್ಲವೇ ? ಹಣ ಕೊಟ್ಟ ಷೇರುದಾರನಂತೆ ತನ್ನ ಪರಿಶ್ರಮವನ್ನು ತೊಡಗಿಸಿದ ಕಾರ್ಮಿಕನೂ ಷೇರುದಾರನೆ. ಉದ್ಯೋಗದ ವ್ಯವಸ್ಥೆಯಲ್ಲಿ ಈ ಷೇರುದಾರ ಕಾರ್ಮಿಕನಿಗೆ ಭಾಗವೇಕಿಲ್ಲ ? ಉದ್ಯೋಗ ಕೆಟ್ಟು ನಷ್ಟವಾದರೆ ಆ ಷೇರುದಾರನ ಹಣ ಮಾತ್ರ ನಷ್ಟವಾದೀತು. ಆದರೆ ಈ ಷೇರುದಾರನ ಉಪಜೀವನವೇ ನಷ್ಟವಾದೀತು. ಕಾರಣ ಉದ್ಯೋಗದಲ್ಲಿ ಹೆಚ್ಚು ಆಸಕ್ತಿಯುಳ್ಳ ಕಾರ್ಮಿಕನ ಬಗ್ಗೆ ಹೆಚ್ಚು ಲಕ್ಷ್ಯ ಸಲ್ಲುತ್ತದೆ. ಷೇರುದಾರರ ಪ್ರತಿನಿಧಿ ಗಳಾಗಿ ಉದ್ಯೋಗದ ವ್ಯವಸ್ಥೆ ಮಾಡುವವರು ಹಣ ಕೊಟ್ಟ ಷೇರುದಾರರಿಗೆ ಸರಿಸಮಾ ನವಾಗಿ ಪರಿಶ್ರಮ ಕೊಟ್ಟ ಷೇರುದಾರರ ಹಿತ–ಸಾಧನೆಯಲ್ಲಿ ಶ್ರದ್ಧೆ ವಹಿಸಬೇಕು. ಅವರ ಮೇಲ್ಮೆಗಾಗಿ ಶ್ರಮಿಸಬೇಕು.

ಬಂಡವಾಳಗಾರರ ಹತೋಟಿಯಲ್ಲಿ ಹಣವಿದೆ. ಈ ಹಣದ ಬಳಕೆಯಲ್ಲಿ ಬಂಡ ವಾಳಗಾರರ ಹಿತವಂತೂ ಸರಿ; ಕಾರ್ಮಿಕರ ಹಿತವೂ ರಾಷ್ಟ್ರದ ಹಿತವೂ ಸಾಧಿತವಾಗ ಬೇಕು. ಬಂಡವಾಳಗಾರರು ಕೇವಲ ಸ್ವಾರ್ಥದೃಷ್ಟಿಯನ್ನು ಹಿಂಬಾಲಿಸಿದರೆ ಕಾರ್ಮಿ ಕರ ವಿರೋಧ ಕಟ್ಟಿಕೊಳ್ಳಬೇಕಾಗುವುದು; ಮತ್ತೆ ರಾಷ್ಟ್ರಹಿತದ ಸಾಧನೆ ಹೇಗಾ ದೀತು ? ಅವರಿಗೆ ಗಾಂಧಿಯವರು ಹೇಳಿದರು : "ನೀವು ಸ್ವಾರ್ಥಿಗಳಾಗಬೇಡಿ. ನಿಮ್ಮ ಕಡೆ ಇರುವ ಹಣ ನಿಮಗಾಗಿ ಮಾತ್ರ ಅಲ್ಲ. ಅದು ಕಾರ್ಮಿಕರ ಹಿತಕ್ಕಾಗಿಯೂ ರಾಷ್ಟ್ರಹಿತಕ್ಕಾಗಿಯೂ ಮೀಸಲು. ಆದ್ದರಿಂದ ನೀವು ಅದರ ಟ್ರಸ್ಟಿ ಅಥವಾ ವಿಶ್ವಸ್ತರು, ಎಂದು ತಿಳಿದುಕೊಂಡು ಕಾರ್ಮಿಕರಿಗೆ ನ್ಯಾಯವಾಗಿ ಸಲ್ಲತಕ್ಕದ್ದನ್ನು ಅವರಿಗೆ ಪೂರ್ಣವಾಗಿ ಮುಟ್ಟಿಸಿ, ರಾಷ್ಟ್ರಕ್ಕೆ ಸಲ್ಲಬೇಕಾದ್ದನ್ನು ರಾಷ್ಟ್ರಕ್ಕೆ ಸಲ್ಲಿಸಿ, ಉಳಿದದ್ದನ್ನು ನೀವು ಊಟ ಮಾಡಿ ಸಂತುಷ್ಟರಾಗಿರಿ." ಎಷ್ಟು ಸುಂದರ ಉಪದೇಶ ! ಗಾಂಧೀಜಿ ಬಂಡವಾಳಗಾರರಿಗೆ ಹೇಳಿದ್ದು "ಯಜ್ಞಶಿಷ್ಟಾಶನಸ್ಸಂತ" ಧರ್ಮ. ನಾವು ನಡೆಸುವ ಉದ್ಯೋಗವೇ ಯಜ್ಞ, ಯಜ್ಞದಲ್ಲಿ ಅಪಾರ ಶ್ರದ್ಧೆ. ಯಜ್ಞದಿಂದ ಪೂರ್ಣ ತೃಪ್ತಿ ಹೊಂದಬೇಕು. ಉಳಿದದ್ದನ್ನು ಯಜಮಾನನು ಊಟ ಮಾಡಬೇಕು. ಇದು ಆ ಧರ್ಮ. ಯಾವ ಕಾರ್ಮಿಕನ ಪರಿಶ್ರಮದಿಂದ ನಿನ್ನ ಬಂಡವಾಳವು ಬೆಳೆಯುವುದೋ ಅವನು ತೃಪ್ತನಾಗಬೇಬೇಕಲ್ಲವೇ ?

ಬಂಡವಾಳಗಾರರಲ್ಲಿ ಈ ಉದಾರ ವಿಚಾರ ಮೂಡಿ ಬರುವವರೆಗೆ ಕಾರ್ಮಿಕರು

ಕೈಜೋಡಿಸಿ ಕುಳಿತುಕೊಳ್ಳಬೇಕೇನು ? ಹಾಗಲ್ಲ, ಕಾರ್ಮಿಕರು ತಾವೂ ಉದ್ಯೋಗದ ಪಾಲುಗಾರರೆಂಬುದನ್ನು ಅರ್ಥಮಾಡಿಕೊಂಡು ಬಂಡವಾಳಗಾರರ ಮನಸ್ಸನ್ನು ಪರಿವರ್ತಿಸಲು ಸತತ ಪ್ರಯತ್ನ ಮಾಡಬೇಕು. ಸಂಪು ಕಡೆಯ ಪ್ರಯತ್ನ, ತಮ್ಮ ಹಕ್ಕು ಬಾಧ್ಯತೆಗಳ ಸ್ಥಾಪನೆಗಾಗಿ ಕಾರ್ಮಿಕರಿಗೆ ಸಂಪು ಹೂಡುವ ಹಕ್ಕಿದೆ. ಉಳಿದೆಲ್ಲ ಪ್ರಯತ್ನಗಳು ವಿಫಲವಾದಾಗ ಕಾರ್ಮಿಕನಿಗೆ ಉಳಿದ ಏಕೈಕ ಮಾರ್ಗ ಸಂಪು. ಗಾಂಧೀಜಿಯ ದೃಷ್ಟಿಯಲ್ಲಿ ಸಂಪು ಕಾರ್ಮಿಕನ ಸತ್ಯಾಗ್ರಹ. ಅದು ಸತ್ಯ, ಅಹಿಂಸೆಯ ಆಧಾರದ ಮೇಲೇ ಸಂಘಟಿತವಾಗಬೇಕು.

ಜಗತ್ತಿನಲ್ಲಿ ಸಂಪುಗಳು ಬೆಳೆಯುತ್ತಿವೆ ; ಅವಕ್ಕೆ ಹೊಸರೂಪುಗಳೂ ಬಂದಿವೆ. "ಘೇರಾವೋ" ಸತ್ಯಾಗ್ರಹವಲ್ಲ ; ಸಂಪೂ ಅಲ್ಲ. ಹೈಜಾಕ್ ಸತ್ಯಾಗ್ರಹವೇ ? ಈ ಕ್ರಮಗಳಿಂದ ರಾಷ್ಟ್ರದ ಆಸ್ತಿ ಪಾಸ್ತಿಗಳ ಅಪಾರ ನಾಶವಾಗುತ್ತದೆ. ಇದು ಗಾಂಧೀ ಮಾರ್ಗವಲ್ಲ, ಅಹಿಂಸೆಯ ತಿಳಿವಳಿಕೆ ಇಲ್ಲದ ಜನರು ಇನ್ನೇನು ಮಾಡಿಯಾರು ?

ಹಿಂದುಸ್ತಾನದಲ್ಲಿ ನಾವು ಒಂದು ಅವಾಸ್ತವ ವಾತಾವರಣದಲ್ಲಿದ್ದೇವೆ ಯಾವುದಾದರೂ ಬಿರುಕಿನಿಂದ ಸ್ವಾತಂತ್ರ್ಯದ ಬೆಳಕು ನುಗ್ಗಿ ಬಂದರೆ ಸಂಪುಗಳು ಇನ್ನೂ ಹೆಚ್ಚಾಗುವುವು, ಎಂದು ಗಾಂಧೀಜಿಯವರು ಭವಿಷ್ಯ ನುಡಿದಿದ್ದರು. ಸ್ವಾತಂತ್ರ್ಯದ ವಾತಾವರಣದಲ್ಲಿ ಜನರಿಗೆ ತಂತಮ್ಮ ಹಕ್ಕುಗಳ ಹೆಚ್ಚು ಜ್ಞಾನವಾಗುವುದು ಸಹಜವಲ್ಲವೇ ? ಅಂತೆಯೇ ಉದ್ಯೋಗಪತಿಗಳಿಗೂ ಕಾರ್ಮಿಕರಿಗೂ ಗಾಂಧಿಯವರ ಮಾರ್ಮಿಕ ಉಪದೇಶ.

ಗಾಂಧೀಜಿ ನಡೆಸಿದ ಎಲ್ಲ ಹೋರಾಟಗಳೂ ಸತ್ಯದ ಪ್ರಯೋಗಗಳು. ಅಹಿಂಸೆಯ ಒರೆಗಲ್ಲಿನಲ್ಲಿ ಹಚ್ಚಿನೋಡಿ ಶುದ್ಧವಾದಂಥವು. ಬಂಡವಾಳಗಾರರ ಮೇಲೆ ದ್ವೇಷವಿಲ್ಲ: ಬಂಡವಾಳಗಾರರನ್ನು ನಾಶಮಾಡಬೇಕೆಂಬ ವಿಚಾರವಿಲ್ಲ. ಆಸ್ತಿಪಾಸ್ತಿಗಳಿಗೆ ಹಾನಿ ಮಾಡತಕ್ಕದ್ದಲ್ಲ. ಬಂಡವಾಳಗಾರರನ್ನು ನಾಶಮಾಡಲು ಯತ್ನಿಸುವುದು, ಆಸ್ತಿಪಾಸ್ತಿಗಳಿಗೆ ಹಾನಿಮಾಡುವುದು, ಇವು ಬಂಗಾರದ ತತ್ತಿಯನ್ನಿಡುವ ಕೋಳಿಯನ್ನು ಕೊಯ್ದು ನೋಡುವಂತೆ, ಎಂದು ಒಮ್ಮೆ ಗಾಂಧಿಯವರು ಹೇಳಿದ್ದರು.

ಸಮದರ್ಶಿಗಳಾದ ಗಾಂಧಿಯವರಿಗೆ ಏಳುಬೀಳಿಲ್ಲ. ಎಲ್ಲೆಲ್ಲೂ ಪರಮಾತ್ಮನ ದರ್ಶನ. ಬಂಡವಾಳಗಾರರಿಗೆ ಸ್ಪಷ್ಟಮಾತುಗಳಲ್ಲಿ ಉಪದೇಶ ಮಾಡಿದಂತೆಯೇ ಕಾರ್ಮಿಕರಿಗೂ ಹಿತನುಡಿಗಳನ್ನು ಹೇಳಿದರು.

"ನಿಮಗೆ ಜಾತಿಮತಭೇದವಿರಬಾರದು, ನೀವೆಲ್ಲ ಅಣ್ಣತಮ್ಮಂದಿರು. ನೀವು ಅಹಿಂಸಾ ಮಾರ್ಗವನ್ನು ಅವಲಂಬಿಸುವ ನಿಶ್ಚಯ ಮಾಡಿದರೆ ನಿಮ್ಮಲ್ಲಿ ಎಷ್ಟು ಶಕ್ತಿ ಇದೆಯೆಂಬ ಅರಿವು ನಿಮಗಾಗುವುದು. ಅಹಿಂಸಾತ್ಮಕ ಹೋರಾಟದಲ್ಲಿ ಸೋಲಿಲ್ಲ,

ನೀವು ಮದ್ಯಪಾನ ಮಾಡಬೇಡಿರಿ. ಸತ್ತ ಪ್ರಾಣಿಗಳನ್ನು ತಿನ್ನಬಾರದು. ಜೂಜಾಡ ಬೇಡಿರಿ, ಸಾಲಕ್ಕೆ ಸಿಕ್ಕಿಕೊಳ್ಳಬೇಡಿರಿ. ಗಳಿಸಿದ ಹಣವನ್ನು ಎಚ್ಚರಿಕೆಯಿಂದ ಬಳಸಿರಿ.''

"ಉದ್ಯೋಗದಲ್ಲಿ ನೀವು ಪಾಲುಗಾರರು, ಒಡೆಯರು. ನಿಮ್ಮ ಪರಿಶ್ರಮಕ್ಕೆ ತಕ್ಕ ಸಂಬಳ ನಿಮಗೆ ಸಿಗಬೇಕು. ಹಾಗೇ ನೀವು ತೆಗೆದುಕೊಳ್ಳುವ ಸಂಬಳಕ್ಕೆ ತಕ್ಕಷ್ಟು ಪರಿಶ್ರಮ ಸಲ್ಲಿಸಬೇಕು." ಇದು ಕಾರ್ಮಿಕರ ಕರ್ತವ್ಯದ ಬಗ್ಗೆ ಗಾಂಧಿಯವರ ಆದೇಶ. ಸಂಪು ಹೂಡುವ ಹಕ್ಕು ತೋರಿಸಿದರು. ಸಂಪನ್ನು ನಿರ್ಮಾಣ ಮಾಡುವ ಹೊಣೆಯನ್ನು ಹೇಳಿದರು. ಅಂತೆಯೇ ಗಾಂಧಿಯವರು ಸಂಪನ್ನು ಪ್ರಷ್ಟಾರರೆಂದು ಹೆಸರಾಗಿದ್ದಾರೆ.

ಹಿಂಸಾಮಾರ್ಗ ಬಹಳ ಸುಲಭ. ನಾಲ್ಕು ಜನ ಸೇರಿ ಒಬ್ಬನನ್ನು ಹೊಡೆಯು ವುದು ಸುಲಭವೇ. ಕುರ್ಚಿ ಮೇಜು ಕಾಗದಗಳನ್ನೆಲ್ಲ ಒತ್ತಟ್ಟಿಗೆ ಸೇರಿಸಿ ರಾಶಿ ಹಾಕಿ ಬೆಂಕಿ ಹಚ್ಚುವುದು ಬಹಳ ಸುಲಭ. ಆದರೆ ಹಿಂಸಾಚಾರದಿಂದ ಯಾವುದೇ ಸಮಾಧಾನಕಾರಕ, ಶಾಶ್ವತ ಪರಿಣಾಮಗಳನ್ನು ಸಾಧಿಸಲಾಗುವುದಿಲ್ಲ. ಕಹಿಯೇ ಬೆಳೆಯುತ್ತದೆ. ಯುದ್ಧದಿಂದ ಯಾವ ಪ್ರಶ್ನೆಗೆ ಶಾಶ್ವತವಾದ ನಿರ್ಣಯ ದೊರಕಿದೆ? ಯುದ್ಧದಿಂದ ಯುದ್ಧವೇ ಹುಟ್ಟುತ್ತದೆ. ಸೋತವರು ಸಮಯ ಸಾಧಿಸಿ, ಮದ್ದು ಗುಂಡು, ಹಡಗು ವಿಮಾನ ಸಂಗ್ರಹಿಸಿಕೊಂಡು, ಶಕ್ತಿ ಬೆಳೆಸಿಕೊಂಡು ಮತ್ತೆ ಯುದ್ಧಕ್ಕೆ ನಿಲ್ಲುತ್ತಾರೆ. ಕುಸ್ತಿ ಪೈಲವಾನರ ಹಾಗೆ, ಸೋತವನು ಇನ್ನೂ ಸಾಮು ಮಾಡಿ, ಹೆಚ್ಚು ಹಾಲು ಬೆಣ್ಣೆ ತಿಂದು ಕೆಲವು ದಿನಗಳ ನಂತರ ಮತ್ತೆ ಸವಾಲು ಹಾಕಿ—ಸೆಡ್ಡು ಹೊಡೆದು ನಿಲ್ಲುತ್ತಾನೆ. ಅಹಿಂಸಾಮಾರ್ಗದಿಂದ ಮಾತ್ರ ಯೋಗ್ಯ ಮತ್ತು ತಾಳಿಕೆಯ ನಿರ್ಣಯವಾಗಬಲ್ಲದು. ಬಂಡವಾಳಗಾರರು ಮತ್ತು ಕಾರ್ಮಿಕರ ಸಂಬಂಧ ಅಣ್ಣತಮ್ಮಂದಿರ ಸಂಬಂಧದಂತೆ. ಅಣ್ಣತಮ್ಮಂದಿರ ನಡುವೆ ವಾದಹುಟ್ಟಿದರೆ ಅದರ ನಿರಸನ ಯುದ್ಧದಿಂದಲ್ಲ; ಸತ್ಯಾಗ್ರಹದಿಂದ.

ವಾದಗಳು ಹುಟ್ಟೇ ಹುಟ್ಟುತ್ತವೆ. ಸಂಪು ನಡೆಯಲೇಬೇಕಾಗುತ್ತದೆ. ಕಾರ್ಮಿಕರ ನ್ಯಾಯವಾದ ಬೇಡಿಕೆಗಳನ್ನು ಉದ್ಯೋಗಪತಿಗಳು ಸುಲಭವಾಗಿ ಒಪ್ಪುವು ದಿಲ್ಲ. ಅಂಥ ಸಂದರ್ಭಗಳಲ್ಲಿ ಹೋರಾಟ ಅನಿವಾರ್ಯ. ತಮಗೆ ಅತ್ಯಂತ ಪ್ರಿಯರಾದ ಉದ್ಯೋಗಪತಿಗಳ ವಿರುದ್ಧ ಗಾಂಧಿಯವರು ಕಾರ್ಮಿಕರ ಮುಖಂಡತ್ವ ವನ್ನು ವಹಿಸಿ ಅಹಮದಾಬಾದದಲ್ಲಿ ಸಂಪು ನಡೆಸಬೇಕಾಯ್ತು. ಸಂಪು ನಡೆಸದೇ ಅಥವಾ ಅದಕ್ಕೆ ಮುಂಚೆಯೇ ಕಾರ್ಮಿಕರ ನ್ಯಾಯವಾದ ಬೇಡಿಕೆಗಳನ್ನು ಸಲ್ಲಿಸಲು ಅವರ ಮಿತ್ರರನ್ನು ಒಡಂಬಡಿಸಲು ಗಾಂಧಿಯವರಿಗೆ ಸಾಧ್ಯವಾಗಲಿಲ್ಲ. ಸಂಪು 21 ದಿನ ನಡೆಯಿತು. ನಗುನಗುತ್ತಾ ನಡೆಯಿತು. ಯಾರಿಗೂ ಹಿಂಸೆ ಇಲ್ಲ. ಸುಖ

ಪರ್ಯವಸಾನ. ಮಾಲಿಕರು ಸಂಪುಮಾಡಿದವರಿಗೆ ಮಿಠಾಯಿ ಹಂಚಿದರು. ಪರಸ್ಪರ ಪ್ರೇಮ ಹೆಚ್ಚಿತು.

ಗಾಂಧಿಯವರು ಸಂಪು ನಡೆಸುವವರಿಗೆ ಕೆಲವು ನಿಯಮಗಳನ್ನು ಗೊತ್ತು ಮಾಡಿದರು :

1. ಕಾರ್ಮಿಕರ ಬೇಡಿಕೆಗಳು ನ್ಯಾಯವಾಗಿರಬೇಕು.
2. ಕಾರ್ಮಿಕರಲ್ಲಿ ಐಕಮತ್ಯವಿರಬೇಕು.
3. ಸಂಪಿನಲ್ಲಿ ಒತ್ತಾಯವಿರಬಾರದು. ಒಪ್ಪಿಗೆ ಇಲ್ಲದವರು ಕೆಲಸಕ್ಕೆ ಹೋಗಲು ಅಡ್ಡಿಮಾಡಬಾರದು. ಅವರಿಗೆ ಯಾವುದೇ ಹಿಂಸೆ ಮಾಡತಕ್ಕದ್ದಲ್ಲ.
4. ಸಂಪಿನ ಅವಧಿಯಲ್ಲಿ ಕಾರ್ಮಿಕರು ಭಿಕ್ಷೆ ಬೇಡಬಾರದು. ಸಂಘದಿಂದ ಸಹಾಯ ಬಯಸಬಾರದು. ಶಕ್ಯವಿದ್ದ ಬೇರೆ ಉದ್ಯೋಗಗಳಲ್ಲಿ ತೊಡಗಿ ತಮ್ಮ ಜೀವನವನ್ನು ಸಾಗಿಸಬೇಕಾಯಿತು. ಸಂಪು ದೀರ್ಘಾವಧಿ ನಡೆದರೂ ಅದಕ್ಕೆ ಸಿದ್ಧರಿರಬೇಕು.
5. ಸಂಪಿನ ಹಿಂದೆ ರಾಜಕಾರಣವಿರಬಾರದು. ಈ ನಿಯಮಗಳನ್ನನುಸರಿಸಿ ನಡೆಸಿದ ಸಂಪು ಸತ್ಯಾಗ್ರಹ. ಅದು ಎಂದಿಗೂ ಅಯಶಸ್ವಿಯಾಗುವುದಿಲ್ಲ.

ಅಹಿಂಸಾತ್ಮಕ ಹೋರಾಟಕ್ಕೆ ಸಾರ್ವತ್ರಿಕ ಸಹಾನುಭೂತಿ ದೊರೆಯುವುದು ; ದೊರೆಯಬೇಕು. ಸಂಪಿನ ಬೇಡಿಕೆ ನ್ಯಾಯಸಮ್ಮತವಾಗಿದ್ದರೆ ಮಾತ್ರ ಸಾರ್ವಜನಿಕ ಸಹಾನುಭೂತಿ ಹುಟ್ಟುವುದು ; ಹಬ್ಬುವುದು. ಕಾರ್ಮಿಕರ ಬೇಡಿಕೆಗಳು ನ್ಯಾಯವಾಗಿವೆ. ಎಂದು ಸಾರ್ವಜನಿಕರಿಗೆ ಹೇಗೆ ತಿಳಿಯಬೇಕು ? ಬಂಡವಾಳಗಾರರು ಹೇಳುವುದು ಅವರ ದೃಷ್ಟಿಯಿಂದ ; ಕಾರ್ಮಿಕರು ತಮ್ಮ ದೃಷ್ಟಿಯಿಂದ ; ಯಾರದು ಸರಿ ? ಯಾರದು ತಪ್ಪು ? ಈ ಬಗ್ಗೆ ನಿರ್ಣಯವನ್ನು ವಿವಾದಕ್ಕೆ ಸಂಬಂಧವಿಲ್ಲದ ಮೂರನೆಯವರು ಹೇಳಬೇಕು. ಆದ್ದರಿಂದ ವಿವಾದಗಳನ್ನು ಯೋಗ್ಯ ಪಂಚಾಯತಿಗೆ ಒಪ್ಪಿಸಬೇಕು. ಪಂಚರ ನೇಮಕವಾದ ಬಳಿಕ ಸಂಪು ನಿಲ್ಲಿಸಬೇಕು. ಪಂಚರು ಇತರರ ವರ್ಚಸ್ಸಿಗೆ ಒಳಗಾಗಬಾರದು. ಅವರು ನ್ಯಾಯ ನಿಷ್ಠುರರಾಗಿರಬೇಕು. ಪಂಚಾಯತರ ತೀರ್ಮಾನವನ್ನು ಎರಡು ಪಕ್ಷದವರೂ ಚಾಚೂತಪ್ಪದೆ ಕಾರ್ಯಗತ ಮಾಡಬೇಕು. ಪಂಚಾಯತರ ನಿರ್ಣಯದ ವಿರುದ್ಧ ಮತ್ತೊಂದು ದೊಡ್ಡ ಸಂಪು ನಡೆಯಬಾರದು.

ಪಂಚಾಯತಿಯ ನಿರ್ಣಯವನ್ನು ಯಾವ ಪಕ್ಷ ಉಲ್ಲಂಘಿಸುವುದೋ ಆ ಪಕ್ಷವು ಸಾರ್ವಜನಿಕ ಸಹಾನುಭೂತಿಯನ್ನೂ ಬೆಂಬಲವನ್ನೂ ಕಳಕೊಳ್ಳುವುದು.

ಭೂಮಿಯ ಪ್ರಶ್ನೆಯನ್ನು ಗಾಂಧೀ ಬೋಧಿಸಿದ ಅಹಿಂಸಾಮಾರ್ಗದಲ್ಲಿ ಬಿಡಿಸಲು ಪೂಜ್ಯ ವಿನೋಬಾಜೀಯವರು ಅವ್ಯಾಹತವಾಗಿ ಪ್ರಯತ್ನಮಾಡುತ್ತಿರುವರು. ಕಾರ್ಮಿಕರೂ ಅವರ ಮುಂದಾಳುಗಳೂ ಗಾಂಧೀ ತೋರಿಸಿದ ಮಾರ್ಗದಲ್ಲಿ ನಡೆದು ತಮ್ಮ ಹಿತವನ್ನು ಸಾಧಿಸಿಕೊಳ್ಳಬೇಕು.

---

# ಭಗವದ್ಗೀತೆಯ ಕರ್ಮಯೋಗ

ಜಿ. ವಿ. ನಾರಾಯಣಮೂರ್ತಿ

ಶ್ರೀಮದ್ ಭಗವದ್ಗೀತೆಯು "ಬ್ರಹ್ಮವಿದ್ಯೆ"ಯನ್ನು ಬೋಧಿಸುವುದಲ್ಲದೆ ಅದು ಯೋಗಶಾಸ್ತ್ರವೂ ಆಗಿದೆ. ಪ್ರತಿಯೊಂದು ಅಧ್ಯಾಯದ ಮುಕ್ತಾಯ ವಾಕ್ಯವೂ "ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ" ಎಂಬುದಾಗಿಯೇ ಇದೆ. ಒಂದೊಂದು ಅಧ್ಯಾಯಕ್ಕೂ ಒಂದೊಂದು ಯೋಗವೆಂದೇ ಹೆಸರು. "ಅರ್ಜುನ ವಿಷಾದಯೋಗ" ದಿಂದ ಆರಂಭವಾಗಿ "ಮೋಕ್ಷಸಂನ್ಯಾಸ ಯೋಗ"ದವರೆಗೆ ಹದಿನೆಂಟು "ಯೋಗ" ಗಳು ಉಕ್ತವಾಗಿವೆ. ಇವೆಲ್ಲವನ್ನು ಪ್ರಧಾನವಾಗಿ ಮೂರು ಯೋಗಗಳಲ್ಲಿ ವಿಂಗಡಿಸ ಬಹುದು; "ಜ್ಞಾನಯೋಗ", "ಭಕ್ತಿಯೋಗ" ಮತ್ತು "ಕರ್ಮಯೋಗ". ಇವು ಪ್ರತ್ಯೇಕವಾದ ಹೆಸರಿನಿಂದ ಕೂಡಿದ್ದರೂ ಎಲ್ಲವೂ "ಯೋಗವೇ". ಜ್ಞಾನ ಯೋಗದಲ್ಲಿ ಜ್ಞಾನ ಪ್ರಧಾನವಾದರೆ, ಭಕ್ತಿ ಕರ್ಮಗಳು ಗೌಣ; ಹಾಗೆಯೇ ಒಂದೊಂದಕ್ಕೂ; ಒಂದೊಂದೂ ಒಂದೊಂದು ಪಥವಾದರೂ ಅದರಲ್ಲಿ "ಯೋಗ" ಸಾಮಾನ್ಯ ಅಂಶ.

ಯೋಗವೆಂದರೇನು? ಪತಂಜಲಿ ಯೋಗಸೂತ್ರಗಳು ಬಹಳ ಪುರಾತನವಾದುವು. ಅದರಲ್ಲಿ ಯೋಗವಿಧಾನದ ಸ್ವರೂಪವನ್ನು ವಿವಿಧವಾಗಿ ವರ್ಣಿಸಲಾಗಿದೆ. ಇದು ಒಂದು ವರ್ಣನೆ: "ಯೋಗಃ ಚಿತ್ತವೃತ್ತಿಃ ನಿರೋಧಃ". ಚಿತ್ತದ ಕ್ರಿಯೆಗಳು ಒಂದರ ಹಿಂದೆ ಒಂದು ಸುತ್ತುತ್ತವೆ. ಅದನ್ನು ಅಂಕೆಯಲ್ಲಿ ಇಡುವುದೇ "ನಿರೋಧ." ಅದೇ ಯೋಗ; ಎಂದರೆ ಚಿತ್ತವು ದ್ವಂದ್ವಗಳಿಂದ ಚಲಿಸದೆ ಸ್ಥಿರವಾಗ ಬೇಕು. ಯೋಗವನ್ನು "ಯುಜ್ಯತೇ ಏತದ್ ಯೋಗಃ", "ಯುಜ್ಯತೇ ಅನೇನ ಯೋಗಃ", "ಯುಜ್ಯತೇ ತಸ್ಮಿನ್ ಇತಿ ಯೋಗಃ" ಎಂದೂ ವರ್ಣಿಸಲಾಗಿದೆ.

"ಯುಜ್" ಎನ್ನುವ ಧಾತುವಿನಿಂದ "ಯೋಗ" ಶಬ್ದ ವ್ಯುತ್ಪನ್ನವಾಗಿದೆ; ಇದರ ಅರ್ಥ ಕೂಡಿಸುವುದು ಎಂದು. ಇಂಗ್ಲಿಷಿನ "ಯೋಕ್" (yoke) ಎನ್ನುವ

ಶಬ್ದ ಇದೇ ಅರ್ಥದಿಂದ ಕೂಡಿದೆ. ಜೀವ ತನ್ನ ಬಂಧನಗಳಿಂದ ಪಾರಾಗಿ, ಸರ್ವವನ್ನೆಲ್ಲ ಏಕಬಿಂದುವಿನಲ್ಲಿ ಮೇಳೈಸಿ, ಕೇಂದ್ರೀಕರಿಸುತ್ತದೆ; ತನ್ನ ಅಂತರ್ಯಾಮಿಯೊಂದಿಗೆ ಒಂದಾಗುತ್ತದೆ. ಜ್ಞಾನವೋ, ಭಕ್ತಿಯೋ, ಕರ್ಮವೋ ಯಾವುದೋ ಒಂದೊಂದ ರಲ್ಲಿ ಉಳಿದ ಎರಡೂ ಗುರುತು ಕಾಣದ ರೀತಿಯಲ್ಲಿ ಒಂದಾಗಿರುತ್ತವೆ.

ಭಗವದ್ಗೀತೆ ಯೋಗವನ್ನು "ಯೋಗಃ ಕರ್ಮ ಸು ಕೌಶಲಮ್" ಎಂಬು ದಾಗಿಯೂ ವಿವರಿಸುತ್ತದೆ. ಕರ್ಮವನ್ನು ಕುಶಲತೆಯಿಂದ ಮಾಡುವುದು ಯೋಗ; ಕರಣಗಳ ಸಮತ್ವವನ್ನು ಸ್ಥಾಪಿಸುವುದು "ಯೋಗ". ಗೀತೆಯ ಈ ವಿವರಣೆ ಅವರ ಸಮನ್ವಯ ದೃಷ್ಟಿಗೆ ಅನುಗುಣವಾಗಿದೆ. ಭಗವಂತ ಅರ್ಜುನನ್ನು ಕುರಿತು ಹೇಳುವ "ತಸ್ಮಾದ್ಯೋಗೀ ಭವಾರ್ಜುನ", "ಯೋಗಸ್ಥಂ ಕುರು ಕೌಂತೇಯ" ಎಂಬ ಮಾತುಗಳು ಇದಕ್ಕೆ ನಿದರ್ಶನಗಳು. ಮಾನವನಲ್ಲಿರುವ ಪ್ರಾಣಶಕ್ತಿ, ಕ್ರಿಯಾ ಶಕ್ತಿ, ಭಾವನಾಶಕ್ತಿ, ಮನಶ್ಶಕ್ತಿ ಮತ್ತು ಜ್ಞಾನಶಕ್ತಿ—ಈ ಪಂಚಶಕ್ತಿಗಳು ಏಕಮುಖ ವಾದರೆ ಅದೇ ಯೋಗ. ಈ ಯೋಗವೇ ಅಂತಿಮ ಗುರಿಯಲ್ಲ; ಕೇವಲ ಸಾಧನ, ಪಥ ಮಾತ್ರ. ಅವರವರ ರೀತಿಗೆ ತಕ್ಕಂತೆ ಆ ಆ ಯೋಗಗಳು ಸಿದ್ಧಿಯನ್ನು ಸಾಧಿಸಿ ಕೊಡುತ್ತವೆ. ಸಾಧಕನಿಗೆ ಸೃಷ್ಟಿಯ, ಜಗತ್ತಿನ ರಹಸ್ಯ ಬಯಲಾಗುತ್ತದೆ. ಅದನ್ನು ಅನುಸರಿಸಿದವರು ಪರಮಪದವನ್ನು ಕಾಣುತ್ತಾರೆ; ಸಚ್ಚಿದಾನಂದವನ್ನು ಹೊಂದು ತ್ತಾರೆ.

## ೨

ಭಗವದ್ಗೀತೆ ಸಮನ್ವಯ ದೃಷ್ಟಿಯಿಂದ ಕೂಡಿದ್ದರೂ ಯಾವ ಯೋಗವನ್ನು ಉಪದೇಶಿಸುತ್ತದೆ ? ಈ ಪ್ರಶ್ನೆ ಬಹಳ ಸಹಜವಾದುದು. ಗೀತೆಗೆ ಭಾಷ್ಯ ಬರೆದಿರುವ ಒಬ್ಬೊಬ್ಬ ಆಚಾರ್ಯರೂ ಒಂದೊಂದು ಯೋಗವನ್ನು ಎತ್ತಿ ಹಿಡಿದಿದ್ದಾರೆ. ಅದ್ವೈತ ಸಿದ್ಧಾಂತ ಪ್ರವರ್ತಕರಾದ ಶಂಕರಾಚಾರ್ಯರು "ಜ್ಞಾನಯೋಗ"ವನ್ನು ಪ್ರತಿಪಾದಿಸಿದರೆ ವಿಶಿಷ್ಟಾದ್ವೈತ ಪ್ರವರ್ತಕರಾದ ರಾಮಾನುಜಾಚಾರ್ಯರು ಭಕ್ತಿಗೆ ಪ್ರಾಧಾನ್ಯವನ್ನೂ ದ್ವೈತ ಸಿದ್ಧಾಂತ ಪ್ರವರ್ತಕರಾದ ಮಧ್ವಾಚಾರ್ಯರು ಭಕ್ತಿಯುಕ್ತ ಕರ್ಮಕ್ಕೆ ಪ್ರಾಧಾ ನ್ಯವನ್ನೂ ಕೊಟ್ಟಿದ್ದಾರೆ. ಗೀತೆಗೆ ಆಧುನಿಕ ಭಾಷ್ಯಕಾರರಲ್ಲಿ ಪ್ರಸಿದ್ಧರಾದ ಲೋಕ ಮಾನ್ಯ ಬಾಲಗಂಗಾಧರ ತಿಲಕರು "ಗೀತಾರಹಸ್ಯ"ಅಥವಾ "ಕರ್ಮಯೋಗಶಾಸ್ತ್ರ" ಎಂದಿದ್ದಾರೆ. ಮಹಾತ್ಮಾ ಗಾಂಧೀಜಿಯವರು "ಅನಾಸಕ್ತಿ ಯೋಗ" ಎಂದಿದ್ದಾರೆ. ಅರವಿಂದ ಘೋಷರು "ಸಮನ್ವಿತ ಯೋಗ" (Integral Yoga) ಎಂದಿದ್ದಾರೆ.

ಆಚಾರ್ಯ ವಿನೋಬಾ "ಜೀವನಕಲೆ" ಎಂದರೆ, ಡಿ.ವಿ.ಜಿ. ಅವರು "ಜೀವನ ಧರ್ಮಯೋಗ" ಎಂದಿದ್ದಾರೆ. ಈ ಎಲ್ಲವೂ ಸತ್ಯವೇ. ಆದರೆ, ಅವು ಒಂದೊಂದು ದೃಷ್ಟಿಗೆ ಪ್ರಾಧಾನ್ಯ ನೀಡಿವೆ. ಆದುದರಿಂದ ಗೀತೆಯ ಉದ್ದೇಶವೇನು ?

ಈ ಪ್ರಶ್ನೆಗೆ ಉತ್ತರ ನೀಡಬೇಕಾದರೆ, ಸ್ವಲ್ಪ ವಿಚಾರ ಅಗತ್ಯ. ಯಾವುದೇ ಒಂದು ಗ್ರಂಥದ ಉದ್ದೇಶವನ್ನು ಅರಿಯಬೇಕಾದರೆ, ಅದರ ಉಪಕ್ರಮ ಮತ್ತು ಉಪಸಂಹಾರಗಳನ್ನು ಪರಿಶೀಲಿಸಬೇಕು. ಇದರಿಂದ ಬಹುಮಟ್ಟಿಗೆ ಗ್ರಂಥಕರ್ತನ ದೃಷ್ಟಿ ಏನೆಂಬುದು ಅರಿವಾಗಲು ಸಹಾಯವಾಗುತ್ತದೆ. ಗೀತೆಯ ಆರಂಭ ಒಂದು ಸಮಸ್ಯೆಯಿಂದ, ಇನ್ನೇನು ಸಮರ ಆರಂಭವಾಗಬೇಕೆನ್ನುವ ಮಹಾ ಪರೀಕ್ಷೆಯ ಸಮಯದಲ್ಲಿ ಪಾಂಡವ ಮಧ್ಯಮನಾದ ಅರ್ಜುನನು ಮೋಹವಶನಾಗಿ, ವಿಹ್ವಲ ಚಿತ್ತದಿಂದ ಕರ್ತವ್ಯವಿಮುಖನಾಗುತ್ತಾನೆ. "ಯಾರಿಗಾಗಿ ಈ ರಾಜ್ಯ ವೈಭವಗಳನ್ನು ಅಪೇಕ್ಷಿಸುವೆವೋ ಅವರೆಲ್ಲ ಪ್ರಾಣದ ಆಶೆಯನ್ನು ತೊರೆದು ಯುದ್ಧಕ್ಕೆ ಸಿದ್ಧವಾಗಿದ್ದಾರೆ. ಇವರಲ್ಲಿ ದೊಡ್ಡಪ್ಪ, ಚಿಕ್ಕಪ್ಪಂದಿರು, ಅಜ್ಜ, ಸೋದರಮಾವ, ಪುತ್ರ, ಪೌತ್ರ, ಭಾವಮೈದುನರು ಹೀಗೆ ಎಲ್ಲ ಇದ್ದಾರೆ- ಯುದ್ಧಕರ್ಮ ಬಹಳ ಕೆಟ್ಟದು. ಅದರಿಂದ ಧರ್ಮಗ್ಲಾನಿಯಾಗುತ್ತದೆ. ಈ ಬಂಧುಗಳನ್ನೆಲ್ಲ ಕೊಂದು ಯಾವ ಪಾಪಕ್ಕೆ ಹೋಗಬೇಕು" ಎನ್ನುತ್ತಾನೆ—ಆಗ ಆರಂಭಗೊಳ್ಳುತ್ತದೆ.

"ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ"* (ಸ್ವಜನರನ್ನು ಕೊಂದು ಹೇಗೆ ಸುಖಿಗಳಾದೇವು ?) ತನಗೆ ಎದುರಾಗಿ ನಿಂತವರು ಬಂಧುಮಿತ್ರರಲ್ಲದೆ ಬೇರೆ ಯಾರಾದರೂ ಆಗಿದ್ದರೆ, ಅರ್ಜುನನಿಗೆ ಈ ಸಮಸ್ಯೆ ಬರುತ್ತಲೇ ಇರಲಿಲ್ಲ. ಅವನು ಸಂಹಾರಲೀಲೆಯಲ್ಲಿ ತೊಡಗಲು ಹಿಂದೆಮುಂದೆ ನೋಡುತ್ತಿರಲಿಲ್ಲ. ಅವನ ಧರ್ಮಸಂಕಟ ಬಂಧುಮೋಹದಿಂದ ಜನಿಸಿದುದು. "ಈ ಯುದ್ಧ ಮಾಡುವುದಕ್ಕಿಂತ ತಿರಿದು ಉಣ್ಣುವುದು ಲೇಸು" ಎನ್ನುತ್ತಾನೆ. ಇದು ಅರ್ಜುನನ ಮನಃಸ್ಥಿತಿ. ಅದು ವಿಷಣ್ಣವಾಗಿತ್ತು ; ಕದಡಿತ್ತು.

ಇದನ್ನು ವೀಕ್ಷಿಸಿದ ಭಗವಾನ್ ಕೃಷ್ಣ, ಅರ್ಜುನನ ಸ್ಥಿತಿಯನ್ನು "ಕಶ್ಮಲಮಿದಂ", "ಅನಾರ್ಯಜುಷ್ಟಂ", "ಕ್ಲೈಬ್ಯಂ", "ಕ್ಷುದ್ರಂ", "ಹೃದಯದೌರ್ಬಲ್ಯಂ" ಎನ್ನುತ್ತಾನೆ. ಇದನ್ನು ತ್ಯಜಿಸಿ, "ಉತ್ತಿಷ್ಠ" ಎನ್ನುತ್ತಾನೆ.

ಅರ್ಜುನ ಇದಕ್ಕೆ ಉತ್ತರವಾಗಿ, "ನನ್ನ ಸ್ವಭಾವ ಕಾರ್ಪಣ್ಯ–ದೋಷಕ್ಕೆ ಪಕ್ಕಾಗಿದೆ. ಧರ್ಮಾಚರಣೆಯ ವಿಷಯದಲ್ಲಿ ಮೋಹಪರವಶನಾಗಿದ್ದೇನೆ. ಯಾವುದು

---

* ಗೀತಾ: ೧, ೩೭.

ನನಗೆ ಶ್ರೇಯಸ್ಕರವೋ ಅದನ್ನು ಹೇಳು. ನಾನು ನಿನ್ನ ಶಿಷ್ಯ. ನಿನ್ನ ಮರೆಹೊಕ್ಕಿದ್ದೇನೆ (ಪ್ರಪನ್ನಂ)" ಎನ್ನುತ್ತಾನೆ.

ಹೀಗೆ ಶರಣು ಬಂದ ಶಿಷ್ಯನಿಗೆ ಶ್ರೇಯಸ್ಸಿನ ಮಾರ್ಗವನ್ನು ಬೋಧಿಸುವುದೇ ಭಗವಂತನ ಉದ್ದೇಶ. ಅದೇ ಗೀತೆಯ ಉದ್ದೇಶ. ಅದು ಕರ್ಮ ಮಾಡುವುದಕ್ಕೆ ಪ್ರೋತ್ಸಾಹ. "ತಸ್ಮಾತ್ ಯುದ್ಧ್ಯಸ್ವ ಭಾರತ"[1]; "ಯುದ್ಧಾಯ ಕೃತ ನಿಶ್ಚಯಃ"[2]; "ಕುರುಕರ್ಮಂ"[3]; "ಮಾಮನುಸ್ಮರ ಯುಧ್ಯಚ"[4]; "ತಸ್ಮಾತ್ ತ್ವಂ ಉತ್ತಿಷ್ಠ"[5]; "ಕರ್ಮ ಕರ್ತುಮಿಹಾರ್ಹಸಿ"[6]; ಇತ್ಯಾದಿ ಎಲ್ಲವೂ ಕರ್ಮಕ್ಕೆ ಪ್ರೋತ್ಸಾಹ. ಭಗವಂತ ಯಾವುದೇ ಯೋಗವನ್ನು ಬೋಧಿಸುತ್ತಿದ್ದರೂ, ಉದ್ದಕ್ಕೂ ಬಿಡದೆ, ಕರ್ತವ್ಯಕರ್ಮದ ಕಡೆಗೇ ಅರ್ಜುನನ ಗಮನವನ್ನು ಪ್ರಧಾನವಾಗಿ ಸೆಳೆಯುತ್ತಾನೆ. ಕೊನೆಗೆ, "ಅಜ್ಞಾನ ಸಮ್ಮೋಹಃ ಪ್ರನಷ್ಟಃ ಕ್ವಚಿತ್"[7] (ಅಜ್ಞಾನದಿಂದ ಹುಟ್ಟಿದ ಭ್ರಾಂತಿಯು ಚೆನ್ನಾಗಿ ನಾಶವಾಯಿತೇನು?) ಎಂದು ಪ್ರಶ್ನಿಸುತ್ತಾನೆ. ಅರ್ಜುನನ ಉತ್ತರ ಸ್ಫಟಿಕಸ್ಪಷ್ಟವಾಗಿದೆ. ಅವನು ಹೇಳುತ್ತಾನೆ: "ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ। ಸ್ಥಿತೋಸ್ಮಿಗತ ಸಂದೇಹಃ ಕರಿಷ್ಯೇ ವಚನಂ ತವ"[8], (ಅಚ್ಯುತ, ನಿನ್ನ ಅನುಗ್ರಹದಿಂದ ನನ್ನ ಮೋಹವು ಹೋಯಿತು, ಸ್ಮೃತಿ ಲಭಿಸಿತು—ಆತ್ಮಸತ್ಯ, ದೇಹಕ್ಷಣಿಕ ಎಂಬ ಭಾವ—ಈಗ ಸಂದೇಹರಹಿತನಾಗಿದೇನೆ. ನಿನ್ನ ಮಾತಿನಂತೆ ನಡೆಯುತ್ತೇನೆ.)

ಭಗವಂತನ ಬೋಧೆಯಿಂದ ಅರ್ಜುನನ ಕದಡಿದ್ದ ಮನಸ್ಸು ಸ್ಥಿರವಾಯಿತು. ಅವನ ಧರ್ಮಸಂಕಟ ಪರಿಹಾರವಾಯಿತು. ಧರ್ಮದ ಸ್ವರೂಪವನ್ನು ಅರಿತು ಅವನು ಪ್ರಾಪ್ತ ಕರ್ಮದಲ್ಲಿ ತೊಡಗಿದ, ಮತಿ-ನೀತಿ ಸ್ಥಿರವಾಗಿ, ಅವನು ಕೃತಕೃತ್ಯನಾದ. ಇದನ್ನೆಲ್ಲ ಪರಿಶೀಲಿಸಿದಾಗ, ಗೀತಾಬೋಧೆ ಕರ್ತವ್ಯಕರ್ಮಾಚರಣೆಗೆ ಸಂದೇಹರಹಿತ ಕರೆಯೆಂದು ಗೊತ್ತಾಗದಿರದು.

ಅರ್ಜುನನ ಮನಸ್ಸಿನಲ್ಲಿ ಈ ಬಗೆಯ ಮೋಹ, ಭ್ರಾಂತಿ, ಇದ್ದಕ್ಕಿದ್ದಂತೆ ಉದ್ಭವಿಸಲು ಸಾಧ್ಯವೆ? ಈ ಪ್ರಶ್ನೆ ಸಹಜ. ಅರ್ಜುನನ ವಿಷಾದಕ್ಕೆ ಒಂದು ಹಿನ್ನೆಲೆಯಿದೆ. ಕುರುಕ್ಷೇತ್ರದಲ್ಲಿ ಯುದ್ಧ ಕೈಗೂಡುವುದಕ್ಕೆ ಮುಂಚೆ ಧೃತರಾಷ್ಟ್ರನಿಂದ ಪ್ರೇರಿತನಾದ ಸಂಜಯ, ಧರ್ಮಪ್ರವೃತ್ತಿಯುಳ್ಳ ಪಾಂಡವರ ಬಳಿಗೆ ಬಂದು, ಧರ್ಮವಚನಗಳ ಬಲೆಯಲ್ಲಿ ಅವರನ್ನು ಸಿಲುಕಿಸಲು ಪ್ರಯತ್ನ ಮಾಡಿದನು. ಅರ್ಜುನ

---

[1] ಗೀತಾ: ೨,೩೭; [2] ಗೀತಾ: ೮,೭; [3] ಗೀತಾ: ೧೧,೩೩; [4] ಗೀತಾ: ೨,೧೮; [5] ಗೀತಾ: ೩, ೧೫; [6] ಗೀತಾ: ೧೬, ೨೪; [7] ಗೀತಾ: ೧೮, ೭೨; [8] ಗೀತಾ: ೧೮, ೭೩;

ವಿಷಾದಭರಿತನಾಗಿ ಹೇಳುವ ಮಾತುಗಳೆಲ್ಲ ಸಂಜಯ ಹೇಳಿದ್ದಾನೆ. [1] ಅವು ಅವನ ಮನಸ್ಸಿನಲ್ಲಿ ಅಚ್ಚುಗಟ್ಟಾಗಿ ನಿಂತಿದ್ದವು. ಇದನ್ನು ಕೃಷ್ಣ "ಪ್ರಜ್ಞಾವಾದ" (Intellectual Non-sense) ಎನ್ನುತ್ತಾನೆ. ಈ ವಿಚಾರಕ್ಕೆ ಆಕರವಾದ ಒಂದು ಸಿದ್ಧಾಂತ ಅಂದು ಪ್ರಚಲಿತವಿದ್ದಿತು.[2] "ಕರ್ಮಣಾ ಬಧ್ಯತೇ ಜಂತುಃ ವಿದ್ಯಯಾ ತು ವಿಮುಚ್ಯತೇ" (ಜನ್ಮ ತಾಳಿದ ಎಲ್ಲವೂ ಕರ್ಮದಿಂದ ಬಂಧಿತವಾಗುತ್ತವೆ. ಜ್ಞಾನದಿಂದ ಬಿಡುಗಡೆ ಹೊಂದುತ್ತವೆ). ಪ್ರತಿಯೊಂದು ಕರ್ಮವೂ ಅದು ಒಳ್ಳೆಯದಿರಲಿ, ಕೆಟ್ಟದಿರಲಿ ಫಲಪ್ರತಿಫಲಗಳಿಂದ ಕೂಡಿರುತ್ತದೆ. ಇದು ಸಂಸಾರದಲ್ಲಿಯೋ, ಲೋಕವ್ಯಾಪಾರ ಜಾಲದಲ್ಲಿಯೋ ಸಿಕ್ಕುಬೀಳುವಂತೆ ಮಾಡುತ್ತದೆ. ಮೋಕ್ಷಕ್ಕೆ ಅಡಚಣೆಯಾಗುತ್ತದೆ. ಆದುದರಿಂದ ಎಲ್ಲ ಕರ್ಮಗಳನ್ನೂ ತ್ಯಜಿಸಿ, ಸಂನ್ಯಾಸಿಯಾಗಬೇಕೆಂದು ಬೋಧಿಸುತ್ತಿತ್ತು. ವ್ಯವಹಾರದಲ್ಲಿ ಈ ನಿವೃತ್ತಿ ಪಥ ನಿಜವಾದ ನಿವೃತ್ತಿ ಪಥವಾಗದೆ, ಪ್ರವೃತ್ತಿಯ ಮೂಲಕ್ಕೇ ಕುಠಾರ ಹಾಕಿದ್ದಿತು. ಜೀವನದ ಉತ್ಸಾಹ, ಸ್ಫೂರ್ತಿ ಇವುಗಳಿಗೆ ಸಂಚಕಾರ ಬಂದಿದ್ದಿತು. ಕ್ಷಾತ್ರಸ್ವಭಾವದವನಾದ ಅರ್ಜುನನಿಗಂತೂ ಅದು ವಿಪತ್ಕಾರಕವೇ ಆಗಿದ್ದಿತು; ಸಂನ್ಯಾಸ ಅವನಿಗೆ ಅಪಾಯಕಾರಿಯಾಗಿದ್ದಿತು; ಅವನಿಗೆ ಯುದ್ಧವೊಂದೇ ಶ್ರೇಯಸ್ಸಿನ ಮಾರ್ಗವಾಗಿದ್ದಿತು. ಆದುದರಿಂದ ಭಗವಂತ ಅದನ್ನೇ ಅರ್ಜುನನಿಗೆ ಉಪದೇಶಿಸಿದನೆಂದೂ ಹೇಳುವುದುಂಟು. ಇದು ಗೀತೆಯ ದೃಷ್ಟಿಯೇ ಎಂಬ ಪ್ರಶ್ನೆ ಏಳುತ್ತದೆ.

## ೨

ಗೀತೆ ವಾಸ್ತವಿಕವಾಗಿ ಭಾಗವತ ಧರ್ಮ ಬೋಧಿಸುವ ಮಾರ್ಗವನ್ನೇ ಅನುಸರಿಸಿದೆ. ಗೀತಾಚಾರ್ಯ ವಾಸುದೇವ–ಕೃಷ್ಣ. ಭಾಗವತ ಧರ್ಮದ ಲಕ್ಷಣವೇನು ? ಉದ್ದೇಶವೇನು ? ಇದು ಎರಡು ರೀತಿ : (ಅ) ಪೂರ್ಣಮುಕ್ತಿಯನ್ನು ಹೊಂದುವುದು ; (ಆ) ಜಗತ್ತಿನ ಕರ್ಮಗಳಲ್ಲಿ ತೊಡಗುವುದು. ಇದು ಕೇವಲ ನಿವೃತ್ತಿಯೂ ಅಲ್ಲ ; ಕೇವಲ ಪ್ರವೃತ್ತಿಯೂ ಅಲ್ಲ ಪ್ರವೃತಿಯಲ್ಲಿ ನಿವೃತ್ತಿ, ನಿವೃತ್ತಿಯಲ್ಲಿ ಪ್ರವೃತ್ತಿ. ಮಹಾಭಾರತದ ಶಾಂತಿ ಪರ್ವದಲ್ಲಿ ಈ ಭಾಗವತ ಧರ್ಮವನ್ನು 'ನಾರಾಯಣಪರಧರ್ಮ'ವೆಂದೂ ಕರೆಯಲಾಗಿದೆ.

---

[1] ಮಹಾಭಾರತ ಉಪ–೨೦ ರಿಂದ ೩೨ರ ವರೆಗಿನ ಅಧ್ಯಾಯಗಳಲ್ಲಿ ಈ ವಿಷಯ ತದ್ವತ್ತಾಗಿ ಬರುತ್ತದೆ. [2] ಮಹಾಭಾರತ, ಶಾಂತಿಪರ್ವ, ೨೪೧-೭.

" ನಾರಾಯಣಪರೋ ಧರ್ಮಃ ಪುನರಾವೃತ್ತಿ ದುರ್ಲಭಃ ।
ಪ್ರವೃತ್ತಿ ಲಕ್ಷಣಶ್ಚೈವ ಧರ್ಮೋ ನಾರಾಯಣಾತ್ಮಕಃ ॥ "*

ಇನ್ನೊಂದೆಡೆ ಇದನ್ನೇ ಪ್ರತ್ಯೇಕವಾದ ಭಾಷೆಯಲ್ಲಿ ಈ ರೀತಿ ಹೇಳಲಾಗಿದೆ :

" ಪ್ರವೃತ್ತಿಲಕ್ಷಣಂ ಧರ್ಮಂ ಋಷಿಃ ನಾರಾಯಣೋಽಬ್ರವೀತ್ ॥ "

ಧರ್ಮ ಪ್ರವೃತ್ತಿಪರ ಲಕ್ಷಣವುಳ್ಳುದು. ಇದು ನಾರಾಯಣ ಋಷಿಯಿಂದ ಉಕ್ತವಾದುದು ; ನಿವೃತ್ತಿಯನ್ನು ಸಾಧಿಸುವ ಪ್ರವೃತ್ತಿ. ಈಶಾವಾಸ್ಯ ಉಪನಿಷತ್ತಿನ ೧ ಮತ್ತು ೨ನೆಯ ಶ್ಲೋಕಗಳು ಈ ಧರ್ಮಪಥವನ್ನು ಪ್ರತಿಪಾದಿಸಿವೆ.

ಇದು ಮೊದಲನೆಯ ಶ್ಲೋಕ :

" ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಂ ॥

(ಜಗತ್ತಿನಲ್ಲಿ ಯಾವಯಾವುದು ಜೀವನವೋ ಅದೆಲ್ಲ ಈಶ್ವರನಿಂದ ತುಂಬಿದೆ. ಆದುದರಿಂದ ಆತನ ಹೆಸರಿನಲ್ಲಿ ನೀನು ತ್ಯಾಗ ಮಾಡಿ, ಯಥಾಪ್ರಾಪ್ತವಾದುದನ್ನು ಅನುಭವಿಸು. ಯಾರ ಹಣವೇ ಆಗಲಿ ಆಶೆಪಡಬೇಡ.) ಇದು ತ್ಯಾಗದ, ನಿವೃತ್ತಿಯ ವಿಧಾನವನ್ನು ಸೂಚಿಸುತ್ತದೆ.

ಎರಡನೆಯ ಶ್ಲೋಕ ಹೀಗಿದೆ :

" ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ "

[ಈ ಲೋಕದಲ್ಲಿ ಕರ್ಮಗಳನ್ನು ಮಾಡುತ್ತಲೇ ನೂರುವರ್ಷ ಜೀವಿಸಲು ಇಚ್ಛಿಸಬೇಕು. ದೇಹಧಾರಿಯಾದವನಿಗೆ ಇದೇ ಮಾರ್ಗ. ಮನುಷ್ಯನಿಗೆ ಕರ್ಮ (ಫಲವಾಸನೆ) ಅಂಟುವುದಿಲ್ಲ.] ಇದು ಪ್ರವೃತ್ತಿಯ ಮರ್ಮ.

ಭಾಗವತಧರ್ಮ ನಾರಾಯಣಪರಧರ್ಮವೆಂದು ಹಿಂದೆ ಹೇಳಿದೆ. ಅದು ನಾರಾಯಣ ಋಷಿ ಪ್ರಣೀತ. ಈಶಾವಾಸ್ಯದ ಋಷಿಯೂ ' ನಾರಾಯಣಋಷಿಯೇ.' ಆತ ಯಾರೋ ? ನಾರಾಯಣಿ ಸ್ವರೂಪ ಹೊಂದಿದ ' ಅಹಂ ಶೂನ್ಯ 'ನಾದ ಋಷಿ ಇರಬೇಕು. ಗೀತಾ ಬೋಧೆಗೆ —ಅದೂ ಒಂದು ಉಪನಿಷತ್ತು ಎಂದು ಕರೆಯಲ್ಪಟ್ಟಿರುವುದರಿಂದ—ಈ ಧರ್ಮವೇ ಆಧಾರವೆನ್ನಬೇಕು.

* ೩೪೭–೮೦, ೧.

ಜ್ಞಾನಿಯೂ ಲೋಕದ ದುಃಖಕೋಟಲೆ ಕಂಡು ಸುಮ್ಮನಿರುವುದು ಯುಕ್ತವಲ್ಲ. ಅದನ್ನು ಪರಿಹರಿಸಲು, "ಲೋಕಸಂಗ್ರಹ" ಎಸಗಲು ಕರ್ಮದಲ್ಲಿ ತೊಡಗಬೇಕು. ದಾಸಶ್ರೇಷ್ಠರು ನುಡಿದ "ಈಸಬೇಕು, ಇದ್ದು ಜೈಸಬೇಕು" ಎಂಬುದರ ಅರ್ಥವಿದೇ. "ಜಗತ್ತಿನಲ್ಲಿದ್ದು ಅದರ ಅನಂತ ಕರ್ಮಗಳಲ್ಲಿ ತೊಡಗಿದ್ದೂ ಅದರ ಸೋಂಕು ತಗುಲದಂತೆ ಇರಬೇಕು" (To be in the world and yet out of it) ಎಂಬುದರ ಅರ್ಥವೂ ಇದೇ. ಈಶೋಪನಿಷತ್ತು ಮೂರು ವಿಷಯಗಳನ್ನು ಬಹಳ ಸ್ಪಷ್ಟವಾಗಿ ನಿರೂಪಿಸಿದೆ: (ಅ) ಈಶ್ವರನ ಅಸ್ತಿತ್ವ ಅಥವಾ ಪ್ರಭುತ್ವ ಇವುಗಳ ಅಂಗೀಕಾರ; (ಆ) ಈಶ್ವರದತ್ತವಾದುದನ್ನು ಈಶ್ವರನಿಗೇ ಅರ್ಪಿಸಿಬಿಡುವುದು; (ಇ) ಜಗದ ಕರ್ಮಗಳನ್ನು ಮಾಡುತ್ತ ನೂರು ವರ್ಷ ಬದುಕಬೇಕೆಂಬ ಇಚ್ಛೆ. ಇದರ ಫಲವೇನು? ಕರ್ಮದ ಲೇಪವು ಮನುಷ್ಯನಿಗೆ ಬರದು. "ನ ಕರ್ಮಣಾ ಲಿಪ್ಯತೇ ನರಃ" ಗೀತೆ ಇದನ್ನೇ ಬದಲಾಯಿಸಿ ಹೇಳುತ್ತದೆ: "ನ ಮಾಂ ಕರ್ಮಾಣಿ ಲಿಂಪಂತೇ" ಎರಡರ ಅರ್ಥವೂ ಒಂದೇ. ಕರ್ಮ ಮಾಡುತ್ತಿದ್ದರೂ ಕರ್ಮಲೇಪ ರಹಿತವಾದ ಸ್ಥಿತಿಗೆ ಇದು ಉಪಾಯ; ಕೌಶಲ–"ಕರ್ಮಯೋಗ". ಇದನ್ನು ಇನ್ನೂ ಅಲಂಕಾರಮಯ ಭಾಷೆಯಲ್ಲಿ ಹೇಳುತ್ತದೆ ಗೀತೆ—"ಪದ್ಮಪತ್ರಮಿವಾಂಭಸ" ಎಂದು. ಅರ್ಜುನನೂ ಈಶ್ವರರೂಪೀ ಕೃಷ್ಣನ ಪ್ರಭುತ್ವವನ್ನು ಅಂಗೀಕರಿಸುತ್ತಾನೆ. ಕರ್ಮವನ್ನೆಲ್ಲ ಅವನಿಗೇ ಸಮರ್ಪಿಸಿಬಿಡುತ್ತಾನೆ. ಕೃತಕೃತ್ಯನಾಗುತ್ತಾನೆ.

ಗೀತೆ ಈ ಭಾವವನ್ನು ಹತ್ತು ರೀತಿಯಲ್ಲಿ ಹತ್ತು ಕಡೆ ಹೇಳಿದೆ. ಮೂರನೆಯ ಅಧ್ಯಾಯದಲ್ಲಿ ಬರುವ ಈ ಶ್ಲೋಕ ಕರ್ಮಯೋಗಿಯು ಪರಮಾತ್ಮನನ್ನು ಹೊಂದುವ ಪರಿಯನ್ನು ವರ್ಣಿಸುತ್ತದೆ!

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ || ೩, ೧೯

(ಆದುದರಿಂದ ಆಸಕ್ತಿರಹಿತನಾಗಿ ಯಾವಾಗಲೂ ಕರ್ತವ್ಯಕರ್ಮವನ್ನು ಮಾಡಬೇಕು. ನಿರಭಿಮಾನಿಯಾದ ಪುರುಷನು ಕರ್ಮಗಳನ್ನು ಮಾಡುತ್ತಲೇ ಪರಮಾತ್ಮನನ್ನು ಹೊಂದುತ್ತಾನೆ.)

ಅಜ್ಞಾನಿಗಳು ಅಭಿಮಾನದಿಂದ ಕರ್ಮ ಮಾಡುತ್ತಾರೆ. ಜ್ಞಾನಿಗಳು ಆಸಕ್ತಿ ರಹಿತರಾಗಿ ಲೋಕಕಲ್ಯಾಣದ ದೃಷ್ಟಿಯಿಂದಲೇ ಕರ್ಮ ಮಾಡುತ್ತಾರೆ. ಇದರಿಂದ ಎಸಗಿದ ಎಲ್ಲ ಕರ್ಮಗಳೂ ಪರಮಾತ್ಮನಿಗೆ ಅರ್ಪಿತವಾದ ಕರ್ಮಗಳಾಗುತ್ತವೆ.

ಕರ್ಮಯೋಗ ಅನಾದಿ ಕಾಲದಿಂದ ಬಂದುದು. ಭಗವಂತನಿಂದಲೇ ಮುಮುಕ್ಷು ಗಳಿಗೆ ಅವರ ಉದ್ಧಾರಕ್ಕಾಗಿ ಬೋಧಿತವಾದುದು. ಇದು ಬಹಳ ರಹಸ್ಯವಾದುದು. "ಗಹನಾ ಕರ್ಮಣೋ ಗತಿಃ." ಜನಕನೇ ಮೊದಲಾದ ರಾಜರ್ಷಿಗಳು ಇದನ್ನು ಎಸಗಿ ಜೀವನ್ಮುಕ್ತರಾದರು.

೪

ಗೀತೆಯು ಬೋಧೆ ಬಂದ ಕಾಲ ಒಂದು ಪ್ರಕ್ಷುಬ್ಧ ಕಾಲವಾಗಿತ್ತು. ಅಂದು ಧರ್ಮಾಧರ್ಮಗಳ ನಡುವೆ, ಭೌತಿಕವಾಗಿ, ನೈತಿಕವಾಗಿ ಮತ್ತು ಸಾಮಾಜಿಕವಾಗಿ, ಎಲ್ಲ ದೃಷ್ಟಿಗಳಿಂದಲೂ ಸಂಘರ್ಷ ನಡೆದಿತ್ತು. ಅರ್ಜುನನೇ ಆ ಸಂಘರ್ಷದ ಪ್ರತೀಕ. ಆ ಸಂಘರ್ಷವನ್ನು ಪರಿಹರಿಸಿದವನು ಯೋಗೀಶ್ವರ ಕೃಷ್ಣ–ಭಗವಂತ. ಅವನು ಯೋಗ ಯುಕ್ತನಾಗಿ, ಶಿಷ್ಯೋತ್ತಮನಾದ ಅರ್ಜುನನಿಗೆ ಯೋಗರಹಸ್ಯವನ್ನು ಬೋಧಿಸಿ, ಅವನಿಂದ ಧರ್ಮಸ್ಥಾಪನೆಯ ಕಾರ್ಯ ಮಾಡಿಸಿದ. "ಮಾಡುವವನು ನಾನಲ್ಲ", ನಾನು "ನಿಮಿತ್ತ ಮಾತ್ರ" ಎಂಬ ಭಾವ ಅವನ ಹೃದಯದಲ್ಲಿ ನಾಟುವಂತೆ ಮಾಡಿದ. "ನಾಹಂ ಕರ್ತಾ ಹರಿಃ ಕರ್ತಾ" ಎಂಬ ಮನೋ ಪ್ರವೃತ್ತಿ ಅವನಲ್ಲಿ ಬೆಳೆಯಿತು.

ಜ್ಞಾನದಿಂದಲೇ ಮೋಕ್ಷ ಸಿದ್ಧಿ, ಆದರೆ ಅದೇ ಜ್ಞಾನದಿಂದ ಸತ್ವ ಶುದ್ಧಿಯಾಗ ಬೇಕು. ಸತ್ವ ಶುದ್ಧಿ ಹೊಂದಿ, ಅದರ ಬಲದಿಂದ ಲೋಕಸಂಗ್ರಹ ಕಾರ್ಯದಲ್ಲಿ ಪ್ರವೃತ್ತರಾಗಬೇಕು. ಯಾಜ್ಞ್ಯವಲ್ಕ್ಯ ಸ್ಮೃತಿ ಹೀಗೆ ಹೇಳುತ್ತದೆ: "ಜ್ಞಾನೇ ನೈವ ಮೋಕ್ಷಃ ಸಿದ್ಧ್ಯತಿ ಕಿಂತು ತದೇವ ಜ್ಞಾನಂ ಸತ್ವ ಶುದ್ಧಿಂ ವಿನಾ ನೋಪ ಪದ್ಯತೇ" ಜ್ಞಾನಾಪೇಕ್ಷೆಯಾಗಿ ಸತ್ಯನಿಷ್ಠನಾಗಿರುವ ಗೃಹಸ್ಥನೂ ಸಂನ್ಯಾಸಾಶ್ರಮ ವನ್ನು ತೆಗೆದುಕೊಳ್ಳದೆ ಮೋಕ್ಷವನ್ನು ಹೊಂದಬಲ್ಲನು. ಅವನು ಸರ್ವೇಶ್ವರನನ್ನು ಉದ್ದೇಶಿಸಿ, ಕಾಯೇನ ವಾಚಾಮನಸಾ ಲೋಕಸಂಗ್ರಹ ಕಾರ್ಯದಲ್ಲಿ ತೊಡಗ ಬೇಕು, ಏಕೆ?

ಸರ್ವ ಲೋಕಗಳನ್ನು ಸೃಜಿಸಿದ ಕರ್ತನೇ ಲೋಕ ಸಂರಕ್ಷಣ ಕಾರ್ಯವನ್ನೂ ಹೊತ್ತಿದ್ದಾನೆ. ಅದು ಅವನನ್ನು ಸ್ವಲ್ಪವೂ ಬಂಧಿಸದು. ಅವನ ಇಚ್ಛೆಗೆ, ಲೀಲೆಗೆ ಅನುಗುಣವಾಗಿಯೇ ಅದು ನಡೆದೀತು. ಆ ವಸ್ತುಗಳು ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ವರ್ತಿಸುತ್ತವೆ. ಅದು ಈಶ್ವರ ನಿಯಮ; ನಿಯತಿ ಧರ್ಮ. ಉದಾ ಹರಣೆಗೆ, ಯುದ್ಧ ಮಾಡೆನೆಂದು ತಲೆಮೇಲೆ ಕೈ ಹೊತ್ತು ಕುಳಿತ ಅರ್ಜುನನಿಗೆ

ಭಗವಂತ ನಾನಾ ರೀತಿಯಲ್ಲಿ ತಿಳಿಯ ಹೇಳಿ, ಕಡೆಗೆ ಹೀಗೆ ಅನ್ನುತ್ತಾನೆ :

ಯದಹಂಕಾರ ಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯಸಿ ॥
೧೮–೫೯

( ಯಾವ ಅಹಂಭಾವವನ್ನು ಆಶ್ರಯಿಸಿ, ಯುದ್ಧ ಮಾಡುವುದಿಲ್ಲವೆಂದು ನೀನು ಹೇಳುವೆಯೋ, ಈ ನಿನ್ನ ನಿಶ್ಚಯವು ಸುಳ್ಳಾಗುತ್ತದೆ. ನಿನ್ನ ಸ್ವಭಾವವೇ ನಿನ್ನನ್ನು ಯುದ್ಧಕ್ಕೆ ಪ್ರೇರೇಪಿಸುತ್ತದೆ.)

ಇಲ್ಲಿ ಗಮನಿಸಬೇಕಾದ ಅಂಶವೊಂದಿದೆ. ಯುದ್ಧಪರಿಣತನಾದ ಅರ್ಜುನ ನಿಜವಾದ ಆತ್ಮಭಾವದಿಂದ ಪ್ರೇರಿತನಾಗಿ ಯುದ್ಧ ವಿಮುಖನಾಗಿರಲಿಲ್ಲ. ಅವನ ಮನಸ್ಸನ್ನು ಮುತ್ತಿ ಶಿಥಿಲಗೊಳಿಸಿದ್ದುದು ಮೋಹದ ಮಾಯೆ. ಅವನು ಕೃತ ನಿಶ್ಚಯನಾಗಿ ಯುದ್ಧದಲ್ಲಿ ತೊಡಗದೆ, ಅದನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದರೂ ಅದರಿಂದ ಪ್ರತ್ಯಕ್ಷ ಯುದ್ಧದಲ್ಲಿ ಭಾಗವಹಿಸಿ ಅದರಿಂದ ಪ್ರಾಪ್ತವಾಗುವ ಪಾಪಕ್ಕಿಂತ ಹೆಚ್ಚಿನ ಪಾಪ ಅವನಿಗೆ ಪ್ರಾಪ್ತವಾಗುತ್ತಿತ್ತು. ಇದನ್ನು ತಪ್ಪಿಸುವುದಕ್ಕಾಗಿಯೇ ಭಗವಂತ, ‘ ಸರ್ವಗುಹ್ಯತಮ ’ವಾದ, ಕರ್ಮಯೋಗವನ್ನು ಬೋಧಿಸಿದ :

“ ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಪಿ ಸ ಇಮಾನ್ ಲೋಕಾನ್ ನ ಹನ್ತಿ ನ ನಿಬಧ್ಯತೇ ॥
೧೮–೧೭

(ಯಾವಾತಾನ ಭಾವವು “ ನಾನು ಕರ್ತನಲ್ಲ ” ಎಂದಿರುವುದೋ, ಯಾರ ಬುದ್ಧಿಯು ದೇಹೇಂದ್ರಿಯಾದಿ ಕರ್ಮಗಳೊಡನೆ ಲೇಪ ಹೊಂದಿರುವುದಿಲ್ಲವೋ, ಆತನು ಈ ಲೋಕವನ್ನೆಲ್ಲ ಸಂಹರಿಸಿದರೂ ಆತ ಯಾರನ್ನೂ ಕೊಂದಂತೆ ಆಗುವುದಿಲ್ಲ. ಆತನು ಆ ಕರ್ಮ ಫಲದ ಪಾಪದಿಂದ ಬಂಧಿತನಾಗುವುದಿಲ್ಲ.)

ಈ ಶ್ಲೋಕಕ್ಕೆ ಮಹಾತ್ಮಾ ಗಾಂಧೀಜಿಯವರು ಬರೆದಿರುವ ಟಿಪ್ಪಣಿ ಮನನೀಯ ವಾಗಿದೆ :

“ ಮೇಲೆ ಮೇಲೆ ಓದಿದರೆ, ಈ ಶ್ಲೋಕ ಮನುಷ್ಯನನ್ನು ಭ್ರಮೆಯಲ್ಲಿ ಸಿಲುಕಿಸುತ್ತದೆ. ಗೀತೆಯ ಶ್ಲೋಕಗಳು ಕಾಲ್ಪನಿಕ ಆದರ್ಶವನ್ನು ಅವಲಂಬಿಸಿವೆ. ಅದರ ಪ್ರತ್ಯಕ್ಷ ಮಾದರಿ ಜಗತ್ತಿನಲ್ಲಿ ಸಿಗಲಾರದು. ಕೇವಲ ಉಪಯುಕ್ತತೆಗಾಗಿ ಕಾಲ್ಪನಿಕ ಆದರ್ಶದ ಆಕೃತಿಗಳು ಭೂಮಿತಿಯಲ್ಲಿ (Geometry) ಹೇಗೆ ಆವಶ್ಯಕವೋ ಧರ್ಮ ವ್ಯವಹಾರದಲ್ಲಿಯೂ ಹಾಗೆಯೇ. ಆದುದರಿಂದ ಈ ಶ್ಲೋಕವನ್ನು ಹೀಗೆ ಅರ್ಥ

ಮಾಡಬಹುದು. ಯಾರ ಅಹಂಭಾವ ಸುಟ್ಟು ಬೂದಿಯಾಗಿದೆಯೋ, ಯಾರ ಬುದ್ಧಿಯಲ್ಲಿ ಅಣುಮಾತ್ರವಾದರೂ ಮಾಲಿನ್ಯವಿಲ್ಲವೋ, ಅಂಥವನು ಸಮಗ್ರ ಜಗತ್ತನ್ನು ಕೊಂದರೆ ಕೊಲ್ಲಲಿ. ಆದರೆ ಯಾರಲ್ಲಿ ಅಹಂಭಾವವಿಲ್ಲವೋ ಅವನಿಗೆ ಶರೀರವೂ ಇಲ್ಲ. ಯಾರ ಬುದ್ಧಿ ವಿಶುದ್ಧವೋ ಅವನು ತ್ರಿಕಾಲದರ್ಶಿ. ಇಂಥ ಪುರುಷ ಕೇವಲ ಭಗವಂತನೊಬ್ಬನೇ. ಅವನು ಏನು ಮಾಡಿದರೂ ಅಕರ್ತೃ ; ನಾಶಮಾಡುತ್ತಿದ್ದರೂ ಅಹಿಂಸಕ. ಆದುದರಿಂದ ಮನುಷ್ಯನಿಗೆ ಒಂದೇ ಮಾರ್ಗ ; ಕೊಲ್ಲದಿರುವ ಶಿಷ್ಟಾಚಾರ ; ಇದು ಶಾಸ್ತ್ರದ ಮಾರ್ಗ" ಆದರೆ ಅರ್ಜುನ ಯುದ್ಧಮಾಡಿ ಕೊಲ್ಲುತ್ತಾನಲ್ಲ. ಇದಕ್ಕೆ ಉತ್ತರವೇನು ? ಗೀತಾಯುಗದಲ್ಲಿ ಅಹಿಂಸೆ ಮಾನ್ಯವಾಗಿದ್ದರೂ ಭೌತಿಕ ಯುದ್ಧ ಸರ್ವ ಸಾಮಾನ್ಯವಾಗಿತ್ತು. ಗೀತಾಕಾರ ಇಂಥ ಯುದ್ಧದ ಉದಾಹರಣೆ ಕೊಡಲು ಸಂಕೋಚ ಪಡಲಿಲ್ಲ ; ಪಡುವ ಸಂಭವವೂ ಇರಲಿಲ್ಲ.

ಗೀತೆಯ ಕರ್ಮಯೋಗ, ವಿಷಯ ಮಥನಕ್ಕೆ ಒಳಗಾದ ಮುಮುಕ್ಷುವಿಗೆ ಆತ್ಮ ಸಾಕ್ಷಾತ್ಕಾರ ಮಾಡಿಕೊಡಲು ಉಪಯೋಗಿಸಿದ ಮಹಾ ಸಾಧನ 'ಕರ್ಮಫಲ ತ್ಯಾಗ.' ಇದನ್ನು ಎರಡನೆಯ ಅಧ್ಯಾಯದಲ್ಲೇ ಭಗವಂತ ಸ್ಪಷ್ಟಪಡಿಸಿದ್ದಾನೆ :



"ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ
ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಸ್ತ್ವಕರ್ಮಣಿ ॥ ಅ ೨ ಶ್ಲೋ ೪೭

(ಕರ್ಮ ಮಾಡುವುದಕ್ಕೆ ಮಾತ್ರ ನಿನಗೆ ಅಧಿಕಾರ. ಅದರಿಂದ ಹುಟ್ಟುವ ಅನೇಕ ಫಲಗಳ ಅಧಿಕಾರ ಎಂದಿಗೂ ಇಲ್ಲ. ಕರ್ಮಫಲ ನಿನ್ನ ಉದ್ದೇಶವಾಗದಿರಲಿ. ಕರ್ಮ ಮಾಡದಿರುವ ಆಗ್ರಹವೂ ನಿನಗೆ ಬೇಡ.)

"ಕರ್ಮಫಲತ್ಯಾಗ" ಎಂದರೇನು ? ಅದು ಕರ್ಮಫಲದ ಬಗೆಗೆ ಅನಾಸಕ್ತಿ. ದೇಹಾಭಿಮಾನವೇ ಆಸಕ್ತಿಯ ಕಾರಣ. ದೇಹ ನಶ್ವರ, ಅಸ್ಥಿರ ಎಂಬ ಭಾವನೆ ಮೂಡಿ ಬಂದಾಗ, ಅಲ್ಲಿಯೇ ಅನಾಸಕ್ತಿಯ ಉಗಮ. ಈ ಅನಾಸಕ್ತಿಯನ್ನು ಸಾಧಿಸಲು ಗೀತೆ ನಿಶ್ಚಿತ ಉತ್ತರವನ್ನು ನೀಡುತ್ತದೆ : "ನಿಷ್ಕಾಮ ಕರ್ಮದಿಂದ ಕರ್ಮಫಲವನ್ನು ತ್ಯಜಿಸಿ, ಸರ್ವಕರ್ಮಗಳನ್ನು ಕೃಷ್ಣಾರ್ಪಣೆ ಮಾಡಿ ; ಮನ, ವಚನ ಮತ್ತು ಕರ್ಮಗಳನ್ನು ಕೃಷ್ಣಾರ್ಪಣೆ ಮಾಡಿ." ಜ್ಞಾನ, ಭಕ್ತಿ ಎರಡೂ ಕರ್ಮಕ್ಕೆ ನೆರವಾಗಬೇಕು. ಕರ್ಮಫಲ ತ್ಯಾಗವೆಂದರೆ, ಪರಿಣಾಮವನ್ನು ಕುರಿತು ಉಪೇಕ್ಷೆ ಎಂದು ಪರಿಣಾಮ ಅರ್ಥವಲ್ಲ. ಸಾಧನ ವಿಚಾರ ಮತ್ತು ಅದರ ವಿವರ, ಇವೆಲ್ಲವುಗಳ ಜ್ಞಾನ ಆವಶ್ಯಕ. ಒಟ್ಟಿನಲ್ಲಿ ಪರಿಣಾಮವನ್ನು ಕುರಿತು ಸಂತತವಾಗಿ ಚಿಂತಿಸದೆ, ಸಾಧನೆಯಲ್ಲಿ ನಿಮಗ್ನನಾಗಿರುವವನೇ ಫಲತ್ಯಾಗಿ. ಗೀತೆ ಸಂನ್ಯಾಸವನ್ನೂ ಒಂದು ಯೋಗವಾಗಿ ಬೋಧಿಸುತ್ತದೆ. ಗೀತೆಯಸಂನ್ಯಾಸ ಈ ರೀತಿ ಇದೆ.

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋವಿದುಃ ।
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ಅ. ೧೮, ಶ್ಲೋ. ೨

(ಕಾಮನೆಯಿಂದ ಹುಟ್ಟಿದ ಕರ್ಮಗಳ (ಕಾಮ್ಯಕರ್ಮ) ತ್ಯಾಗವೇ ಸಂನ್ಯಾಸ ಎಂದು ಜ್ಞಾನಿಗಳು ಹೇಳುತ್ತಾರೆ. ಸಮಸ್ತ ಕರ್ಮಗಳ ಫಲವನ್ನು ತ್ಯಜಿಸುವುದೇ ತ್ಯಾಗ ಎಂದು ಬುದ್ಧಿವಂತರು ಹೇಳುತ್ತಾರೆ."

ಈ ಫಲತ್ಯಾಗ ಭಗವಂತನ ಪಾದಾರವಿಂದದಲ್ಲಿ ಆಗಬೇಕು. ಕ್ರಿಯೆ ನಮ್ಮದೇ ಆದರೂ ಅದಕ್ಕೆ ತಕ್ಕಂತೆ ಫಲಾಫಲಗಳನ್ನು ನೀಡುವವನು ಭಗವಂತನೇ. ಆದುದರಿಂದ ಅದನ್ನು ಅವನಿಗೇ ಸಮರ್ಪಿಸಿ ಬಿಡಬೇಕು. ಈಶಾವಾಸ್ಯ ಉಪನಿಷತ್ತು ಹೇಳುವಂತೆ ಇದು " ತೇನ ತ್ಯಕ್ತೇನ "; ಅವನು ಕೊಟ್ಟುದನ್ನು ಮತ್ತೆ ಅವನಿಗೇ ಅರ್ಪಿಸಿ ಬಿಡುವುದು. ಭಕ್ತಿ ಪಂಥದ ದಾಸರು ಇದನ್ನು ಸರಳವಾದ ಮಾತಿನಲ್ಲಿ ಹೇಳಿದಾರೆ: "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದರಂತೆ ಬಾಳಿರೋ." ಇದು ಕರ್ಮಯೋಗದ ಸಾರಸರ್ವಸ್ವ.

ಭಗವದ್ಗೀತೆ ಇದನ್ನು " ಯಜ್ಞ " ಎಂದು ಕರೆದಿದೆ.

ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।
ತದರ್ಥಂ ಕರ್ಮ ಕೌಂತೇಯ ಮುಕ್ತಸ್ಸಂಗ ಸಮಾಚರ ॥ ಅ. ೩ ; ಶ್ಲೋ. ೯

( ಯಜ್ಞಾರ್ಥವೆಂದು ಮಾಡಿದ ಕರ್ಮವನ್ನು ಬಿಟ್ಟು ಬೇರೆ ರೀತಿಯಲ್ಲಿ ಮಾಡಿದ ಕರ್ಮಗಳೆಲ್ಲ ಮನುಷ್ಯನನ್ನು ಲೋಕಕ್ಕೆ .ಬಂಧಿಸುತ್ತವೆ. ಆದುದರಿಂದ ಯಜ್ಞಾರ್ಥವಾಗಿ ಎಲ್ಲ ಕರ್ಮವನ್ನೂ ಮಾಡಿ, ಮುಕ್ತಸಂಗನಾಗು )

ಗೀತೆಯ ' ಯಜ್ಞ 'ದ ಅರ್ಥ ಪೂರ್ವಮೀಮಾಂಸದಲ್ಲಿ ಉಕ್ತವಾಗಿರುವ ಯಜ್ಞದ ಅರ್ಥದಿಂದ ಭಿನ್ನವಾಗಿದೆ. ಹಿಂದೆ ವಿವಿಧ ರೀತಿಗಳ ಯಜ್ಞಗಳು ವೇದೋಕ್ತವಾಗಿದ್ದರೂ ಅಲ್ಲಿ ಅದರ ಅರ್ಥ ವಿಶಾಲವಾಗಿದೆ. ಫಲಾಪೇಕ್ಷೆಯಿಲ್ಲದೆ ಮಾಡಿದ ಕರ್ಮದ ಫಲವೂ ಭಗವಂತನಿಗೆ ಸಮರ್ಪಣೆಯಾಗಬೇಕು. " ಯಜ್ಞಾರ್ಥ " ಎಂದರೆ, " ವಿಷ್ಣುವಿಗೆ, " ಭಗವಂತನಿಗೆ ಅರ್ಪಿತವೆಂದು ಅರ್ಥ.

ಕರ್ಮಯೋಗಿ ಲೋಕಸಂಗ್ರಹಕ್ಕಾಗಿ ಕರ್ಮವೆಸಗುತ್ತಾನೆ. ಅವನು ಆತ್ಮರತನಾಗಿ, ಕರ್ಮಮಾಡುತ್ತಾನೆ. ಲೋಕಸಂಗ್ರಹವೆಂದರೆ, ಲೋಕವು ನೀತಿಪತನಕ್ಕೂ ಮತ್ತು ದೌಷ್ಟ್ಯದೌರ್ಜನ್ಯಗಳಿಗೂ ಗುರಿಯಾಗದ ಸುಸ್ಥಿತಿಯ ರಕ್ಷಣೆ. ಲೋಕದ ಬದುಕು, ಸಾಮಾಜಿಕ ಕ್ರಿಯೆ ನೀತಿಯುಕ್ತವಾಗಿರಬೇಕು. ಧರ್ಮ ಮತ್ತು ನೀತಿಗಳ ಉದ್ದೇಶವಾದರೂ ಸಮಾಜವನ್ನು ಆಧ್ಯಾತ್ಮೀಕರಣ ಮಾಡುವುದು ; (Spiritualisation) ಈಶ್ವರನ ಸರ್ವಪಿತೃಭಾವವನ್ನು ಅಂಗೀಕರಿಸಿ, ಮಾನವ ಭ್ರಾತೃಭಾವವನ್ನು

ಬೆಳೆಸುವುದು. ಲೋಕ ಸಂಸ್ಥೆಗಳಲ್ಲಿ ಜೀವನಾದರ್ಶಗಳನ್ನು ತುಂಬುವ ಸ್ಫೂರ್ತಿ ಅದು.

ಲೋಕದಲ್ಲಿ ಸಾಮಾನ್ಯ ಜನ ವಿಶಿಷ್ಟರ, ಶ್ರೇಷ್ಠರ, ವರಿಷ್ಠರ ಮಾರ್ಗವನ್ನೇ ಅನುಸರಿಸುವರು. ಈ ಶ್ರೇಷ್ಠ ಕರ್ಮಯೋಗಿಗಳು ಸಮಾಜಕ್ಕೆ ಮಾರ್ಗದರ್ಶಕರು; ದಾರಿದೀಪ ಸ್ವರೂಪರು. ಅವರು ನಡೆದ ಹಾದಿ, ಅವರು ಹಚ್ಚಿದ ಜ್ಯೋತಿ ಸಾಮಾನ್ಯರಿಗೆ ಸದಾ ಸ್ಫೂರ್ತಿದಾಯಕವಾಗಿರುತ್ತದೆ. ಅವರಿಗೆ ಧರ್ಮದ ರಹಸ್ಯ ಗೋಚರವಾಗಿರುತ್ತದೆ. ಅವರು 'ಮಹಾಜನರು.' ಅವರ ಪಂಥವನ್ನೇ ಸಾಮಾನ್ಯರು ಅನುಸರಿಸುತ್ತಾರೆ. ಇದನ್ನು ಗೀತೆ ಹೀಗೆ ಸ್ಪಷ್ಟವಾಗಿ ತಿಳಿಸಿದೆ:

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಾಃ ।<br>
ಸಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೩॥೨೧॥

(ಶ್ರೇಷ್ಠರು ನಡೆದಂತೆಯೇ ಇತರರೂ ನಡೆಯುತ್ತಾರೆ. ಅವರ ಆದರ್ಶವನ್ನೇ ಲೋಕವೂ ಅನುಸರಿಸುತ್ತದೆ.)

ಆದುದರಿಂದಲೇ, ಅರ್ಜುನ ಕರ್ಮಫಲತ್ಯಾಗದ ಮನೋದೃಷ್ಟಿಯಿಂದ, ಭಗವದರ್ಪಣ ಭಾವದಿಂದ, ಕರ್ಮದಲ್ಲಿ ತೊಡಗಬೇಕೆಂದು ಭಗವಂತನ ಕಳಕಳಿಯ ಬೋಧೆ. ಆದರೆ ಶ್ರೇಷ್ಠರೆನಿಸಿಕೊಂಡವರು ತನ್ನಷ್ಟೇ ಆತ್ಮತೃಪ್ತನುವೆಂದುಕೊಂಡು ಸಾಮಾನ್ಯರ ಮನಸ್ಸಿನಲ್ಲಿ ಶ್ರದ್ಧೆಯ ಸ್ಥೈರ್ಯವನ್ನು ಕದಲಿಸಬಾರದು. ಕ್ರಮಕ್ರಮವಾಗಿ ಅವರ ಆಧಾರರಹಿತ ನಂಬಿಕೆಗಳನ್ನು ಕಳೆಯಬೇಕು. ತಮ್ಮ ಜೀವನ ವಿಧಾನ ಅವರಿಗೂ ಎಲ್ಲ ವಿಧಗಳಲ್ಲಿ ಮೇಲ್ಪಂಕ್ತಿಯಾಗುವಂತೆ ವರ್ತಿಸಬೇಕು.

ಕರ್ಮಯೋಗಿಗೆ ಸ್ವಭಾವಕ್ಕೆ ಅನುಗುಣವಾದ ಸ್ವಧರ್ಮವಿದೆ. ಅವನು ಅದನ್ನು ಎಂದಿಗೂ ಕಡೆಗಣಿಸಬಾರದು. ತನ್ನ ಧರ್ಮ ಎಷ್ಟೇ ಗುಣಹೀನವಾಗಿ ಕಂಡರೂ ಅದನ್ನು ತ್ಯಜಿಸಿ, ಅನ್ಯಧರ್ಮವನ್ನು ಆಚರಿಸತಕ್ಕದ್ದಲ್ಲ. ನಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮ ಎಷ್ಟೇ ಅಹಿತವಾಗಿದ್ದರೂ, ದುಃಖದಾಯಕವಾಗಿದ್ದರೂ ಅದು ತ್ಯಾಜ್ಯವಲ್ಲ. ಅರ್ಜುನನ ಸ್ವಭಾವ ಕ್ಷಾತ್ರ. ಅವನ ಸ್ವಧರ್ಮ ಧರ್ಮರಕ್ಷಣೆಗಾಗಿ ಯುದ್ಧ ಮಾಡುವುದು. ಅದು ಅವನ ಪಾಲಿಗೆ ಪ್ರಾಪ್ತಕರ್ಮ. ಅವನು ಅದರಿಂದ ತಪ್ಪಿಸಿಕೊಂಡು ಹೋಗುವಂತೆಯೇ ಇಲ್ಲ. ಅದು ಹೇಡಿತನ, ಷಂಡತನವೆನಿಸೀತು. ಆದುದರಿಂದ ತ್ಯಕ್ತ ಮನೋಭಾವದಿಂದ ಅವನು ಅದರಲ್ಲಿ ತೊಡಗಲೇಬೇಕು. ಯೋಗಮನೋಭಾವದಿಂದ, 'ವಿಗತಜ್ವರ'ನಾಗಿ ಮಾಡಲೇ ಬೇಕು.

ಈ ಯೋಗಸಿದ್ಧಿಗೆ ಇರುವ ದೊಡ್ಡ ಅಡಚಣೆ ಯಾವುದು? ತನಗೆ ಇಚ್ಛೆಯಿಲ್ಲದಿದ್ದರೂ, ಪುರುಷ ಪಾಪದಲ್ಲಿ ತೊಡಗುವಂತೆ ಯಾವುದೋ ಶಕ್ತಿ ಬಲವಂತನಾಗಿ

ದೂಡುತ್ತದಲ್ಲವೆ ? ಇದು ಏಕೆ ಎಂಬುದು ಅರ್ಜುನನ ಚಿಂತೆ. ಭಗವಂತ ಇದಕ್ಕೆ ಹೀಗೆ ಉತ್ತರವೀಯುತ್ತಾನೆ :

ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ |
ಮಹಾಶನೊ ಮಹಾಪಾಪ್ಮಾ ವಿಧ್ಯೇನಮಿಹ ವೈರಿಣಂ ||೩||೩೭||

(ರಜೋಗುಣದಿಂದ ಉದ್ಭವಿಸಿದ ಕಾಮಕ್ರೋಧಗಳೇ ಪ್ರೇರಕ, ಅವಕ್ಕೆ ತೃಪ್ತಿಯೇ ಇಲ್ಲ. ಅವು ಮಹಾಪಾಪಿಗಳು. ಅವೇ ನಿನ್ನ ಶತ್ರುಗಳು.)

ಕಾಮ ಎಲ್ಲಕ್ಕೂ ಮೂಲ. ಅದರಿಂದಲೇ ಕ್ರೋಧ ಜನಿಸುತ್ತದೆ. ಎರಡೂ ಜೊತೆಗೂಡಿದಾಗ ವ್ಯಕ್ತಿಯ ನಾಶ. ಜಗತ್ತಿನಲ್ಲಿರುವ ಎಲ್ಲವೂ ಇವುಗಳಿಂದ ಮುಸುಗಿವೆ. ಬೆಂಕಿಧೂಮದಿಂದ ಆವೃತವಾಗಿರುವಂತೆಯೂ, ಕನ್ನಡಿ ಧೂಳಿನಿಂದ ಮುಸುಗಿರುವಂತೆಯೂ ಪರೆಯಿಂದ ಗರ್ಭವು ಮುಸುಗಿರುವಂತೆಯೂ ಜ್ಞಾನಿಗಳ ಜ್ಞಾನವೂ ಇವುಗಳಿಂದ ಮುಸುಗಿರುತ್ತದೆ. ಕಾಮದಿಂದ ಕಾಮ ಬೆಳೆಯುತ್ತದೆ. ಬೆಂಕಿಗೆ ಬೆಂಕಿ ಸೇರಿದಂತೆ. ಕಾಮವನ್ನು ಕಾಮದಿಂದ ತೃಪ್ತಿಗೊಳಿಸಲಾಗುವುದಿಲ್ಲ. ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇವು ಅದರ ಅಧಿಷ್ಠಾನ. ಇಂದ್ರಿಯಗಳಲ್ಲಿ ಕಾಮ ತುಂಬಿದಾಗ, ಮನಸ್ಸು ಮಲಿನವಾಗುತ್ತದೆ. ಮನಸ್ಸು ಮಲಿನವಾದಾಗ ಬುದ್ಧಿ ಕೆಡುತ್ತದೆ. ಬುದ್ಧಿ ಕೆಟ್ಟ ಮೇಲೆ ಸರ್ವನಾಶವಾಗುತ್ತದೆ. ಆತ್ಮನಾಶವಾಗುತ್ತದೆ. ಆದುದರಿಂದ ನಾವು ಕೇವಲ ಇಂದ್ರಿಯವಶರಾಗಿ ಕೆಲಸ ಮಾಡಿದರೆ, ನಮ್ಮ ಬಂಧನಕ್ಕೆ ಪಾರವೇ ಇಲ್ಲ. ಮನಸ್ಸಿನಂತೆ ನಡೆದರೆ ಸ್ವಲ್ಪ ಉತ್ತಮ. ಬುದ್ಧಿಯಂತೆ ನಡೆದರೆ ಇನ್ನೂ ಉತ್ತಮ. ಆತ್ಮಬೋಧೆಯಂತೆ ನಡೆದರೆ ಸರ್ವಶ್ರೇಷ್ಠ. ಆತ್ಮಬೋಧೆಯಂತೆ ನಡೆಯುತ್ತ ಕಾಮರೂಪದ ಶತ್ರುವನ್ನು ಜಯಿಸುವುದೇ ನಿಜವಾದ ಯೋಗ; ಕರ್ಮಯೋಗ. ಕರ್ಮಯೋಗದ ಸೂಕ್ಷ್ಮ ಹೀಗಿದೆ ಎನ್ನಬಹುದು : ಸ್ವಾರ್ಥಫಲಾಪೇಕ್ಷೆಯಿಲ್ಲದೆ, ಸರ್ವ ಕರ್ಮಗಳನ್ನು ಹರಿಗೆ ಅರ್ಪಿಸಿ, ಎಲ್ಲವೂ ಈಶ್ವರೀ ಮಾಯಾಪ್ರಕೃತಿಯ ಆಟವೆಂದು ತಿಳಿದು ಲೋಕಸಂಗ್ರಹ ದೃಷ್ಟಿಯಿಂದ ಕರ್ಮಮಾಡುವುದೇ ಅದು.

ಶ್ರೀಮದಾನಂದ ತೀರ್ಥಾಚಾರ್ಯರು ನುಡಿದಿರುವ ಈ ಮಾತು ಕರ್ಮಯೋಗ ಎನ್ನಬಹುದು :

“ಕುರು ಕರ್ಮ ನಿಜಂ ನಿಯತಂ ಹರಿಪಾದ ವಿನಮ್ರಧಿಯಾ ಸತತಂ” (ಹರಿಪಾದದಲ್ಲಿ ಸತತ ನಮ್ರತೆಯಿಂದ ಶರಣನಾಗಿ ನಿಯತ ನಿಜಕರ್ಮವನ್ನು ಮಾಡು.)

ಅರ್ಜುನ ಈ ಮನೋಧರ್ಮದಿಂದಲೇ ಪ್ರಾಪ್ತಕರ್ಮವನ್ನು ಎಸಗಿ, ಕೃತಕೃತ್ಯನಾದ; ಭಗವಂತನ ಸಂಕಲ್ಪಸಾಧಕನಾದ ಸರ್ವಮಾನವರಿಗೂ, ಸಕಲ ಕಾಲಕ್ಕೂ ಅನ್ವಯಿಸುವ ಕರ್ಮಯೋಗದ ಆದರ್ಶದೃಷ್ಟಾಂತವೆನಿಸಿದ ಗೀತಾಬೋಧೆ, ಅಮರಬೋಧೆ ಎನಿಸಿತು

೫೬

ಹೀಗೆ ಪರಿಶರಣ ಭಾವದಿಂದ, ಅನನ್ಯಶರಣಭಾವದಿಂದ ಮಾಡಿದ ಸಕಲ ಕರ್ಮಗಳೂ ಬಂಧಕವಾಗಲಾರವು. ಅವು 'ಅಕರ್ಮ'ವಾಗುತ್ತವೆ. ಆ ಕರ್ಮಗಳೆಲ್ಲ 'ಕಾಮಸಂಕಲ್ಪವರ್ಜಿತ'ವಾಗಿರುವುದರಿಂದ ಅವು 'ಜ್ಞಾನಾಗ್ನಿದಗ್ಧ'ಕರ್ಮವಾಗಿರುತ್ತವೆ. ಅದನ್ನು ಮಾಡುವವರು 'ಪಂಡಿತರು' 'ಬುಧರು'–ಎಂದರೆ, ತಿಳಿದವರು. ಏಕೆಂದರೆ, ಕರ್ಮ ಯಾವುದು? ಅಕರ್ಮ ಯಾವುದು? ಎಂದು ತಿಳಿಯುವುದು ಕಷ್ಟ. ಮಹಾ ಬುದ್ಧಿವಂತರೂ ಮೋಹಪರವಶರಾಗುತ್ತಾರೆ; "ಕವಯೋಽಪ್ಯತ್ರ ಮೋಹಿತಾಃ". ಕರ್ಮದ ಗತಿ ಗೂಢವಾದುದು. ಕರ್ಮ, ನಿಷಿದ್ಧ ಕರ್ಮ, ಅಕರ್ಮ ಇವುಗಳ ಭೇಧವನ್ನು ಅರಿಯುವುದೇ ಯೋಗ. ಇದನ್ನು ಗಳಿಸಿಕೊಂಡವನು ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಕಾಣುತ್ತಾನೆ. ಅವನು ಲೋಕದಲ್ಲಿ 'ಜಾಣ'ನೆನಿಸುತ್ತಾನೆ; 'ಬುದ್ಧಿಮಾನ್'. ಇಂಥ ಬುದ್ಧಿಮಾನ್, ಪಂಡಿತ, ಬುಧ ಆದ ಕರ್ಮಯೋಗಿಯ ವರ್ಣನೆಯನ್ನು ಭಗವಂತ ಹೀಗೆ ನೀಡಿದ್ದಾನೆ: "ಅವನು ಕರ್ಮಫಲತ್ಯಾಗಿ, ಸದಾ ಸಂತುಷ್ಟ, ಯಾವ ಆಶ್ರಯದಲ್ಲಿಯೂ ಲಾಲಸೆಯಿಲ್ಲದವನು; ಅವನು ಆಶಾರಹಿತ, ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಂಡವನು, ಸರ್ವಸಂಗ ತ್ಯಜಿಸಿದವನು; ಸುಖದುಃಖಾದಿ ದ್ವಂದ್ವಗಳಿಂದ ಮುಕ್ತ, ಸಹಜವಾಗಿ ದೊರೆತುದರಲ್ಲಿ ಸಂತುಷ್ಟ, ದ್ವೇಷರಹಿತ, ಸಫಲತೆ-ನಿಷ್ಫಲತೆಗಳನ್ನು ಸಮಾನವೆಂದು ಭಾವಿಸಿದವನು; ಆಸಕ್ತಿರಹಿತ, ಅವನ ಚಿತ್ತ ಜ್ಞಾನಮಯ, ಅವನ ಕರ್ಮವೆಲ್ಲ ಯಜ್ಞಾರ್ಥ ಕರ್ಮ ಅಥವಾ ಹರಿಗೆ ಅರ್ಪಿತ ಕರ್ಮ." ಇಂಥವನು ಕರ್ಮ ಮಾಡುತ್ತಿದ್ದರೂ ದೋಷಿಯಾಗನು; ಕರ್ಮದ ಬಂಧನಕ್ಕೆ ಸಿಕ್ಕುವುದಿಲ್ಲ; ಅವನ ಕರ್ಮವೆಲ್ಲ ಲಯವಾಗುತ್ತದೆ. ಏಕೆ?—ಅವನ ಕರ್ಮವೆಲ್ಲ 'ಯಜ್ಞಾರ್ಥಕರ್ಮ.'

ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾಹುತಂ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮ ಸಮಾಧಿನಾ ॥೪।೨೪॥

(ಯಜ್ಞದಲ್ಲಿ ಅರ್ಪಣೆ ಬ್ರಹ್ಮ, ಹವಿಸ್ಸು, ಹವನ ಮಾಡುವ ವಸ್ತುವೂ ಬ್ರಹ್ಮವೇ. ಹೀಗೆ ಕರ್ಮದೊಂದಿಗೆ ಬ್ರಹ್ಮನ ಮಿಲನವನ್ನು ಸಾಧಿಸಿದವನು ಬ್ರಹ್ಮನನ್ನೇ ಹೊಂದುತ್ತಾನೆ.)

ಗಾಂಧೀಜಿಯ ಈ ಟಿಪ್ಪಣಿ ಮನನಾರ್ಹ: "ಅಭಿಮಾನಪೂರ್ವಕ ಮಾಡಿದ ಪ್ರತಿಯೊಂದು ಕರ್ಮವೂ ಎಷ್ಟೇ ಸಾತ್ವಿಕವಾಗಿದ್ದರೂ ಬಂಧನಕಾರಕ. ಅದನ್ನೇ ಈಶ್ವರಾರ್ಪಣ ಬುದ್ಧಿಯಿಂದ ಅಭಿಮಾನ ರಹಿತನಾಗಿ ಮಾಡಿದಾಗ ಅದು ಬಂಧನರಹಿತವಾದುದು. ಯಾರಲ್ಲಿ 'ನಾನು' ಎಂಬುದು ಅಳಿದು ಹೋಗಿದೆಯೋ ಅವನ ಶರೀರ

ಮಾತ್ರ ಕೆಲಸ ಮಾಡುತ್ತದೆ. ಕೈದಿ ಅಸಹಾಯನಾಗಿ, ಅನಿಚ್ಛೆಯಿಂದ ಉಳುತ್ತಿರುವಾಗ ಅವನ ಶರೀರ ಮಾತ್ರ ಕೆಲಸ ಮಾಡುತ್ತದೆ. ಯಾರು ಸ್ವೇಚ್ಛೆಯಿಂದ ಈಶ್ವರನ ಕೈದಿಯಾಗಿದ್ದಾನೋ ಅವನೂ ಅಷ್ಟೆ. ಅವನ ಸ್ವಯಂಶೂನ್ಯ. ಅವನಿಗೆ ಪ್ರೇರಕ ಈಶ್ವರ–ಗುರಿಯೂ ಈಶ್ವರನೇ."

ಕೊರಾನ್ ಇದೇ ಅಭಿಪ್ರಾಯವನ್ನು ತಿಳಿಸುತ್ತದೆ ಎನ್ನಬಹುದು : 'ಯಾರು ಸತ್ಕಾರ್ಯವನ್ನು ಮಾಡುವಾಗ ತನ್ನ ಸಂಕಲ್ಪವನ್ನು ಅಲ್ಲಾನಿಗೆ ಅರ್ಪಿಸುವನೋ ಅವನು ನಿಜವಾಗಿಯೂ ಅಲ್ಲಾನನ್ನು ಅರಿಯುವನು. "(೩೧.೨೨)

ಭಗವಂತ ಎರಡನೆಯ ಅಧ್ಯಾಯದ ಕೊನೆಗೆ ಸಂಯಮಭರಿತನಾದ ಸ್ಥಿತಪ್ರಜ್ಞನ ವರ್ಣನೆಯನ್ನು ಕೊಟ್ಟು ಅವನು ಕರ್ಮಯೋಗಿಯೂ ಆಗಬೇಕು ಎಂಬ ಅಂಶವನ್ನು ಮುಂದೆ ಸ್ಪಷ್ಟ ಪಡಿಸುತ್ತಾನೆ. ಸ್ವಧರ್ಮಾಚರಣೆಯೇ ಗೀತೆಯ ಕರ್ಮ. ಕಾಮ ಕ್ರೋಧಗಳನ್ನು ಗೆದ್ದವನು ಶಾಂತವೂ, ನಿರ್ಮಲವೂ ಆದ ಮನಸ್ಸಿನಿಂದ ನಿಷ್ಕಾಮಿಯಾಗುತ್ತಾನೆ. ಚಿತ್ತಕ್ಷೋಭೆಯನ್ನು ಕಳೆಮುಕೊಂಡು, ಧ್ರುವತಾರೆಯಂತೆ ಶಾಂತ, ಸ್ಥಿರ, ತೇಜೋಭರಿತನಾಗುತ್ತಾನೆ. ಅವನ ಸ್ಥಿತಿಯೂ ಬ್ರಾಹ್ಮೀಸ್ಥಿತಿ ಹೊಂದಿದ ಸ್ಥಿತಪ್ರಜ್ಞನ ಮತ್ತು ಭಕ್ತನ, ಸ್ಥಿತಿಯೂ ಒಂದೇ. ಅವನ ಕರ್ಮದಲ್ಲಿ ಜ್ಞಾನಭಕ್ತಿಗಳೆರಡೂ ಸಮಾವೇಶವಾಗುತ್ತವೆ-

ಗೀತೆಯ ಕರ್ಮಯೋಗಿ 'ಕರ್ತಾರಂ, ಅಕರ್ತಾರಂ.' ಭಗವಂತನೇ ಇದಕ್ಕೆ ನಿದರ್ಶನ. ಕ್ಷರಾಕ್ಷರಗಳಿಂದ ದೂರನಾಗಿ ಕರ್ಮಮಾಡುವವನೇ 'ಪುರುಷೋತ್ತಮ.' ಆತ್ಮ ಸಾಕ್ಷಾತ್ಕಾರವೇ ಕರ್ಮದ ಉದ್ದೇಶ. ಸ್ವಧರ್ಮ, ಸ್ವಭಾವ ಎರಡೂ ಹೊಂದಿಕೊಳ್ಳಬೇಕು. ಆಗಲೇ ಕರ್ಮ ಮುಕ್ತಕರ್ಮವಾದೀತು. ಸುಲಭವಾದೀತು, ಸಹಜವಾದೀತು. ಈ ಜಗತ್ತಿನ ಬದುಕು ಅಲೌಕಿಕ ಜ್ಯೋತಿಯನ್ನು ಸದಾ ಜ್ವಲಿಸುವಂತೆ ಮಾಡೀತು.

ಭಗವಂತನ ಕೈಗೊಂಬೆಗಳಾಗಿ, ಅವನ ಸಂಕಲ್ಪಸಾಧಕರಾಗಿ, ಪರಮಜ್ಞಾನ ಪಡೆಯಲು ಸಾಧ್ಯವಾದೀತು ಮಾನವರಿಗೆ; ಆಗ ಸಕಲಕರ್ಮ ಸತ್ಯಜ್ಞಾನದಲ್ಲಿ ಪರಿಸಮಾಪ್ತಿ ಹೊಂದುತ್ತದೆ.

"ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ||೪ ೩೩||

ಹೀಗೆ ಆದವನು ಯೋಗಿ; ಗೀತೆಯ ಕರ್ಮಯೋಗಿ. ಅವನು ತಪಸ್ವಿಗಿಂತಲೂ ಶ್ರೇಷ್ಠ, ಜ್ಞಾನಿಗಿಂತಲೂ ಶ್ರೇಷ್ಠ. ಹಾಗೆಯೇ ಕರ್ಮಿಗಳಿಗಿಂತಲೂ ಅಧಿಕ ಶ್ರೇಷ್ಠ.

"ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥೬॥೪೬॥

ಇಂಥ ಕರ್ಮಯೋಗಿಗಳಲ್ಲಿಯೂ ಸರ್ವಶ್ರೇಷ್ಠ ಯಾರು? ಭಗವಂತನ ಉತ್ತರ ಇದು :

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥೬॥೪೭॥

( ನನ್ನಲ್ಲಿ ಮನಸ್ಸನ್ನು ಲೀನಮಾಡಿ, ಶ್ರದ್ಧೆಯಿಂದ ನನ್ನನ್ನು ಭಜಿಸುವವನು ಯೋಗಿಗಳಲ್ಲಿ ಸರ್ವಶ್ರೇಷ್ಠನೆಂದು ನಾನು ತಿಳಿಯುತ್ತೇನೆ.)

# ಭಗವದ್ಗೀತೆಯಲ್ಲಿ ಉಪಮೆಗಳು

**ಜಿ. ಎಸ್. ಶಿವರುದ್ರಪ್ಪ**

ಮಹಾಭಾರತದ ಒಂದು ಅನಿವಾರ್ಯ ಅಂಗವಾಗಿರುವ ಭಗವದ್ಗೀತೆ, ಭಾರತೀಯರಿಗೆ ಪ್ರಥಮತಹ ಒಂದು ಪವಿತ್ರ ಗ್ರಂಥ. ಅದರ ವಸ್ತು ಮುಖ್ಯವಾಗಿ ಮನುಷ್ಯನ ಮನಸ್ಸಿನ ಸಂದೇಹಗಳಿಗೆ ಉತ್ತರ ನೀಡುವ, ತನ್ಮೂಲಕ ಮಾರ್ಗದರ್ಶನ ಮಾಡುವ ಉದ್ದೇಶದ್ದಾಗಿದೆ. ಏಕೆಂದರೆ ಭಗವದ್ಗೀತೆ ನಿಂತಿರುವುದೇ, ಒಂದು ಸಂದಿಗ್ಧ ಪರಿಸ್ಥಿತಿಗೆ ಸಿಕ್ಕಿ ಸ್ವಧರ್ಮವನ್ನು ಮರೆತು ಸಂದೇಹಗ್ರಸ್ಥವಾದ ವ್ಯಕ್ತಿಯೊಬ್ಬನಿಗೆ, ಮಾರ್ಗದರ್ಶಕ ಸೂತ್ರಧಾರನೊಬ್ಬನು ಉಪದೇಶಮಾಡಿ, ಸಂಶಯರಹಿತವಾದ ಕರ್ತವ್ಯಪ್ರಜ್ಞೆಯಲ್ಲಿ ನೆಲೆಗೊಳಿಸುವಂಥ ಸಂದರ್ಭದ ವೇದಿಕೆಯಮೇಲೆ. ಹೀಗಾಗಿ ಇದು ತತ್ವಬೋಧೆ. ಎರಡನೆಯದಾಗಿ ಇದು ಕೇವಲ ತತ್ವಬೋಧೆಯಾಗದೆ, ಮಹಾಕಾವ್ಯವೊಂದರ ಸಂದರ್ಭದಲ್ಲಿ ಬಂದಿರುವುದಲ್ಲದೆ, ಬಹು ಸೊಗಸಾದ ನಾಟ್ಯ ಪ್ರತಿಭೆಗೆ ಸಾಕ್ಷಿಯಾಗುವ ಸನ್ನಿವೇಶವೂ ಆಗಿರುವ ಕಾರಣ, ಇಲ್ಲಿನ ತತ್ವಬೋಧೆ ಕಾವ್ಯದ ಚೌಕಟ್ಟಿನೊಳಗೇ ಬಂದಿದೆ. ಈ ದೃಷ್ಟಿಯಿಂದ ಭಗವದ್ಗೀತೆಯ ಆರಂಭ, ಅಲ್ಲಿ ಕಂಡುಬರುವ ಆಂತರಿಕ ತೊಳಲಾಟ, ಮುಖ್ಯಪಾತ್ರವಾದ ಶ್ರೀಕೃಷ್ಣನ ಗಂಭೀರವಾದ ವಚೋಲಹರಿ, ಆ ಬೋಧೆಯಲ್ಲಿರುವ ಕಾವ್ಯಸೌಂದರ್ಯ, ಕಡೆಗೆ ವಿಶ್ವರೂಪ ದರ್ಶನದಂತಹ ಅದ್ಭುತಪ್ರಸಂಗ—ಇವುಗಳಿಂದಾಗಿ ಇಡೀ ಗೀತೋಪ ದೇಶವೇ ಒಂದು ರಮ್ಯಾದ್ಭುತ ನಾಟಕದ ವಿಶಿಷ್ಟತೆಯನ್ನು ಪಡೆದಿದೆ.

ಭಗವದ್ಗೀತೆಯ ಶ್ಲೋಕ ಶ್ಲೋಕಗಳಲ್ಲಿ ಪ್ರವಹಿಸುವ ಶ್ರೀ ಕೃಷ್ಣನ ಭರವಸೆಯ, ವಿವೇಕದ, ತತ್ವಜ್ಞಾನದ ಮಾತುಗಳಲ್ಲಿ ತತ್ವದ ಘನತೆಯೂ, ಕಾವ್ಯಸೌಂದರ್ಯವೂ ಮೇಳವಿಸಿವೆ. ಅದರಲ್ಲೂ ಉಕ್ತಿ, ನಿಜವಾದ ಪರಿಣಾಮವನ್ನು ಮಾಡುವುದು, ಅದು 'ಅಲಂಕಾರ'ವಾದಾಗ ಅಥವಾ ಕೇವಲ ಹೇಳಿಕೆಯಾಗುವ ನಿಲುವನ್ನು ವರ್ಜಿಸಿ ಉಪಮಾ-ದೃಷ್ಟಾಂತಾದಿಗಳಲ್ಲಿ ಹರಳುಗೊಳ್ಳುವಾಗ, ಶಬ್ದ ಚಿತ್ರಗಳಲ್ಲಿ ಅಮೂರ್ತವಾದ ಭಾವಾನುಭವಗಳನ್ನು ಮೂರ್ತೀಕರಿಸುವಾಗ. ಕಾವ್ಯಮೀಮಾಂಸೆಯ ಪರಿಭಾಷೆಯಲ್ಲಿ

ಹೇಳುವುದಾದರೆ, ಅನುಭವ ಸಾಲಂಕೃತಾಭಿವ್ಯಕ್ತಿಯಲ್ಲಿ ಮೈಗೊಂಡಾಗ ಅಲ್ಲಿನ ಉಕ್ತಿ, ಲೋಕ-ಶಾಸ್ತ್ರಾದಿಗಳ ಉಕ್ತಿಯಿಂದ ಭಿನ್ನವಾದ ಒಂದು ಪರಿಣಾಮರಮಣೀಯತೆಯನ್ನು ಸಾಧಿಸಿಕೊಳ್ಳುತ್ತದೆ. ಭಗವದ್ಗೀತೆಯಲ್ಲಿ ಇಂಥ ಪರಿಣಾಮರಮಣೀಯಕವಾದ ಉಕ್ತಿವೈಚಿತ್ರ್ಯಗಳು ಅಥವಾ ಅಲಂಕಾರಗಳು ತಕ್ಕಷ್ಟಿವೆ ಎಂಬುದೆ ಇಲ್ಲಿ ಗಮನಾರ್ಹವಾದ ಸಂಗತಿಯಾಗಿದೆ.

ಎಲ್ಲ 'ಅಲಂಕಾರ'ಗಳ ನಿರ್ಮಾಣವೂ ಉಪಮಾವಿಧಾನದಿಂದಲೇ. ಉಪಮೆ ಎಂದರೆ ಒಂದನ್ನು ಮತ್ತೊಂದರೊಡನೆ ಹೋಲಿಸುವುದು ಅಥವಾ ಆ ಎರಡರ ನಡುವಣ ಸಾದೃಶ್ಯ ಸಂಪತ್ತನ್ನು ಗುರುತಿಸಿ ತೋರುವುದು. ಇದರಲ್ಲಿ ಒಂದು ಪ್ರಕೃತವಾದದ್ದು, ಮತ್ತು ಆ ಇನ್ನೊಂದು ಹೋಲಿಕೆಗೆ ಒಳಗಾಗತಕ್ಕದ್ದು, ಹೇಳುವವನ ಅನುಭವದ ನೆನಪಿನ ಉಗ್ರಾಣದಿಂದ ತಂದದ್ದು. ಒಂದರ ಸೊಗಸನ್ನು ಮತ್ತೊಂದರ ಸೊಗಸಿನ ಸಮಾವೇಶದಿಂದ ಪುಷ್ಟಿಗೊಳಿಸತಕ್ಕ ಪ್ರಯತ್ನ, ಅಥವಾ ಒಂದು ವಿಷಯದ ಸ್ಪಷ್ಟೀಕರಣಕ್ಕೆ ಮತ್ತೊಂದನ್ನು ತಂದು ಹೊಂದಿಸಿ ಅರ್ಥಸಮೃದ್ಧಿಯನ್ನೊ, ಭಾವ ಸಮೃದ್ಧಿಯನ್ನೊ, ಸೌಂದರ್ಯ ಸಮೃದ್ಧಿಯನ್ನೊ ಸಾಧಿಸುವ ಪ್ರಯತ್ನ—ಈ ಉಪಮಾನಿರ್ಮಿತಿಯ ಜೀವಾಳವಾಗಿದೆ. ನಮ್ಮ ದೈನಂದಿನ ವ್ಯವಹಾರದಲ್ಲಿಯೂ ಈ ಕಾರ್ಯ ತೀರಾ ಸಹಜವೆಂಬಂತೆ ನಡೆಯುತ್ತದೆ. ಕಾವ್ಯಾಭಿವ್ಯಕ್ತಿಯಲ್ಲಂತೂ, ಅಲ್ಲಿನ ಅನುಭವದ ತೀವ್ರತೆಯಿಂದಾಗಿ ಇವುಗಳದೇ ಸುಗ್ಗಿ. ಈ ಉಪಮಾಕೌಶಲವೇ ಕವಿಯ ಸೌಂದರ್ಯಾನುಭವಕ್ಕೂ ಮತ್ತು ಪ್ರತಿಭಾಶಕ್ತಿಗೂ ದ್ಯೋತಕ.

ಮೂಲತಹ ಯೋಗವಿಜ್ಞಾನವೆಂದು ಪರಿಗಣಿತವಾಗಿರುವ ಭಗವದ್ಗೀತೆಯಲ್ಲಿ ಅಲ್ಲಲ್ಲಿ ಗುರುತಿಸಬಹುದಾದ ಮತ್ತು ರಸಸ್ಯಂದಿಯಾದ ಉಪಮಾ-ರೂಪಕಾದಿಗಳು ಸಾಕಷ್ಟಿವೆ. ಗೀತೆ ವೇದೋಪನಿಷತ್ತುಗಳ ಸಾರವೂ ಆದುದರಿಂದ, ಅಲ್ಲಿಂದ ಹರಿದು ಬಂದು ನಿಂತಿರುವ ಉಪಮೆಗಳೂ ಕೆಲವಿವೆ; ಅಲ್ಲದೆ ಮುಂದಿನ ವೇದಾಂತ ಹಾಗೂ ಸಾಹಿತ್ಯಿಕ ಅಭಿವ್ಯಕ್ತಿಗಳ ಮೇಲೆ ಪ್ರಭಾವ ಬೀರಿದ 'ಅಲಂಕಾರ'ಗಳೂ ಇದರಲ್ಲಿವೆ.

ಭಗವದ್ಗೀತೆಯ ಈ ಕಿರುಗಾತ್ರದಲ್ಲಿ ಸುಮಾರು ಇಪ್ಪತ್ತೈದು ಉಪಮಾಚಿತ್ರಗಳೂ, ಹತ್ತಕ್ಕೂ ಮಿಗಿಲಾದ ರೂಪಕಗಳೂ, ನೂರಾರು ಸೂಕ್ತಿಗಳೂ ದೊರೆಯುತ್ತವೆ. ಸಾಮಾನ್ಯವಾಗಿ ಒಂದೊಂದು ಶ್ಲೋಕದಲ್ಲಿ ಒಂದೊಂದು ಪ್ರೋಕ್ತಿರೂಪವೆ ಇದೆ. ಆದರೆ ಒಂದೇ ಒಂದು ಶ್ಲೋಕದಲ್ಲಿ ಮಾತ್ರ ಮೂರು ಹೋಲಿಕೆಗಳು ಕಾಣಿಸಿಕೊಂಡಿವೆ.[1] ಇನ್ನೊಂದೆಡೆ ಒಂದೇ ಕ್ರಿಯೆ ಎರಡು ಬೇರೆ ಬೇರೆಯ ಉಪಮಾಚಿತ್ರ

[1] ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ (3–38)

ಗಳಲ್ಲಿ ಮುಂದುವರಿದಿದೆ.[1] ಆದರೆ ಹದಿನೈದನೆಯ ಅಧ್ಯಾಯದ ಮೊದಲಲ್ಲಿ ಬರುವ ಅಶ್ವತ್ಥ ವೃಕ್ಷದ ವರ್ಣನೆ ಮಾತ್ರ ನಾಲ್ಕು ಶ್ಲೋಕಗಳಲ್ಲಿ ಪ್ರಸರಿಸಿಕೊಂಡಿದೆ. ಇನಿಷ್ಟನ್ನು ಬಿಟ್ಟರೆ, ಹನ್ನೊಂದನೆ ಅಧ್ಯಾಯದ ವಿಶ್ವರೂಪ ದರ್ಶನದ ಸಂದರ್ಭವಂತೂ ಹಲವು ಶ್ಲೋಕಗಳ ಮೂಲಕ ಚಿತ್ರಿತವಾಗಿರುವ ಭವ್ಯಪ್ರತಿಮೆಯಾಗಿದೆ.

ಗೀತೆಯಲ್ಲಿ ಬರುವ ಉಪಮೆಗಳು ಮುಖ್ಯವಾಗಿ ಮನುಷ್ಯನ ಮನಸ್ಸಿನ ಸ್ವರೂಪದ ವರ್ಣನೆಯನ್ನು ಕುರಿತವು. ಭಗವದ್ಗೀತೆಯ ಮುಖ್ಯ ಗಮನ, ಮನುಷ್ಯನಾದವನು ತನ್ನ ಚಲಮನಸ್ಸಿನ ಚಾಂಚಲ್ಯವನ್ನು ನೀಗಿಕೊಂಡು ಸ್ಥಿತಪ್ರಜ್ಞನಾಗುವುದು ಅಥವಾ ಯೋಗಿಯಾಗುವುದು ಹೇಗೆ ಎಂಬುದರ ಕಡೆಗೆ. ಗೀತೆಯ ಆರಂಭದಲ್ಲಿ ನಾವು ಕಾಣುವುದು ಕಪಿಧ್ವಜನಾದ ಅರ್ಜುನನ ಮನಸ್ಸು ಸ್ವಜನ ವ್ಯಾಮೋಹದಿಂದ ಹೇಗೆ ಚಾಂಚಲ್ಯಕ್ಕೆ ಒಳಗಾಗಿ ಕರ್ತವ್ಯ ಬುದ್ಧಿಯಿಂದ ಚ್ಯುತವಾಯಿತು ಎನ್ನುವುದನ್ನು. ಕೃಷ್ಣನು ಬೋಧಿಸುವುದು–ಈ ದುರ್ನಿಗ್ರಹವಾದ, ಚಲಮನಸ್ಸನ್ನು ನಿಗ್ರಹಿಸಿ, ಒಂದು ನಿರ್ವಿಕಾರವಾದ ಪ್ರಜ್ಞೆಯಲ್ಲಿ ಪ್ರತಿಷ್ಠಿಸುವುದು ಹೇಗೆ ಎನ್ನುವುದನ್ನು. ಯೋಗವೆಂದರೆ ಈ ಚಲಮನಸ್ಸಿನ ಚಲನೆಯನ್ನು ವಿವೇಕದಿಂದ ಪಳಗಿಸಿ ಸ್ತಿಮಿತಕ್ಕೆ ತರುವುದು. ಹೀಗೆ ಇಡೀ ಗೀತೆಯೆ ಮನುಷ್ಯನ ಮನಸ್ಸಿನ ಸ್ವರೂಪದ ವಿವರಣೆಯೂ ಮತ್ತು ಅದನ್ನು ಪಳಗಿಸುವುದು ಹೇಗೆ ಎಂಬುದರ ನಿರ್ದೇಶನವೂ ಆಗಿದೆ. ಆದಕಾರಣ ಮನಸ್ಸು ಎಂಬಂಥ ಅಮೂರ್ತವಾದ ವಿಷಯವನ್ನು ಮೂರ್ತಗೊಳಿಸಿ ಸ್ಪಷ್ಟಪಡಿಸುವ ಅಭಿವ್ಯಕ್ತಿಯಲ್ಲಿ ಈ ಉಪಮೆಗಳಿಂದಾಗಿರುವ ಪ್ರಯೋಜನ ವಿಶೇಷವಾದದ್ದು.

ಈ ಉಪಮಾ ಸಾಮಗ್ರಿ ಗೀತೆಯಲ್ಲಿ, ನೀರು, ಗಾಳಿ, ಆಕಾಶ, ಬೆಂಕಿ, ಸೂರ್ಯ, ಮರ, ಯಂತ್ರ, ಕನ್ನಡಿ, ದೋಣಿ, ತಾವರೆಯ ಎಲೆ—ಇತ್ಯಾದಿಗಳಿಂದ ಎತ್ತಿಕೊಂಡದ್ದಾಗಿದೆ.

ಮನಸ್ಸಿನ ಸ್ವರೂಪವನ್ನು ಕುರಿತು ಒಂದೆಡೆ ಕೃಷ್ಣನು ಹೇಳುತ್ತಾನೆ "ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ" (6-35) ಎಂದು. ಮನಸ್ಸು

---

[1] ಯಥಾ ನದೀನಾಂ ಬಹವೋಽಂಬು ವೇಗಾಃ
ಸಮುದ್ರಮೇವಾಭಿ ಮುಖಾದ್ರವಂತಿ........................

...........................................................................
ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧ ವೇಗಾಃ
...................................... (11-28, 29).

ಎಂದರೆ ಸದಾ ಚಲಿಸತಕ್ಕದ್ದು ಮತ್ತು ನಿಗ್ರಹಿಸಲು ಅಸಾಧ್ಯವಾದದ್ದು ಎಂಬುದು ವಿವರಣೆ. ಇದನ್ನು ಸ್ಪಷ್ಟಪಡಿಸಲು ಗೀತೆಯಲ್ಲಿ ಬರುವ ಹೋಲಿಕೆ ಗಾಳಿಯದು. ಮನಸ್ಸು ತನಗೆ ತಾನೆ ಅಮೂರ್ತ, ಆದರೆ ಕ್ರಿಯೆಗಳಲ್ಲಿ ಮಾತ್ರ ಗೋಚರವಾಗುತ್ತದೆ. ಹಾಗೆಯೇ ಗಾಳಿಯೂ. ಆದಕಾರಣ ಮನಸ್ಸು 'ವಾಯೋರಿವ ಸುದುಷ್ಕರಮ್' (6–34), ಗಾಳಿಯ ಹಾಗೆ ಹಿಡಿದು ನಿಲ್ಲಿಸಲಸಾಧ್ಯವಾದದ್ದು. ಇದೇ ಗಾಳಿಯನ್ನು ಬೇರೊಂದೆಡೆ ಜೀವನಿಗೆ ಹೋಲಿಸಲಾಗಿದೆ. ಜೀವನು ಶರೀರದಿಂದ ಶರೀರಕ್ಕೆ ಹೋಗುವಾಗ ಇಂದ್ರಿಯಗಳನ್ನು ಸೆಳೆದೊಯ್ಯುವ ಕ್ರಿಯೆಯನ್ನು, ಗಾಳಿಯು ಗಂಧವನ್ನು ಸೆಳೆದೊಯ್ಯುವಂತೆ (ಸಂಯಾತಿ ವಾಯುರ್ಗಂಧಾನಿವಾಶಯಾತ್ : 15–8) ಎಂದು ವರ್ಣಿಸಲಾಗಿದೆ. ಇನ್ನೊಂದೆಡೆ ಗಾಳಿಯನ್ನು ಜೀವಗಳಿಗೆ ಹೋಲಿಸಲಾಗಿದೆ. 'ಎಲ್ಲೆಲ್ಲೂ ಸಂಚರಿಸುವ ವಾಯುವು ಯಾವಾಗಲೂ ಆಕಾಶದಲ್ಲಿ ಸ್ಥಿತವಾಗಿರುವಂತೆ, ಸರ್ವಭೂತಗಳೂ ನನ್ನಲ್ಲೇ ಇರುವುವು' (9–6) ಎನ್ನುತ್ತಾನೆ ಶ್ರೀ ಕೃಷ್ಣ. ಇಲ್ಲಿ ಜೀವಗಳನ್ನು ಗಾಳಿಗೆ ಹೋಲಿಸಿದ್ದು ಮಾತ್ರವಲ್ಲದೆ ದೇವನನ್ನು ಆಕಾಶಕ್ಕೆ ಹೋಲಿಸಿರುವುದನ್ನು ಗುರುತಿಸಬಹುದು. ಮತ್ತೆ ಬೇರೊಂದೆಡೆ "ಸರ್ವವ್ಯಾಪಿಯಾದ ಆಕಾಶವು ಸೂಕ್ಷ್ಮವಾಗಿರುವ ಕಾರಣ ಹೇಗೆ ಲಿಪ್ತವಾಗುವುದಿಲ್ಲವೋ ಹಾಗೆಯೆ ಸರ್ವಭೂತಾಂತರಂಗದಲ್ಲಿ ಇರುವ ಆತ್ಮನು ಲಿಪ್ತನಾಗುವುದಿಲ್ಲ" (13-32) ಎಂಬ ಮಾತು ಬರುತ್ತದೆ. ಆಕಾಶದಲ್ಲಿ ಮೋಡಗಳು ಬರುತ್ತವೆ, ಹೋಗುತ್ತವೆ; ಬೆಳಕು ಬಂದು ಲಾಸ್ಯವಾಡಿ ಹೋಗುತ್ತದೆ. ಆದರೂ ಆಕಾಶ ಅಲಿಪ್ತವಾಗಿ ಉಳಿಯುತ್ತದೆ. ಹೀಗೆ 'ಆಕಾಶ' ಆತ್ಮದ ಹಾಗೂ ಅದರ ಗುಣವಾದ ಅಲಿಪ್ತತೆಗೆ ಸಂಕೇತವಾಗಿ ಬಂದು ಉಪಮೆಯಲ್ಲಿ ವಿಶೇಷಾರ್ಥ ರಮ್ಯತೆಯನ್ನು ತೆರೆಯುತ್ತದೆ.

ನೀರಿಗೆ ಸಂಬಂಧಿಸಿದ ಕೆಲವು ಉಪಮೆಗಳನ್ನು ಗಮನಿಸಬಹುದು: ಕೊಳ, ನದಿ ಮತ್ತು ಸಮುದ್ರ ಈ ಮೂರರ ಪ್ರಸ್ತಾಪವೂ ನೀರಿಗೆ ಸಂಬಂಧಿಸಿದ ಉಪಮೆಗಳಲ್ಲಿ ಬರುತ್ತದೆ. ನೀರು ತುಂಬಿಕೊಂಡ ಜಲಾಶಯಗಳನ್ನು ವೇದಗಳಿಗೆ ಹೋಲಿಸಲಾಗಿದೆ; ನೀರಡಿಸಿದವನಿಗೆ ಹೇಗೆ ಯಾವ ಜಲಾಶಯದಿಂದಲಾದರೂ ತೃಪ್ತಿ ದೊರೆಯುವಂತೆ, ವೈದಿಕನಾದ ಮುಮುಕ್ಷುವು ವೇದಗಳಿಂದ ಮೋಕ್ಷಸಾಧಕವಾದ ಸಾಧನವನ್ನು ಗ್ರಹಿಸುತ್ತಾನೆ (2-46) ಎಂಬ ವಿವರಣೆ ಇದೆ. ವಿಶ್ವರೂಪದ ಸಂದರ್ಭದಲ್ಲಿ, ಸಮಸ್ತ ನರಲೋಕ ವೀರರು ವಿಶ್ವಪುರುಷನ ತೆರೆದ ಬಾಯನ್ನು ಪ್ರವೇಶಿಸುವ ಚಿತ್ರವನ್ನು ಕೊಡುವಲ್ಲಿ "ವಿಪುಲವಾದ ಜಲರಾಶಿಯುಳ್ಳ ನದಿಗಳು ವೇಗವಾಗಿ ಸಮುದ್ರವನ್ನು ಪ್ರವೇಶಿಸುವಂತೆ" (11-28) ಎಂಬ ವರ್ಣನೆ ಇದೆ. ಈ ವರ್ಣನೆಯಲ್ಲಿನ ಚಿತ್ರ "ಯಥಾ ನದೀನಾಂ ಬಹವೋಽಂಬುವೇಗಾಃ। ಸಮುದ್ರಮೇವಾಭಿಮುಖಾದ್ರವಂತಿ" ಎಂಬ ಮಾತಿನ ರೀತಿಯಿಂದ ಅತ್ಯಂತ ಶಕ್ತವಾದ, ಅರ್ಥಪೂರ್ಣವಾದ ಉಪಮೆ ಮಾತ್ರವಾಗದೆ, ಕಾಲನ ಕರಾಳ ದಂಷ್ಟ್ರದೊಳಕ್ಕೆ ಸದಾ ಧಾವಿಸುವ ಲೋಕ ಜೀವನದ

ನಿತ್ಯ ಪ್ರತಿಮೆಯೂ ಆಗಿದೆ. ಈ ಉಪಮೆಯು ಮುಖ್ಯ ಗಮನ ಸಮುದ್ರಾಭಿಮುಖ ವಾದ ನದಿಗಳ ಚಲನೆಯನ್ನು ಕುರಿತದ್ದಾದರೆ, ಇನ್ನೊಂದರಲ್ಲಿ 'ಸದಾ ತುಂಬಿರುವ, ಎಷ್ಟು ನೀರು ಬಂದರೂ ತುಳುಕದೆ ಅಚಲವಾಗಿರುವ ಸಮುದ್ರವನ್ನು (ಆಪೂರ್ಯ-ಮಾಣಂ ಅಚಲ ಪ್ರತಿಷ್ಠಂ ಸಮುದ್ರಂ) ನೀರುಗಳು ಪ್ರವೇಶಿಸುವಹಾಗೆ, ಸಮಸ್ತ ಕಾಮಗಳೂ ಯಾವನನ್ನು ಪ್ರವೇಶಿಸುವುವೋ ಅವನು ಶಾಂತಿಯನ್ನು ಹೊಂದುತ್ತಾನೆ (2-70) ಎಂಬಲ್ಲಿ, ಸ್ಥಿತಪ್ರಜ್ಞನ ಮನಃಸ್ಥಿತಿಯ ಹೋಲಿಕೆಗೆ ಸಮುದ್ರದ ಚಿತ್ರವನ್ನು ಕೊಡಲಾಗಿದೆ.

ನೀರಿಗೆ ಸಂಬಂಧಿಸಿದ ಚಿರಪರಿಚಿತವಾದ ವಸ್ತು ದೋಣಿ. ದೋಣಿಯ ಉಪಮೆ ಎರಡು ಕಡೆ ಬಂದಿದೆ. ಒಂದೆಡೆ ದೋಣಿ ಪ್ರಜ್ಞೆಗೆ ಸಂಕೇತವಾದರೆ, ಇನ್ನೊಂದೆಡೆ ಜ್ಞಾನಕ್ಕೆ ಸಂಕೇತವಾಗಿ ಬಂದಿದೆ. ಚಲಿಸುತ್ತಿರುವ ಇಂದ್ರಿಯಗಳನ್ನು ಯಾರ ಮನಸ್ಸು ಅನುಸರಿಸುತ್ತದೆಯೋ, ಅಂಥವನ ಪ್ರಜ್ಞೆ ಇಂದ್ರಿಯಾಧೀನವಾಗಿ, ಗಾಳಿಯ ಹೊಡೆತಕ್ಕೆ ಸಿಕ್ಕ ದೋಣಿಯಂತೆ ('ವಾಯುರ್ನಾವಮಿವಾಂಭಸಿ') ಎತ್ತೆತ್ತಲೋ ಹೋಗುತ್ತದೆ (2–67) ಎಂದು ವರ್ಣಿತವಾಗಿದೆ. ಇನ್ನೊಂದೆಡೆ 'ಸರ್ವಂ ಜ್ಞಾನ ಪ್ಲವೇನೈವ ವೃಜಿನಂ ಸಂತರಿಷ್ಯತಿ (4-36)—ಸಮಸ್ತ ಪಾಪ ಗಳನ್ನೂ ಜ್ಞಾನವೆಂಬ ದೋಣಿಯಿಂದ ದಾಟುತ್ತೀಯ—ಎಂಬಲ್ಲಿ ದೋಣಿಯನ್ನು ಜ್ಞಾನಕ್ಕೆ ಹೋಲಿಸಲಾಗಿದೆ. ನೀರಿಗೆ ಸಂಬಂಧಿಸಿದಂತೆ ಬರುವ ಇನ್ನೊಂದು ಮುದ್ದಾದ ಉಪಮೆ ತಾವರೆ ಎಲೆಯ ಮೇಲಿನ ಹನಿಯನ್ನು ಕುರಿತದ್ದು. 'ಪದ್ಮಪತ್ರ ಮಿವಾಂಭಸಾ' ಎಂಬುದು, ಯಾವನು ಸಮಸ್ತ ಕರ್ಮಗಳನ್ನು ಈಶ್ವರನಿಗೆ ಸಮರ್ಪಿಸಿ, ಅನಾಸಕ್ತಿಯಿಂದ ಬದುಕುತ್ತಾನೆಯೋ ಅಂಥವನ ಮನಃಸ್ಥಿತಿಯ ಪ್ರತೀಕವಾಗಿದೆ. ಪದ್ಮಪತ್ರದ ಮೇಲಿನ ಜಲಬಿಂದು ಅಂಟಿಯೂ ಅಂಟದಂತೆ ಮಿನುಗುವ ಹಾಗೆ (5–10) ಸಂಸಾರದಲ್ಲಿದ್ದರೂ ಯೋಗಿಯಾದವನು ಅಲಿಪ್ತನಾಗಿರುತ್ತಾನೆ. ಈ ಒಂದು ಉಪಮೆ ತನ್ನ ಸೊಗಸಿನಿಂದ ಮುಂದಿನ ವೇದಾಂತ ಸಾಹಿತ್ಯದಲ್ಲಿ ಮತ್ತು ಕಾವ್ಯಾಭಿವ್ಯಕ್ತಿಗಳಲ್ಲಿ ಅನುಕೃತವಾಗಿ ಮತ್ತೆ ಮತ್ತೆ ಕಣ್ಣಿಗೆ ಬೀಳುತ್ತದೆ. ನೀರಿ ನಲ್ಲಿರುವ ಆಮೆಯ ಚಿತ್ರವೂ ಕೂಡಾ ಯೋಗಿಯ ಲಕ್ಷಣಕ್ಕೆ ಒಡ್ಡಿದ ಉಪಮೆ ಯಾಗಿದೆ. ಆಮೆ ತನ್ನ ಅಂಗಾಂಗಗಳನ್ನು ಬೇಕಾದಾಗ ತನ್ನ ಗಟ್ಟಿಯಾದ ಚಿಪ್ಪಿ ನೊಳಕ್ಕೆ ಎಳೆದುಕೊಳ್ಳುವಂತೆ ('ಯದಾ ಸಂಹರತೇ ಚಾಯಂ ಕೂರ್ಮೋಽಂಗಾ ನೀವ ಸರ್ವಶಃ) ಯೋಗಿಯಾದವನು ತನ್ನ ಇಂದ್ರಿಯಗಳನ್ನು ಲೋಕ ವಿಷಯಗಳಿಂದ ತನ್ನೊಳಕ್ಕೆ ಎಳೆದುಕೊಳ್ಳುತ್ತಾನೆ (2–58) ಎಂದು ಹೇಳಲಾಗಿದೆ. ಗೀತೆಯಲ್ಲಿ ಕೇವಲ ಎರಡು ಕಡೆ ಮಾತ್ರ ಪ್ರಾಣಿಗಳ ಉಪಮೆ ಬರುತ್ತದೆ. ಒಂದು ಈಗ ಹೇಳಿದ 'ಆಮೆ'ಗೆ ಸಂಬಂಧಿಸಿದ್ದು; ಮತ್ತೊಂದು ಹನ್ನೊಂದನೆ ಅಧ್ಯಾಯದ, ಇಪ್ಪ ತ್ತೊಂಬತ್ತನೆ ಶ್ಲೋಕದಲ್ಲಿ ಬರುವ ಪತಂಗಗಳದು. "ಯಥಾ ಪ್ರದೀಪ್ತಂ ಜ್ವಲನಂ

ಪತಂಗಾ । ವಿಶಂತಿ ನಾಶಾಯ ಸಮೃದ್ಧವೇಗಾಃ" ಎಂಬಲ್ಲಿ, ಪತಂಗಗಳು ಜ್ವಲಿಸುತ್ತಿರುವ ಅಗ್ನಿಯನ್ನು ವೇಗವಾಗಿ ಪ್ರವೇಶಿಸಿ ನಾಶಹೊಂದುವಂತೆ ಈ ಲೋಕದ ಜನ ಮೃತ್ಯುಮುಖರಾಗುತ್ತಿದ್ದಾರೆ—ಎಂದು ವರ್ಣಿತವಾಗಿದೆ. ಈ ಕೆಲವು ಉಪಮಾ ಚಿತ್ರಗಳು ತುಂಬ ಅರ್ಥಪೂರ್ಣವಾಗಿವೆ: ಸಮುದ್ರಮುಖವಾಗಿ ಧಾವಿಸುವ ನದ-ನದಿಗಳು, ಗಂಧವನ್ನು ಸೆಳೆದೊಯ್ಯುವ ಗಾಳಿ, ಅಚಲವಾದ ಸಮುದ್ರ, ಗಾಳಿಯ ಹೊಡೆತಕ್ಕೆ ಸಿಕ್ಕು ಹೊಯ್ದಾಡುವ ದೋಣಿ, ಅಗ್ನಿಜ್ವಾಲೆಗೆ ಧಾವಿಸುವ ಪತಂಗ, ಪದ್ಮಪತ್ರದ ಮೇಲಿನ ಜಲಬಿಂದು, ಗಟ್ಟಿಯಾದ ಚಿಪ್ಪಿನೊಳಕ್ಕೆ ಬೇಕೆಂದಾಗ ಅಂಗಾಂಗಗಳನ್ನು ಎಳೆದುಕೊಳ್ಳುವ ಆಮೆ—ಈ ಎಲ್ಲವೂ ಒಂದೊಂದು ಚಿತ್ತಸ್ಥಿತಿಯ ಸಂಕೇತಗಳಾಗಿ ಬಂದಿವೆ. ಗಹನವಾದ ಹಾಗೂ ಸೂಕ್ಷ್ಮವಾದ ಸಂಗತಿಗಳನ್ನು ಸಚಿತ್ರವಾಗಿ ಮತ್ತು ಅರ್ಥಪೂರ್ಣವಾಗಿ ಕೊಡುವ ಉಪಮಾಕ್ರಿಯೆ ಇಲ್ಲೆಲ್ಲ ತುಂಬ ಯಶಸ್ವಿಯಾಗಿದೆ.

ಅಗ್ನಿಯ ಉಪಮೆ ಭಗವದ್ಗೀತೆಯಲ್ಲಿ ಮೂರುಕಡೆ ಬಂದಿದೆ. 'ಅಗ್ನಿ' ಎಂಬುದು ಜ್ಞಾನಕ್ಕೆ ಸಂಕೇತವಾಗಿ ವೇದೋಪನಿಷತ್ತುಗಳಲ್ಲಿ ಬಳಕೆಯಾಗಿದೆ. ಗೀತೆಯಲ್ಲಿ ಒಂದೆಡೆ 'ಜ್ಞಾನಾಗ್ನಿ' ಎಂದೇ ವಾಚ್ಯರೂಪಕವಾಗಿ ಉಕ್ತವಾಗಿದೆ. 'ಜ್ಞಾನಾಗ್ನಿ ದಗ್ಧ ಕರ್ಮಾಣಾಂ ತಮಾಹುಃ ಪಂಡಿತಂ ಬುಧಾಃ' (4–19) 'ಜ್ಞಾನಾಗ್ನಿಯಿಂದ ದಗ್ಧಕರ್ಮಗಳನ್ನುಳ್ಳವನನ್ನು ಪಂಡಿತನೆಂದೂ, ಜ್ಞಾನಿ ಎಂದೂ ಕರೆಯುತ್ತಾರೆ'—ಎಂಬ ವರ್ಣನೆ ಬಂದಿದೆ. ಇನ್ನೊಂದೆಡೆ ಹೊಗೆಯಿಂದ ಆವೃತವಾದ ಬೆಂಕಿಯನ್ನು ಕಾಮಗಳಿಂದ ಆವೃತವಾದ ಜ್ಞಾನಕ್ಕೆ ಹೋಲಿಸಲಾಗಿದೆ. (3–38) ಮತ್ತೊಂದೆಡೆ ಹೊಗೆಯಿಂದ ಆವೃತವಾದ ಬೆಂಕಿಯನ್ನು, ದೋಷದಿಂದ ಆವೃತವಾದ ಕರ್ಮಗಳಿಗೆ ಹೋಲಿಸಲಾಗಿದೆ. (18–48) ಇನ್ನೊಂದೆಡೆ ಸಮಸ್ತ ಕರ್ಮಗಳನ್ನೂ ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಕೆಲವರು ಹೋಮಮಾಡುತ್ತಾರೆ (ಆತ್ಮಸಂಯಮ ಯೋಗಾಗ್ನೌ ಜುಹ್ವತಿ ಜ್ಞಾನ ದೀಪಿತೇ) ಎಂಬಲ್ಲಿ (4–27) ಅಗ್ನಿ 'ಯೋಗಾಗ್ನಿ'ಯಾಗಿ ಯಜ್ಞಕ್ರಿಯೆಯನ್ನು ನೆನಪಿಗೆ ತರುವುದಲ್ಲದೆ, ಯೋಗಿಯ ಮನಸ್ಸಿನ ಕ್ರಿಯೆಯನ್ನು ಮೂರ್ತಗೊಳಿಸುವುದರಲ್ಲಿ ಸಾರ್ಥಕವಾಗಿದೆ. ಅಗ್ನಿಯ ಇನ್ನೊಂದು ರೂಪ ದೀಪ. ದೀಪದ ಉಪಮೆ ಯೋಗಿಯಾದವನ ಮನಃಸ್ಥಿತಿಗೆ ಸಂಕೇತವಾಗಿ ಬಂದಿದೆ. "ಯಥಾದೀಪೋ ನಿವಾತಸ್ಥೋನೇಂಗತೇ ಸೋಪಮಾಸ್ಮೃತಾ। ಯೋಗಿನೋ ಯತ ಚಿತ್ತಸ್ಯಯುಂಜತೋ ಯೋಗಮಾತ್ಮನಃ (6-19)—'ಹೇಗೆ ಗಾಳಿ ಬೀಸದಿರುವ ಪ್ರದೇಶದಲ್ಲಿರುವ ದೀಪವು ಹೊಯ್ದಾಡದೆ ನಿಶ್ಚಲವಾಗಿ ಉರಿಯುವುದೋ, ಆತ್ಮಯೋಗದಲ್ಲಿರುವ ಯೋಗಿಯ ಚಿತ್ತಕ್ಕೆ ಅದು ಉಪಮೆ ಎಂದು ಹೇಳಲ್ಪಟ್ಟಿದೆ—ಎಂಬಲ್ಲಿ, ಯೋಗಿಯ ಮನಸ್ಸಿನ ಸ್ಥಿತಿಗೆ ನಿರ್ವಾತಸ್ಥಳದಲ್ಲಿ ನಿಶ್ಚಲವಾಗಿ ಉರಿಯುವ ದೀಪದ ಹೋಲಿಕೆ ಅತ್ಯಂತ ಉಚಿತವಾಗಿದೆ

ಮಾತ್ರವಲ್ಲದೆ, ಈ ಹೋಲಿಕೆ, ಮೊದಲಿನಿಂದಲೂ ಉಕ್ತವಾಗುತ್ತ ಬಂದಿದೆ (ಸೋಪಮಾಸ್ಮೃತಾ) ಎಂಬ ಮಾತಿನಲ್ಲಿ, ಗೀತೆ ಪರಂಪರಾಗತವಾದ ಉಪಮಾ ಸಾಮಗ್ರಿಯನ್ನು ಉಚಿತವರಿತು ಬಳಸಿಕೊಂಡಿದೆ ಎಂಬ ಸಂಗತಿಯೂ ಇಲ್ಲಿ ಸ್ಪಷ್ಟವಾಗಿದೆ. ಅಗ್ನಿಯ ಇನ್ನೊಂದು ಅಭಿವ್ಯಕ್ತಿ ಸೂರ್ಯ. ಸೂರ್ಯ, ಜ್ಞಾನಕ್ಕೆ ಮತ್ತು ಕೇವಲ ಜ್ಞಾನರೂಪವಾದ ಪರಮಾತ್ಮಕ್ಕೆ ಹೋಲಿಕೆಯಾಗಿ ಬಂದಿದೆ. ಆತ್ಮಜ್ಞಾನದಿಂದ ಯಾರ ಅಜ್ಞಾನವು ನಾಶವಾಗಿದೆಯೋ ಅವರ ಜ್ಞಾನವು ಸೂರ್ಯನಂತೆ ಪರಬ್ರಹ್ಮ ಸ್ವರೂಪವನ್ನು ಪ್ರಕಾಶಿಸಿ ತೋರುತ್ತದೆ (ತೇಷಾಂ ಆದಿತ್ಯವತ್ ಜ್ಞಾನಂ ಪ್ರಕಾಶಯತಿ ತತ್ಪರಂ) ಎಂದು (5-19) ಒಂದೆಡೆ ಬಂದರೆ, 'ಲೋಕವನ್ನು ರವಿಯೊಬ್ಬನೇ ಬೆಳಗುವಂತೆ ಪರಮಾತ್ಮನು ಸಮಸ್ತ ಕ್ಷೇತ್ರಗಳಲ್ಲಿ ಬೆಳಗುತ್ತಾನೆ' (13–33) ಎಂದು ಇನ್ನೊಂದೆಡೆ ಬಂದಿದೆ.

ಈ ಲೋಕಕ್ಕೂ ಪರಮಾತ್ಮನಿಗೂ ಇರುವ ಸಂಬಂಧವನ್ನು ಸ್ಪಷ್ಟಪಡಿಸಲು, ಪರಮಾತ್ಮನನ್ನು ಸೂತ್ರಧಾರನಿಗೂ, ಜೀವರುಗಳನ್ನು ಯಂತ್ರದ ಬೊಂಬೆಗಳಿಗೂ ಹೋಲಿಸಲಾಗಿದೆ. ಸರ್ವಭೂತಗಳ ಅಂತರಾಳದಲ್ಲಿದ್ದುಕೊಂಡು ಪರಮಾತ್ಮನು, ಈ ಜೀವರುಗಳನ್ನು ಯಂತ್ರದ ಬೊಂಬೆಗಳನ್ನು ಹೇಗೋ ಹಾಗೆ, ತನ್ನ ಮಾಯೆಯಿಂದ ತಿರುಗಿಸುತ್ತಿದ್ದಾನೆ (18-61) ಎಂಬ ಈ ಚಿತ್ರ[1] ಅತ್ಯಂತ ಪರಿಚಿತವೂ ಆಕರ್ಷಕವೂ ಆಗಿರುವುದಲ್ಲದೆ, ಭಗವಂತನನ್ನು 'ಲೀಲಾನಾಟಕ ಸೂತ್ರಧಾರಿ' ಎಂದು ಕರೆಯುವ ರೂಢಿಗೂ ಕಾರಣವಾಗಿದೆ. ಈ ಲೋಕವೇ ಒಂದು ನಾಟಕ. ನಾವೆಲ್ಲಾ ಪಾತ್ರಧಾರಿಗಳು ಅಥವಾ ಸೂತ್ರದ ಬೊಂಬೆಗಳು ಎನ್ನುವ ಈ ಕಲ್ಪನೆ ಭಾರತೀಯ ವೇದಾಂತ ಸಾಹಿತ್ಯದಲ್ಲಿ ವಿಶೇಷವಾಗಿ ಪುನರುಕ್ತವಾಗಿರುವುದು ಮಾತ್ರವಲ್ಲದೆ, ಇದೊಂದು ವಿಶ್ವಸಾಮಾನ್ಯವಾದ ಭಾವನೆಯೂ ಆಗಿದೆ.[2] ದೇವ–ಜೀವರ ಸಂಬಂಧವನ್ನು ಹೇಳುವ ಇನ್ನೊಂದು ಮುದ್ದಾದ ಉಪಮೆ 'ಸೂತ್ರೇ ಮಣಿ ಗಣಾ ಇವ'— ಎನ್ನುವುದು. ಕೃಷ್ಣ ಅರ್ಜುನನಿಗೆ ಹೇಳುತ್ತಾನೆ, 'ನನಗಿಂತ ಪರತರವಾದದ್ದು ಮತ್ತೊಂದಿಲ್ಲ; ಇದೆಲ್ಲವೂ—ಲೋಕವೆಲ್ಲವೂ—ಸೂತ್ರದಲ್ಲಿ ಮಣಿಗಣಗಳಂತೆ ನನ್ನಲ್ಲಿ ಪೋಣಿಸಲ್ಪಟ್ಟಿದೆ ('ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ') ಎಂದು (7-7). ಹಾರದಲ್ಲಿ ಅನೇಕ ಬಗೆಯ ಮಣಿಗಣಗಳಿರುತ್ತವೆ. ಮೇಲೆ

---

[1] ಈಶ್ವರಃ ಸರ್ವ ಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ (18-61)

[2] " .... All the world's a stage
And all the men and women merely players"
—William Shakespeare : 'As you like it'
(II ; VII ; 139-140)

ನೋಡಿದರೆ ಕಾಣುವುದು ನಾನಾವರ್ಣದ ಮಣಿಗಳು ಮಾತ್ರ ; ಆದರೆ ಅವುಗಳೊಳಗಿಂದ ಹಾದು ಹೋಗಿರುವ ಸೂತ್ರ ಅಥವಾ ದಾರ ನಮಗೆ ಕಾಣಿಸದು. ಹೀಗೆ ಈ ಲೋಕಲೋಕಗಳೆಂಬ ಮಣಿಗಣಗಳನ್ನು ದೈವವೆಂಬ ಕಾಣದ ಸೂತ್ರ ಹಿಡಿದು ನಿಲ್ಲಿಸಿದೆ ಎಂಬ ಈ ಚಿತ್ರ ಭಾವಿಸಿದಷ್ಟು ಸೊಗಸಾಗಿದೆ. ಬಹುದೊಡ್ಡ ತತ್ತ್ವಗಳನ್ನು ಎಷ್ಟು ಸರಳವಾಗಿ ಭಗವದ್ಗೀತೆ ಹೇಳಬಲ್ಲುದೆಂಬುದಕ್ಕೆ ಈ ಎರಡು ಉಪಮೆಗಳೇ ಸಾಕ್ಷಿಯಾಗಿವೆ.

ಭಗವದ್ಗೀತೆಯಲ್ಲಿ ಬಹು ಪ್ರಸಿದ್ಧವಾದದ್ದು ಅಶ್ವತ್ಥವೃಕ್ಷದ ಉಪಮೆ. ಇದೊಂದು ವಿಸ್ತೃತೋಪಮೆ. ಇದನ್ನು ಬಿಟ್ಟರೆ ಇನ್ನೊಂದು ಹದಿಮೂರನೆ ಅಧ್ಯಾಯದಲ್ಲಿ ಬರುವ ಕ್ಷೇತ್ರಜ್ಞ ವಿಚಾರವನ್ನು ಕುರಿತದ್ದು. ದೇಹವನ್ನು ಕ್ಷೇತ್ರಕ್ಕೆ ಹೋಲಿಸಿರುವ ಈ ಉಪಮೆ ತುಂಬಾ ಶಾಸ್ತ್ರೀಯವಾದ ವಿವರಣೆಗಳಿಂದಾಗಿ, ಹರಳುಗೊಳ್ಳದೆ ನೀರುನೀರಾಗಿ ಹರಿದು ಹೋಗಿದೆ. ಉಪಮೆಯ ಅರ್ಥ ಓದುಗನ ಪರಿಭಾವನೆಯಲ್ಲಿ ವ್ಯಾಪಕವಾಗಬೇಕಾದರೆ ಉಪಮೆ ಆದಷ್ಟು ಸಂಕ್ಷೇಪವಾಗಿರಬೇಕು ; ಅಥವಾ ವಿಸ್ತೃತಗೊಂಡರೂ ತನ್ನ ಪರಿಣಾಮವನ್ನು ಕಳೆದುಕೊಳ್ಳದಂತಹ ರೀತಿಯಲ್ಲಿ ತನ್ನ ಚಿತ್ರಕೇಂದ್ರವನ್ನು ಕಾಯ್ದುಕೊಳ್ಳುವಂತಿರಬೇಕು. ಹಾಗಲ್ಲದೆ ಹೋಲಿಕೆಗಳನ್ನು ಒಂದೊಂದಾಗಿ ಬಿಡಿಸಿ ಬಿಡಿಸಿ ಯಾವುದು ಯಾವುದಕ್ಕೆ ಹೇಗೆ ಹೋಲಿಕೆ ಎಂದು ಹೇಳುತ್ತಾ ಹೋದರೆ ಪರಿಣಾಮತೀವ್ರತೆ ತಗ್ಗುತ್ತದೆ. ಹೀಗೆ ಪರಿಣಾಮಕಾರಿಯಾಗದಿರುವ ವಿಸ್ತೃತೋಪಮೆ ದೇಹವನ್ನು ಕ್ಷೇತ್ರಕ್ಕೆ ಹೋಲಿಸಿರುವ (13-1 ರಿಂದ 6) ಸಂದರ್ಭದ್ದು. ಆದರೆ ಹದಿನೈದನೆಯ ಅಧ್ಯಾಯದಲ್ಲಿ ಬರುವ ಅಶ್ವತ್ಥ ವೃಕ್ಷದ ಉಪಮೆ, ವಿಸ್ತೃತೋಪಮೆಯಾದರೂ ತನ್ನ ಕೇಂದ್ರ ಚಿತ್ರವನ್ನೂ ಪರಿಣಾಮತೀವ್ರತೆಯನ್ನೂ ಕಾಯ್ದುಕೊಂಡಿದೆ.

ಋಗ್ವೇದದಲ್ಲಿಯೂ ಇಂಥದೊಂದು ವೃಕ್ಷದ ಚಿತ್ರವಿದೆ–'ದ್ವಾಸುಪರ್ಣಾಸಯುಜಾಸಖಾಯ . .' ಎಂದು ಆರಂಭವಾಗುವ ಮಂತ್ರದಲ್ಲಿ, ಆದರೆ ಅಲ್ಲಿ ವೃಕ್ಷಕ್ಕಿಂತ, ವೃಕ್ಷದ ಮೇಲೆ ಕುಳಿತ ಎರಡು ಹಕ್ಕಿಗಳ ಕಡೆ ಗಮನವನ್ನು ಸೆಳೆಯಲಾಗಿದೆ. ಒಂದು ಮರದಲ್ಲಿ ಎರಡು ಹಕ್ಕಿಗಳಿವೆ. ಒಂದು ಹಕ್ಕಿ ಹಣ್ಣನ್ನು ಕುಕ್ಕಿ ತಿನ್ನುತ್ತಿದೆ; ಇನ್ನೊಂದು ಹಣ್ಣನ್ನು ತಿನ್ನದೆ ಸಾಕ್ಷಿಭೂತವಾಗಿ ನೋಡುತ್ತಿದೆ. ಇದೊಂದು ಸಂಕೇತ. ಸಂಸಾರವೆಂಬ ವೃಕ್ಷದಲ್ಲಿ ಸುಖ-ದುಃಖಾದಿ ಫಲಗಳನ್ನು ಅನುಭವಿಸುವುದು ಜೀವಾತ್ಮ; ಇನ್ನೊಂದು ಸಾಕ್ಷೀಭೂತವಾಗಿ ನೋಡುವ ಪರಮಾತ್ಮ. ಆದರೆ ಭಗವದ್ಗೀತೆಯಲ್ಲಿ ಬರುವ ಈ ಸನಾತನ ಅಶ್ವತ್ಥವೃಕ್ಷದ ಚಿತ್ರ ವಿಲಕ್ಷಣವಾದದ್ದು* 'ಊರ್ಧ್ವ ಮೂಲಂ

* ಸನಾತನ ಅಶ್ವತ್ಥವೃಕ್ಷದ ಈ ಚಿತ್ರವನ್ನು ಗೀತೆ ಕಠೋಪನಿಷತ್ತಿನಿಂದ ಎತ್ತಿಕೊಂಡಿದೆ. ಕಠೋಪನಿಷತ್ತಿನ ಆರನೆಯ ವಲ್ಲಿಯ ಮೊದಲಮಂತ್ರದಲ್ಲಿ 'ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ' ಎಂದು ಬಂದಿರುವ ಒಂದೇ ಪಂಕ್ತಿಯ ಈ ರೂಪಕ ಭಗವದ್ಗೀತೆಯಲ್ಲಿ ವಿಸ್ತೃತೋಪಮೆಯಾಗಿ ಮೂರು ಶ್ಲೋಕಗಳಲ್ಲಿ ತುಂಬ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ.

ಅಧಃಶಾಖ 'ವಾದದ್ದು ಈ ವೃಕ್ಷ. ಬುಡದ ಬೇರೆಲ್ಲ ಮೇಲೆ; ಕೊಂಬೆಗಳೆಲ್ಲಾ ಕೆಳಗೆ ಚಾಚಿಕೊಂಡಿದೆ. ಇದರ ಮೂಲ ಅವ್ಯಕ್ತದಲ್ಲಿ; ವ್ಯಕ್ತದಲ್ಲಿ ಕೊಂಬೆ-ರೆಂಬೆ-ಎಲೆ-ಚಿಗುರುಗಳು ಹರಡಿಕೊಂಡಿವೆ. ಇದರ ಆದಿ-ಮಧ್ಯ-ಅಂತ್ಯವನ್ನು ಗ್ರಹಿಸುವುದು ಸಾಧ್ಯವಿಲ್ಲ. ಇದರ ಕೊಂಬೆ-ರೆಂಬೆ-ಎಲೆಗಳ ನಡುವೆ ಇರುವ ಜೀವನು, ಅಸಂಗವೆಂಬ ಅಸ್ತ್ರದಿಂದ ಇದನ್ನು ಕತ್ತರಿಸಿ, ಇದರ ಮೂಲವನ್ನು ಹುಡುಕಬೇಕು. ಋಗಾದಿಗಳೆ ಎಲೆಗಳು; ಸತ್ವ-ರಜಸ್ತಮಗಳೆಂಬ ಗುಣಗಳ ಕೊಂಬೆ-ರೆಂಬೆಗಳಲ್ಲಿ ವಿಷಯಾದಿಗಳೆಂಬ ಚಿಗುರುಗಳು ತುಂಬಿಕೊಂಡಿವೆ. ಇಂಥದು ಈ ಸಂಸಾರವೆಂಬ ಅಶ್ವತ್ಥವೃಕ್ಷ. ಸಂಸಾರದ ಉಪಮೆಯಾಗಿರುವ ಈ ಅಶ್ವತ್ಥವೃಕ್ಷದ ಚಿತ್ರ ಮೂರು ಶ್ಲೋಕಗಳಲ್ಲಿ ವಿಸ್ತೃತ ವಾಗಿದ್ದರೂ, ತನ್ನ ಕೇಂದ್ರ ಚಿತ್ರವನ್ನು ಸ್ಥಾಯಿಯನ್ನಾಗಿಸಿಕೊಂಡು, ತುಂಬ ಪರಿಣಾಮಕಾರಿಯಾಗಿದೆ.

ಇವೆಲ್ಲಕ್ಕಿಂತ ಭವ್ಯವಾದದ್ದು ವಿಶ್ವರೂಪದ ಸಂದರ್ಭ. ಅದ್ಭುತ ರಸಮೂಲ ವಾದ ಭವ್ಯತಾ ಪ್ರತಿಮೆ ವಿಶ್ವರೂಪದರ್ಶನದ್ದು. ದೈವೀಶಕ್ತಿಯ ಸಮಸ್ತ ಸೌಂದರ್ಯವೂ ಮೂರ್ತಗೊಂಡು, ಭಯ, ಹರ್ಷ, ರೋಮಾಂಚನದಲ್ಲಿ ನಿಲ್ಲಿಸು ವಂಥ ಸಾಮರ್ಥ್ಯವನ್ನು ಪ್ರಕಟಿಸುತ್ತದೆ. ಊಹಿಸುವ, ಭಾವಿಸುವ ಬುದ್ಧಿಯೆ ತತ್ತರಿಸಿ, ನಿಸ್ಸೀಮವಾದ ವಿರಾಡ್ರೂಪದ ಎದುರು "ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ। ಭಯೇನ ಚ ಪ್ರವ್ಯಥಿತಂ ಮನೋಮೇ" (11-45) ಎಂದು ಗದ್ಗದ ನಾದ ಪಾರ್ಥನೊಂದಿಗೆ ನಾವೂ ದನಿಗೂಡಿಸಬೇಕಾಗುತ್ತದೆ.

ಭಗವದ್ಗೀತೆಯ ಈ ಉಪಮಾ ಸೌಂದರ್ಯ, ಕೇವಲ ಶಾಸ್ತ್ರ ನಿರೂಪಣೆಯಲ್ಲಿ ಸ್ಪಷ್ಟೀಕರಣಕ್ಕೆ ಒದಗುವ ದೃಷ್ಟಾಂತಾದಿಗಳ ಪರಿಮಿತ ಪ್ರಯೋಜನದಿಂದ ಭಿನ್ನ ವಾದದ್ದು. ಏನೋ ಒಂದನ್ನು ಸ್ಪಷ್ಟಪಡಿಸಿ, ವಿಷಯವನ್ನು ಬುದ್ಧಿಗೆ ತಲುಪಿಸಿ ತೃಪ್ತವಾಗುವ ಪ್ರಯೋಜನಾಕಾಂಕ್ಷೆ ಇವುಗಳದ್ದಲ್ಲ; ಅದಕ್ಕೂ ಮಿಗಿಲಾಗಿ ಅರ್ಥ ರಮ್ಯತೆಯನ್ನು ಹಿಗ್ಗಿಸುವುದು ಈ ಉಪಮೆಗಳ ವಿಶೇಷತೆ. ನಿದರ್ಶನಕ್ಕೆ ಇದುವರೆಗು ಹೇಳಿದ ಕೆಲವು ಉಪಮೆಗಳನ್ನೆ ಜ್ಞಾಪಿಸಿಕೊಳ್ಳಬಹುದು. 'ಪದ್ಮಪತ್ರಮಿವಾಂ ಭಸಾ'—ಎಂಬ ಪುಟ್ಟ ಉಪಮೆ, ತಾವರೆಯೆಲೆಯ ಮೇಲೆ ನಿಂತ ನೀರಿನ ಹನಿಯನ್ನು ಮೊತ್ತಮೊದಲು ಭಾವಪೂರ್ಣವಾಗಿ ಅನುಭವಿಸಿದ ಮನಸ್ಸಿನಿಂದಲ್ಲದೆ ಮೂಡ ಲಾರದು. ಈ ಒಂದು ಉಪಮೆ, ಗೀತೆಯಲ್ಲಿ ಬರುವ ಇನ್ನೆಷ್ಟೋ ಉಪಮೆಗಳಂತೆ ಅನಂತರ ಬಳಸಿ ಬಳಸಿ ಹಳೆಯದಾಗಿದ್ದರೂ ಸಹ, ಗೀತೆಯ ಸಂದರ್ಭದಲ್ಲಿ ಬರುವ ಇಂಥ ಉಪಮೆಗಳ ಕಾವ್ಯಸೌಂದರ್ಯ ವಿಶಿಷ್ಟವಾದುದು. "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ"—(2-22) ಎಂಬ ಶ್ಲೋಕದಲ್ಲಿ, ಹಳೆಯದಾದ ಅಥವಾ ಹರಿದುಹೋದ ಬಟ್ಟೆಗಳನ್ನು ಬಿಟ್ಟು ಜನರು ಹೊಸ ಬಟ್ಟೆಗಳನ್ನು ತೊಟ್ಟುಕೊಳ್ಳುವಂತೆ ಆತ್ಮನು ಜೀರ್ಣವಾದ ಹಳೆಯ ಶರೀರ

ಗಳನ್ನು ವರ್ಜಿಸಿ ಹೊಸ ಶರೀರಗಳನ್ನು ಹೊಂದುತ್ತಾನೆ— ಎಂಬ ವರ್ಣನೆ, ಮರಣ ಪುನರ್‌ಜನ್ಮಗಳ ಸಂಗತಿಯನ್ನು ಸೊಗಸಾಗಿ ಮನದಟ್ಟುಮಾಡಿಕೊಡುತ್ತದೆ. ನಮಗೆ ಚಿರಪರಿಚಿತವಾದ ದೈನಂದಿನ ಸಾಧಾರಣ ಸಂಗತಿಗಳೇ, ಗಹನವಾದ ತತ್ವದ ಸ್ಪಷ್ಟೀಕರಣಕ್ಕೆ ಉಪಮಾ ಸಾಮಗ್ರಿಗಳಾಗಿ ಒದಗಿಬರುತ್ತವೆ. ಹರಿದ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ತೊಡುವ ಕ್ರಿಯೆ, ಜೀವ ದೇಹದಿಂದ ದೇಹಕ್ಕೆ ವಲಾಯಿಸುವ ಕ್ರಿಯೆಯನ್ನು ಕೇವಲ ಸ್ಪಷ್ಟಪಡಿಸುವುದಿಲ್ಲ, ಚಿತ್ರವೊಂದರ ಮೂಲಕ ರಮಣೀಯಾರ್ಥ ಪ್ರತಿಪಾದಕವಾದ ರೀತಿಯಲ್ಲಿ ಅಭಿನಯಿಸಿ ತೋರಿಸುತ್ತದೆ. ಮೃತ್ಯುತತ್ವವನ್ನು ಎಷ್ಟು ಸಹಜವಾಗಿ, ಎಷ್ಟು ವಸ್ತುನಿಷ್ಠವಾಗಿ ಹೇಳುತ್ತದೆ ಎಂಬುದಕ್ಕಿಂತ, ಹೀಗೆ ಹೇಳುವವನ ನಿಲುವು ಯಾವ ಮಟ್ಟದ್ದು ಎನ್ನುವುದನ್ನೂ ಇಂಥ ಉಪಮೆಗಳು ಸೂಚಿಸುತ್ತವೆ. ಹಾಗೆಯೆ ಮನಸ್ಸು ವ್ಯಾಮೋಹಗಳಿಂದ ಆವೃತವಾದ ಸ್ಥಿತಿಗೆ 'ಯಥಾದರ್ಶೋ ಮಲೇನ ಚ' (3–38) 'ಧೂಳು ಮುಸುಕಿದ ಕನ್ನಡಿಯ ಹಾಗೆ' ಎಂಬ ಮಾತು ತುಂಬ ಉಚಿತವಾಗಿದೆ. ಆಮೆ ತನ್ನ ಅಂಗಾಂಗಗಳನ್ನು ಚಿಪ್ಪಿನೊಳಗೆ ಎಳೆದುಕೊಳ್ಳುವ ಕ್ರಿಯೆಯನ್ನು, ಸರ್ವೇಂದ್ರಿಯಗಳನ್ನು ಸಂಯಮಿಸಿ ಕೊಳ್ಳುವ ಯೋಗಿಗೆ ಹೋಲಿಸಿದಾಗ ಅಲ್ಲಿ ಕೇವಲ ವಿಷಯ ನಿರೂಪಣೆಯಿಂದ ಆಗುವ ಸ್ಪಷ್ಟೀಕರಣಕ್ಕೂ ಮಿಗಿಲಾದ ಪ್ರಯೋಜನ ಇದೆ. ಹೀಗೆ ಭಗವದ್ಗೀತೆಯ ತುಂಬ ಅನೇಕ ಸಂಕೇತಗಳು ಈ ಉಪಮಾ ನಿರ್ಮಿತಿಗೆ ಒದಗಿ ಬಂದಿವೆ. ಅಲ್ಲದೆ ಒಂದೇ ವಸ್ತು ಬೇರೆ ಬೇರೆಯ ಸಂದರ್ಭಗಳಲ್ಲಿ ಬೇರೆ ಬೇರೆಯ ಕ್ರಿಯೆಗಳಿಗೆ, ಭಾವನೆಗಳಿಗೆ ಸಂಕೇತವಾಗಿ ಬಂದಿವೆ. ನಿದರ್ಶನಕ್ಕೆ 'ದೋಣಿ' ಒಂದು ಕಡೆ ಅಸಹಾಯಕವಾದ ಮನಸ್ಸಿಗೆ ಸಂಕೇತವಾದರೆ, ಇನ್ನೊಂದೆಡೆ 'ದೋಣಿ' ಪಾಪವನ್ನು ದಾಟುವ ಜ್ಞಾನಕ್ಕೆ ಸಂಕೇತವಾಗುತ್ತದೆ.

ಭಗವದ್ಗೀತೆಯಲ್ಲಿ ಉಪಮೆಗಳು ಮಾತ್ರವಲ್ಲದೆ ಕೆಲವು ರೂಪಕಗಳೂ ಇವೆ. ಇವುಗಳಲ್ಲಿ ಎಷ್ಟೋ ರೂಢಿ ರೂಪಕಗಳು. ನಿದರ್ಶನಕ್ಕೆ 'ಆಶಾಪಾಶ ಶತೈರ್ಬದ್ಧಾ' (10–12), ಎಂಬುದರಲ್ಲಿ 'ಆಶಾಪಾಶ'— ಎಂಬುದು ಒಂದು ರೂಪಕ ಎಂದು ನಮಗೆ ಗೊತ್ತಾಗದಷ್ಟು ಮತ್ತೆ ಮತ್ತೆ ವೇದಾಂತ ಸಾಹಿತ್ಯದಲ್ಲಿ ಬಳಕೆಯಾಗಿ ಸವೆದು ಹೋಗಿದೆ. ಹಾಗೆಯೆ 'ಪ್ರಯಾಣಕಾಲ' (8–10) ಎಂದರೆ ಮರಣಕಾಲ ಎಂದು ಸಂಕೇತಾರ್ಥ; 'ಸರ್ವದ್ವಾರಾಣಿ ಸನ್ಯಮ್ಯ' (8-12) ಎಂಬಲ್ಲಿ ದ್ವಾರಾಣಿ (ಬಾಗಿಲುಗಳು) ಎಂಬುದು ಸರ್ವೇಂದ್ರಿಯಗಳು ಎಂಬರ್ಥವನ್ನು ಕೊಡುತ್ತದೆ. ಆಶಾಪಾಶ, ಪ್ರಯಾಣಕಾಲ ಮತ್ತು ಸರ್ವದ್ವಾರಗಳು—ಇವುಗಳು ಪಾಶ, ಪ್ರಯಾಣ ಮತ್ತು ಬಾಗಿಲುಗಳೆಂಬ ವಾಚ್ಯಾರ್ಥವನ್ನು ತಿರಸ್ಕರಿಸಿ ಬೇರೊಂದಕ್ಕೆ ಸಂಕೇತಗಳಾಗಿವೆ ಎಂಬುದನ್ನು ಹೇಳುವ ಅಗತ್ಯವಿಲ್ಲದಷ್ಟು ಮಟ್ಟಿಗೆ ಸಂಕೇತಾರ್ಥವನ್ನೇ ಸಹಜಾರ್ಥವನ್ನಾಗಿ ಮಾಡಿಕೊಂಡಿವೆ. ಇನ್ನು ಕೆಲವು 'ಯುದ್ಧಸ್ವ ವಿಗತಜ್ವರಃ '(3-30) ಯೋಗೀ

ಸಂಶುದ್ಧ ಕಿಲ್ಬಿಷಃ (6-45) 'ಯಾಮಿಮಾಂ ಪುಷ್ಪಿತಾಂ ವಾಚಂ' (2-42)— ಎಂಬ ಈ ನುಡಿಗಟ್ಟುಗಳಲ್ಲಿ ಹರಳುಗೊಂಡ ರೂಪಕಗಳನ್ನು ಮರೆಯುವಂತಿಲ್ಲ. ಇದೆಲ್ಲಕ್ಕಿಂತ ಮಿಗಿಲಾದದ್ದು ಅರ್ಜುನನ ಮನಃಸ್ಥಿತಿಯನ್ನು, ಅದರಲ್ಲೂ ಬಂಧುಬಾಂಧವರನ್ನು ಕೊಂದು, ತದನಂತರ ತಾನು ಪಡುವ ಸುಖದ ಬಗ್ಗೆ ಆವನು ತಾಳಿದ ಜುಗುಪ್ಸೆಯನ್ನು ಧ್ವನಿಸುವ 'ಭುಂಜೀಯ ಭೋಗಾನ್ ರುಧಿರ ಪ್ರದಿಗ್ಧಾನ್' (2-5) ಎಂಬ ರೂಪಕ. ಈ ರೂಪಕ, ಪರಿಭಾವಿಸಿದಷ್ಟೂ ರುದ್ರ-ರಮ್ಯವಾದ ಈ ರೂಪಕ, ತನಗೆ ತಾನೇ ಒಂದು ಕಿರು ಕಾವ್ಯದಂತಿದೆ. ಊಟ ಮಾಡುವುದು ತುಂಬ ಸುಖಪ್ರದವಾದ ಕ್ರಿಯೆ; ಆದರೆ ಬಂಧುಬಾಂಧವರನ್ನು ಕೊಂದು ಅನಂತರ ತಾನು ಭುಂಜಿಸುವ ಈ ಭೋಗ 'ರುಧಿರ ಪ್ರದಿಗ್ಧ' ವಾದಂಥದು ಎಂಬ ಮಾತಿನಲ್ಲಿರುವ ತೀವ್ರತೆ ವಿವರಿಸಿ ಹೇಳುವಂಥಾದ್ದಲ್ಲ; ಪರಿಭಾವಿಸಿ ನೋಡಬೇಕಾದದ್ದು ಪ್ರತಿಯೊಂದು ಉಪಮೆಯಾಗಲಿ ರೂಪಕವಾಗಲಿ ಸಂಭವಿಸುವುದು ಅದರ ಹಿಂದಿರುವ ಉತ್ಕಟವಾದ ಅನುಭವದ ಮನಃಸ್ಥಿತಿಯಿಂದ; ಕೇವಲ ಹೇಳುವ ಸಂಗತಿ ಮತ್ತೊಬ್ಬನ ಬುದ್ಧಿಗಮ್ಯವಾಗಲಿ ಎಂಬಷ್ಟೆ ಉದ್ದೇಶದಿಂದ ಅಲ್ಲ. ಇಡೀ ಗೀತೆಯಲ್ಲಿ ಅಂಥ ತೀವ್ರಾನುಭವ ಉದ್ದಕ್ಕೂ ಸ್ಥಾಯಿಯಾಗಿರುವುದನ್ನು ನಾವು ಕಾಣಬಹುದು. ಆದುದರಿಂದಲೇ ಗೀತೆಯ ಅಭಿವ್ಯಕ್ತಿ ಕೇವಲ ಶಾಸ್ತ್ರೀಯ ಎಂದು ತೋರುವುದಿಲ್ಲ. ಶಾಸ್ತ್ರವೆಂದು ಮಾತ್ರ ಪರಿಗಣಿಸುವ ಕೆಲವೆಡೆಗಳಲ್ಲಿ ಕೂಡಾ ಅಭಿವ್ಯಕ್ತಿಯಲ್ಲಿನ ತೀವ್ರತೆ, ಮತ್ತು ಸಂಯಮಗಳು ಕಡಮೆಯಾಗುವುದಿಲ್ಲ. ಇದರಿಂದಾಗಿ ಉಪಮೇ-ರೂಪಕಾದಿಗಳಿಗಿಂತ ಭಿನ್ನವಾದ ಅನೇಕ ಸೂಕ್ತಿಗಳನ್ನು ನಾವು ಗೀತೆಯ ಉದ್ದಕ್ಕೂ ಕಾಣಬಹುದು: 'ಸಂಭಾವಿತಸ್ಯಚಾಕೀರ್ತಿರ್ಮರಣಾದತಿರಿಚ್ಯತೇ' (2–34) 'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್' (2-37), 'ಸಮತ್ವಂ ಯೋಗ ಉಚ್ಯತೇ' (2-48), 'ಯೋಗಃ ಕರ್ಮಸು ಕೌಶಲಂ' (2-50) 'ಅಶಾಂತಸ್ಯ ಕುತಃ ಸುಖಂ' (2-66) 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' (3-35) 'ಸಂಭವಾಮಿ ಯುಗೇ ಯುಗೇ' (4-8), 'ಶ್ರದ್ಧಾವಾನ್ ಲಭತೇ ಜ್ಞಾನಂ' (4-39), 'ಪಂಡಿತಾಃ ಸಮದರ್ಶಿನಃ' (5-18) 'ನಮೇ ಭಕ್ತಃ ಪ್ರಣಶ್ಯತಿ' (9-31)—ಇಂಥ ನೂರಾರು ಸೂಕ್ತಿಗಳು ಕಾವ್ಯದ ಕಾವಿನಿಂದ ಬಂದಾವೇ ಹೊರತು, ಕೇವಲ ಶಾಸ್ತ್ರಬುದ್ಧಿಯಿಂದ ಅಲ್ಲ.

ಭಗವದ್ಗೀತೆಯ ಈ ಅಭಿವ್ಯಕ್ತಿ ಪ್ರಕಾರಗಳಲ್ಲಿ ಕಾವ್ಯದ ರಮ್ಯತೆ ಇದೆ; ಶಾಸ್ತ್ರದ ನಿಷ್ಕೃಷ್ಟತೆ ಇದೆ. ಆದರೆ ಈ ನಿಷ್ಕೃಷ್ಟತೆ ಯಾವ ರೀತಿಯಲ್ಲೂ ಅರ್ಥದ ರಮ್ಯತೆಯ ವ್ಯಾಪ್ತಿಗೆ ಆತಂಕವಾಗಿಲ್ಲ. ಇದೇ ಈ ಅಲಂಕಾರಗಳ ವಿಶೇಷತೆ.

# ಋಗ್ವೇದ ಕಾಲದಿಂದ ಪ್ರಣವ ಪ್ರಶಂಸೆ

ಟಿ. ಯಮ್. ಮಲ್ಲಪ್ಪ

ಶ್ವೇತಾಶ್ವತರೋಪನಿಷತ್ತಿನ 'ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮ ಶಕ್ತಿಂ' ಎಂಬ ಆಧಾರದಂತೆ ಧ್ಯಾನಯೋಗದಿಂದ ಪರಮಾತ್ಮಾಭಿವ್ಯಕ್ತಿಯನ್ನು ಪಡೆಯಲೆತ್ನಿಸುವ ಮುಮುಕ್ಷುಗಳಿಗೆ ಹೇಗೋ ಹಾಗೆಯೇ 'ಸಂಕಟ ಬಂದರೆ ವೆಂಕಟರಮಣ' ಎನ್ನುವ ಲೌಕಿಕರಿಗೂ ಪರಮಾತ್ಮನ ಧ್ಯಾನವು ಅವಶ್ಯಕ. ಇಂದ್ರಿಯಾತೀತವಾದ ಪರಮಾತ್ಮನನ್ನು ಧ್ಯಾನಿಸುವುದು ಹೇಗೆ ? - ಎಂಬ ಪ್ರಶ್ನೆಯು ಬಹಳ ಹಿಂದೆಯೇ ಎದ್ದಿರಬೇಕು. ಆದುದರಿಂದ ತ್ರಿಮೂರ್ತಿ ವಿಗ್ರಹಗಳ ಕಲ್ಪನೆಯಾಗಿರಬೇಕು. ರೂಪರಹಿತವಾದುದಕ್ಕೆ ಹೆಚ್ಚು ಹೊಂದುವ ಲಿಂಗ, ಸಾಲಿಗ್ರಾಮ ಮೊದಲಾದುವುಗಳ ಮೂಲಕ ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸುವುದು ಹೆಚ್ಚು ಪ್ರಾಶಸ್ತ್ಯವೆನಿಸಿರಬೇಕು. ಇವಕ್ಕೂ ಸೂಕ್ಷ್ಮವಾದುದು ಓಂಕಾರಪ್ರಣವ ವರ್ಣಪ್ರತೀಕ. ಮತ್ತೊಂದು ರೀತಿಯಲ್ಲಿ ನೋಡಿದರೆ ಪರಬ್ರಹ್ಮವು ಅಭಿಧೇಯ, ಓಂಕಾರವು ಅಭಿಧಾನ; ಓಂಕಾರವು ಪರಬ್ರಹ್ಮದ ಹತ್ತಿರವಾದ ಹೆಸರು ಬೃಹದಾರಣ್ಯಕ ಉಪನಿಷತ್ತಿನ (೫–೧–೧) ಶಾಂಕರ ಭಾಷ್ಯದಿಂದ [1] ಇದು ಸ್ಪಷ್ಟವಾಗುತ್ತದೆ.

## – ಋಗ್ವೇದದಲ್ಲಿ ಪ್ರಣವ ಪ್ರಶಂಸೆ –

ವೇದಮಂತ್ರಗಳನ್ನು ಓಂಕಾರ ಪ್ರಣವ ಸಹಿತವಾಗಿ ಉಚ್ಚರಿಸಬೇಕೆಂಬುದರಿಂದಲೇ ಪ್ರಣವಕ್ಕೆ ವೇದದಲ್ಲಿರುವ ಪ್ರಾಶಸ್ತ್ಯವು ಕಂಡುಬರುತ್ತದೆ. ಅಷ್ಟೇಕೆ ಋಗ್ವೇದ ಸಂಹಿತೆಯೇ ಶ್ರುತಿತತಿಯೂ ವೇದ ಸಮಸ್ತವೂ ಸ್ಥಿತವಾಗಿರುವ (ಪ್ರಣವ) ಅಕ್ಷರ

---

[1] ಬ್ರಹ್ಮಪ್ರತಿಪತ್ತೌ ಇದಂ ಪರಮಸಾಧನಂ ; ತಚ್ಚದ್ವಿಪ್ರಕಾರೇಣ–ಪ್ರತೀಕತ್ವೇನ ಅಭಿಧಾನತ್ವೇನ ಚ ; ಪ್ರತೀಕತ್ವೇನ ಯಥಾ ವಿಷ್ಣ್ವಾದಿ ಪ್ರತಿಮಾ ಅಭೇದೇನ ಏವಂ ಓಂಕಾರೋಬ್ರಹ್ಮ ಇತಿ ಪ್ರತಿಪತ್ತವ್ಯಃ ; ತಥಾಹಿ ಓಂಕಾರಾಲಂಬನಸ್ಯ ಬ್ರಹ್ಮಪ್ರಸೀದತಿ.

ವನ್ನು ಅರಿಯದಿದ್ದರೆ ಋಗಾದಿ ವೇದಗಳ ಪಠಣದಿಂದ ತಿಳಿಯುವುದೇನು ? –ಎಂದು ಪ್ರಶ್ನಿಸಿದೆ. ಋಗ್ವೇದದ ಆ ಮಂತ್ರದ [1] ಕನ್ನಡ ಅನುವಾದವಿದು :

ಕಂದ ॥ ಶ್ರುತಿ ವಿಶ್ವದೇವ ತತಿ ಸಂ।
ಸ್ಥಿತ ಪ್ರಣವ ಪರಮನಭಮನುರೆಯರಿಯ ದಿರಲ್ ॥
ಶ್ರುತಿಯಿಂದರಿವುದದೇಂ ? ಸ ।
ನ್ಮತಿಯಿಂದಿಂತರಿದೊಡೆ ಪಡೆವಂ ಸದ್ಗತಿಯಂ ॥

– ಐತರೇಯ ಬ್ರಾಹ್ಮಣದಲ್ಲಿ ಪ್ರಣವ ಪ್ರಶಂಸೆ –

ಪ್ರಣವದ ವೇದ ಸಾರವು ಬ್ರಾಹ್ಮಣದಲ್ಲಿ ಹೇಳಿದೆಯೆಂದು ಸಾಯಣ ಭಾಷ್ಯ ದಲ್ಲಿ [2] ಪ್ರಜಾಪತಿಯ ತಪಸ್ಸಿನಿಂದ ಪಕ್ವವಾದ ಋಗ್ವೇದ ಸಾಮವೇದ ಯಜುರ್ವೇದ ಗಳಿಂದ ಕ್ರಮವಾಗಿ ಭೂ, ಭುವಃ, ಸ್ವಃ ಎಂಬ ಸ್ವರಗಳು ಹೊರಹೊಮ್ಮಿದವೆಂದೂ ಪ್ರಜಾಪತಿಯ ತಪಸ್ಸಿನಿಂದ ಪಕ್ವವಾದ ಈ ಸ್ವರಗಳಿಂದ ಅಕಾರ ಉಕಾರ ಮಕಾರಗಳು ಹೊರಹೊಮ್ಮಿದವೆಂದೂ ಇವುಗಳಿಂದ ಓಂಕಾರವಾಯಿತೆಂದೂ, ಓಂಕಾರವು ಮೂರು ವೇದಗಳ ಸಾರಸರ್ವಸ್ವವೆಂದೂ ಐತರೇಯ ಬ್ರಾಹ್ಮಣದಲ್ಲಿ [3] ಹೇಳಿದೆ.

– ಮಾಂಡೂಕ್ಯ ಉಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಪ್ರಣವ ವಿಷಯವೊಂದನ್ನೇ ಪ್ರತಿಪಾದಿಸುವ ಮಾಂಡೂಕ್ಯ ಉಪನಿಷತ್ತು, ಮೊದಲು ಉಲ್ಲೇಖಾರ್ಹವಾಗಿದೆ.

---

[1] ಋಚೋ ಅಕ್ಷರೇ ಪರಮೇ ವ್ಯೋಮನ್ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ
ಋ ೧–೧೬೪–೩೯

[2] ಪ್ರಣವಸ್ಯ ಸರ್ವವೇದ ಸಾರತ್ವಂ ಬ್ರಾಹ್ಮಣೇ ಶ್ರೂಯತೇ–
(ಸಾಯಣಭಾಷ್ಯ ಋ ೧–೧೬೪–೩೭)

[3] ವೇದಾನಭ್ಯತಪತ್, ತೇಭ್ಯೋಽಭಿತಪ್ತೇಭ್ಯಃ ; ತ್ರೀಣಿ ಶುಕ್ರಾಣ್ಯ ಜಾಯಂತ, ಭೂರಿತ್ಯೇವ ಋಗ್ವೇದಾದಜಾಯತ, ಭುವ ಇತಿ ಯಜುರ್ವೇದಾತ್, ಸ್ವರಿತಿ ಸಾಮ ವೇದಾತ್, ತಾನಿ ಶುಕ್ರಾಣ್ಯಭ್ಯ ತಪತ್, ತೇಭ್ಯೋಽಭಿತಪ್ತೇಭ್ಯಃ ತ್ರಯೋವರ್ಣಾ ಅಜಾಯಂತಾಕಾರ ಉಕಾರ ಮಕಾರ ಇತಿ ತಾನೇ ಕಧಾ ಸಮಭರತ್ ತದೇತದ್ ಓಂ ಇತಿ.

[1] ಓಂಕಾರವೇ ಇದೆಲ್ಲ ಇಂದಿನದು ಹಿಂದಿನದು ।
ಓಂಕಾರವೇ ಅಹುದು ಮುಂದಿನದೆಲ್ಲನದು ॥

ಎಂಬ ಅರ್ಥಬರುವ ಮಂತ್ರದಿಂದ ಈ ಉಪನಿಷತ್ತು ಪ್ರಾರಂಭವಾಗಿ ಹೀಗೆ ಅರ್ಥ ಬರುವ ಮಂತ್ರದಿಂದ ಮುಕ್ತಾಯವಾಗುವುದು :

[2] ಶಿವಮಮಾತ್ರಂ ಪ್ರಪಂಚೋಪಶಮಮದ್ವಯಂ ।
ತವೆ ಅವ್ಯವಹಾರ್ಯಂ ಪರಿಕಿಸಲ್ ಚತುರ್ಥಂ ॥
ಆತ್ಮವಿದು ಓಂಕಾರ ಇದನಿಂತು ತಿಳಿದವರ್ ।
ಆತ್ಮನಿಂದಲೇ ಪರಮಾತ್ಮನಂ ಪೊಂದುವರ್ ॥

ಜಗತ್ತಿನಲ್ಲಿ ಏನೇನಿದೆಯೋ ಅದೆಲ್ಲವೂ ಓಂಕಾರವೇ, ಅದೆಲ್ಲವೂ ಪರಬ್ರಹ್ಮವೇ [3] ಎಂದು ಇವೆರಡಕ್ಕೂ ತಾದಾತ್ಮ್ಯವನ್ನು ಹೇಳಿ ಈ ಉಪನಿಷತ್ತು ಓಂಕಾರೋಪಾಸನೆ ಯಿಂದಲೇ ಮೋಕ್ಷವೆಂಬುದನ್ನು ಸಮರ್ಥಿಸುತ್ತದೆ.

– ಬೃಹದಾರಣ್ಯಕ ಉಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಅತ್ಯಂತ ಪುರಾತನವಾದ ಬೃಹದಾರಣ್ಯಕ ಉಪನಿಷತ್ತಿನಲ್ಲಿ (೫–೧–೧) 'ಓಂ ಖಂ ಬ್ರಹ್ಮ....ವೇದೋಽಯಂ ಬ್ರಾಹ್ಮಣಾ ವಿದುರ್ವೇದೈನೇನ ಯದ್ವೇದಿತವ್ಯಂ' ಎಂದು ಹೇಳಿದೆ. ಪರಮಾಕಾಶವಾದ ಬ್ರಹ್ಮಸ್ವರೂಪವಾದುದೇ ಓಂಕಾರ; ಇದು ಎಂದರೆ ಓಂಕಾರವು ವೇದವೆಂದೂ ವೇದಿತವ್ಯ ಪರಬ್ರಹ್ಮವೆಂದೂ ಬ್ರಾಹ್ಮಣರು ತಿಳಿಯುತ್ತಾರೆಂದು ಇದರ ಅಭಿಪ್ರಾಯ. ಈ ವಿಷಯದ ಶಾಂಕರ ಭಾಷ್ಯವನ್ನು ಹಿಂದೆ ಕೊಟ್ಟಿದೆ.

– ಛಾಂದೋಗ್ಯೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಪುರಾತನ ಉಪನಿಷತ್ತುಗಳಲ್ಲಿ ಎರಡನೆಯದಾದ ಛಾಂದೋಗ್ಯ ಉಪನಿಷತ್ತು 'ಓ ಮಿತ್ಯೇ ತದಕ್ಷರ ಮುದ್ಗೀತಮುಪಾಸೀತ' ಎಂದರೆ ಓಂ ಎಂಬ ಈ ಅಕ್ಷರದ

---

[1] ಓ ಮಿತ್ಯೇತದಕ್ಷರಮಿದಗಂ ಸರ್ವಂ; ತಸ್ಯೋಪವ್ಯಾಖ್ಯಾನಂ, ಭೂತಭವ ದ್ಭವಿಷ್ಯದಿತಿಸರ್ವಮೋಂಕಾರ ಏವ

[2] ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತ ಏವಮೋಂಕಾರ ಆತ್ಮೈವ ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ

[3] ಸರ್ವಗ್ಂ ಹಿ ಏತದ್ ಬ್ರಹ್ಮ; ಅಯಮಾತ್ಮಾ ಬ್ರಹ್ಮ

[4] ಏಷಾಂ ಭೂತಾನಾಂ ಪೃಥಿವೀರಸಃ, ಪೃಥಿವ್ಯಾ ಆಪೋ ರಸಃ, ಅಪಾಂ ಓಷಧಯೋ ರಸಃ, ; ಓಷಧೀನಾಂ ಪುರುಷೋ ರಸಃ ; ಪುರುಷಸ್ಯ ವಾಗ್ ರಸಃ- ಋಚಃ ಸಾಮರಸಃ ; ಸಾಮ್ನ ಉದ್ಗೀಥೋ (ಛಾಂದೋಗ್ಯ ೧–೧–೨)

ಉದ್ಗೀತವನ್ನು ಉಪಾಸನೆ ಮಾಡಬೇಕೆಂದು ಹೇಳುವುದರಿಂದಲೇ ಪ್ರಾರಂಭವಾಗುತ್ತದೆ; ಅಲ್ಲದೆ ಮೊದಲನೆಯ ಅಧ್ಯಾಯವನ್ನೇ ಓಂಕಾರ ವಿಷಯಕ್ಕೆ ವಿನಿಯೋಗಿಸಲಾಗಿಟ್ಟು ಪ್ರಣವಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿದೆ. ಭೂತಗಳ ಸಾರವು ಪೃಥಿವಿ; ಪೃಥಿವಿಯ ಸಾರವು ಅಪ್ಪು; ಅಪ್ಪಿನ ಸಾರವು ಓಷಧಿಗಳು; ಓಷಧಿಗಳ ಸಾರವು ಪುರುಷ; ಪುರುಷನ ಸಾರವು ವಾಕ್, ವಾಕ್ಕಿನ ಸಾರವು ಋಕ್, ಋಕ್ಕಿನ ಸಾರವು ಸಾಮ, ಸಾಮದ ಸಾರವು ಉದ್ಗೀತ ಎಂದು ಎರಡನೆಯ ಮಂತ್ರದಲ್ಲಿ ಹೇಳಿ ಮುಂದಿನ ಮಂತ್ರದಲ್ಲಿ [1] ಓಂಕಾರವು ಸಾರವತ್ತಾದವುಗಳಲ್ಲೆಲ್ಲ ಸಾರವತ್ತಮವಾದುದೆಂದೂ ಅದು ಪರವು ಪರಾರ್ಥ್ಯವು ಎಂದೂ ಹೇಳಿದೆ. ಓಂಕಾರವು ವೇದಗಳಿಗಿಂತಲೂ ಶ್ರೇಷ್ಠವಾದುದೆಂದು ತಿಳಿಸಲು ಒಂದು ಆಖ್ಯಾಯಿಕೆಯನ್ನು ಸಹಾ ಈ ಉಪನಿಷತ್ತಿನಲ್ಲಿ ಹೇಳಿದೆ.[2] ವೇದಗಳ ಮರೆಹೊಕ್ಕರೂ ಮೃತ್ಯುವಿನಿಂದ ದೇವತೆಗಳು ತಪ್ಪಿಸಿಕೊಳ್ಳಲಾಗದಿರಲು ಅವರು ಪ್ರಣವದ ಮರೆಹೊಕ್ಕು ಮೃತ್ಯುವಿನಿಂದ ತಪ್ಪಿಸಿಕೊಂಡರೆಂಬುದು ಈ ಆಖ್ಯಾಯಿಕೆ. ಹೀಗಿದೆ ಪ್ರಣವದ ಹಿರಿಮೆಯ ಉಕ್ತಿ.

– ಈಶಾವಾಸ್ಯೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ದಶೋಪನಿಷತ್ತುಗಳಲ್ಲಿ ಈಶಾವಾಸ್ಯವನ್ನು ಮೊದಲನೆಯದನ್ನಾಗಿ ಎಣಿಸುವುದು ಅದರ ಪ್ರಾಮುಖ್ಯ ದೃಷ್ಟಿಯಿಂದ. ಆದುದರಿಂದಲೇ ಇತರ ಉಪನಿಷತ್ತುಗಳಿಗಿಂತಲೂ ಹೆಚ್ಚು ಭಾಷ್ಯಗಳು ಈ ಉಪನಿಷತ್ತಿಗೆ ಇವೆ. ಜ್ಞಾನ ಎಂತಹುದು, ಕರ್ಮ ಎಂತಹುದು ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದ್ದರೂ, ವಿದ್ಯೆ–ಎಂದರೆ ಜ್ಞಾನ ಅವಿದ್ಯೆ–ಎಂದರೆ ಕರ್ಮ ಎಂದು ಸ್ಪಷ್ಟೀಕರಿಸಿ ಈ ಉಪನಿಷತ್ತು ಜ್ಞಾನ ಕರ್ಮ ಸಮುಚ್ಚಯವನ್ನು ಹೇಳುವುದೆಂಬ ವಿಷಯಗಳಲ್ಲಿ ಭಿನ್ನಾಭಿಪ್ರಾಯವಿಲ್ಲ. ಈ ಉಪನಿಷತ್ತಿನ ಹೃದಯವೆನಿಸಿರುವ ಮಂತ್ರವಿದು:

ವಿದ್ಯಾಂ ಚಾಽವಿದ್ಯಾಂ ಚ ಯಸ್ತದ್ ವೇದೋಭಯಗ್ಂ ಸಹ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತ ಮಶ್ನುತೇ॥

ಈ ಮಂತ್ರದ ಕನ್ನಡ ಪದ್ಯಾನುವಾದವಿದು:

ವಿದ್ಯೆಯನವಿದ್ಯೆಯೊಡನರಿದವಂಗೆ, ಮೋಕ್ಷಂ।
ವಿದ್ಯೆಯಿಂ; ದಾಂಟುವನ ವಿದ್ಯೆಯಿಂ ಮೃತ್ಯುವಂ॥

---

[1] ಏಷ ರಸಾನಾಗ್ಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯದುದ್ಗೀತಃ (ಛಾಂದೋಗ್ಯ ೧-೧-೩)

[2] ಛಾಂದೋಗ್ಯ ೧-೪-೨ ಮತ್ತು ೩

ಶರಣರ ನಿಲುವಿನಂತೆ ಮೋಕ್ಷನಾಗುವುದು ' ಅಂತರಂಗದ ಅರಿವು ಬಹಿರಂಗದ ಕ್ರಿಯೆ ಈ ಉಭಯ ಸಂಪುಟ ಒಂದಾದ ಶರಣಂಗೆ '. ಈಶಾವಾಸ್ಯದ ನಿಲುವಾದರೂ ಇದೇ.

ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾಮಾಗೃಧಃ ಕಸ್ಯಸ್ವಿದ್ಧನಂ ॥

ಎಂಬುದು ಈಶಾವಾಸ್ಯದ ಮೊದಲ ಮಂತ್ರ ; ಅದರ ಕನ್ನಡ ಅನುವಾದವಿದು :

ಈಶನಿಂ ವಾಸ್ಯಮೆನೆ ಧರಣಿ ಸಚರಾಚರಂ ।
ಆಶಿಸದೆ ಪರಧನವ ಭುಜಿಸೀಶನಿತ್ತುದಂ ॥

' ಈಶನಿಂ ವಾಸ್ಯಮೆನೆ ಧರಣಿ ಸ ಚರಾಚರಂ '–ಎಂಬುದು ಅಂತರಂಗದ ಅರಿವು. ಇದೇ ವಿದ್ಯೆ. ' ಆಶಿಸದೆ ಪರಧನವ ಭುಜಿಸೀಶನಿತ್ತುದಂ '–ಎಂಬುದು ಆ ಅರಿವಿಗೆ ತಕ್ಕ ಕ್ರಿಯೆ–ಇದೇ ಅವಿದ್ಯೆ. ,ಮೋಕ್ಷಂ ವಿದ್ಯೆಯಿಂ, ದಾಂಟುವನವಿದ್ಯೆಯಿಂ ಮೃತ್ಯುವಂ '. ಅರಿವು, ಆಚರಣೆಯಲ್ಲಿ ಮುಕ್ತಾಯವಾಗಲು, ಶರಣನ ಮರ್ತ್ಯಲೋಕದ ಬಾಳುವೆಯು ತೊಡಕಿಲ್ಲದೆ ಸುಗಮವಾಗಿ ನಡೆದು ಅವನು ಜೀವನ್ಮುಕ್ತನಾಗುವನು.

ಅವನು ಮರಣ ಕಾಲದಲ್ಲಿ ಮಾರ್ಗಯಾಚನೆಗಾಗಿ ಪ್ರಾರ್ಥಿಸುವ ಎರಡು ಮಂತ್ರಗಳಿಂದ ಈಶಾವಾಸ್ಯವು ಮುಕ್ತಾಯವಾಗುತ್ತದೆ. ಶರೀರವು ಭಸ್ಮಾಂತವಾಗಲೆಂದು ಹೇಳಿ ' ಓಂ ಕ್ರತೋ ಸ್ಮರ, ಕೃತಗ್ಂಸ್ಮರ' ಎಂದು ಮುಮುಕ್ಷುವು ಪ್ರಾರ್ಥಿಸುತ್ತಾನೆ-' ನಾನು ಮಾಡಿದುದೆಲ್ಲವನ್ನು ಸ್ಮರಿಸು (ಓಂಕೃತ)'-ಎಂಬುದು ಈ ಪ್ರಾರ್ಥನೆ. ಓಂಕಾರವು ಜ್ಞಾನ ಸ್ವರೂಪವಾದ ಬ್ರಹ್ಮದ ಸಂಕೇತವಾದರೆ, ಕರ್ಮ ಪ್ರೇರಕವಾದ ಸಂಕಲ್ಪಾತ್ಮಕನಾದ ಕ್ರತುವು ಕರ್ಮದ ಸಂಕೇತ. ವೈದಿಕ ಕರ್ಮಗಳಿಗೆ ಅವಶ್ಯವಾದ ಅಗ್ನಿಯೂ ಕರ್ಮದ ಸಂಕೇತವೇ ಆದುದರಿಂದಲೇ–ಅಗ್ನೇ ನಯ ಸುಪಥಾ ರಾಯೇ ' ಎಂದು ಮೊದಲಾಗುವ ಕಡೆಯ ಮಂತ್ರದಿಂದ ಅಗ್ನಿಯು ಪ್ರಾರ್ಥಿಸಲ್ಪಡುತ್ತಾನೆ. ಶಾಂಕರ ಭಾಷ್ಯದಲ್ಲಿ ಹೇಳಿದಂತೆ-'ಓಂಪ್ರತೀಕಾತ್ಮಕತ್ವಾತ್ ಸತ್ಯಾತ್ಮಕಂ ಅಗ್ನ್ಯಾಖ್ಯಂ ಬ್ರಹ್ಮ ಅಭೇದೇನೋಚ್ಯತೇ' ಇದೇ ಪದಗಳು ಅನಂತಾಚಾರ್ಯರ ಈಶದ ಭಾಷ್ಯದಲ್ಲಿಯೂ ಇವೆ. ಓಂ ಎಂಬುದು ಬ್ರಹ್ಮದ ಪ್ರತೀಕವಾದುದರಿಂದ ಅಗ್ನಿ ಎಂಬ ಹೆಸರಿನ ಬ್ರಹ್ಮವು ಅಭೇದ ದೃಷ್ಟಿಯಿಂದ ಉಕ್ತವಾಗಿದೆಯೆಂದು ಈ ಭಾಷ್ಯಗಳಲ್ಲಿನ ಭಾವ. ಉವಟಾಚಾರ್ಯಭಾಷ್ಯದಲ್ಲಿ 'ಯೋಗಿನ ಆಲಂಬನ ಭೂತಂ ಅಕ್ಷರಂ ಕಥ್ಯತೇ–ಓಂ ನಾಮಾವಾ ಪ್ರತಿಮಾವಾ ಬ್ರಹ್ಮಣಃ'-ಎಂದು ಹೇಳಿರುವುದರಲ್ಲಿ ಓಂಕಾರವು ಯೋಗಿಗಳಿಗೆ ಆಲಂಬನ ಭೂತವೆಂಬುದು ಸ್ಪಷ್ಟ. ಅನಂದಭಟ್ಟೋಪಾಧ್ಯಾಯಕೃತ ಭಾಷ್ಯದಲ್ಲಿ-'ಬ್ರಹ್ಮ ವಿಷ್ಣು ಶಿವಪರಬ್ರಹ್ಮಾತ್ಮಕೋಽಯಮೋಂಕಾರ ಏವಾಂತ್ಯ ಕಾಲ ಉತ್ಪಾದಕ ಇತಿ ದರ್ಶಯತಿ'-ಎಂದು ಹೇಳಿರುವುದರಲ್ಲಿ ಓಂಕಾರದ ಅಕಾರ ಉಕಾರ ಮಕಾರ ಅರ್ಧ

ಮಾತ್ರೆಗಳು ಬ್ರಹ್ಮ-ವಿಷ್ಣು-ಶಿವ-ಪರಬ್ರಹ್ಮಾತ್ಮಕಗಳಾಗಿರುವುದರಿಂದ ಓಂಕಾರವು ಅಂತ್ಯಕಾಲದಲ್ಲಿ ರಕ್ಷಣಕಾರಿಯೆಂದು ಹೇಳಿದೆ.

### – ಕೇನೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಕೇನೋಪನಿಷತ್ತಿನಲ್ಲಿ ಇಂದ್ರನು ಉಮಾದೇವಿಯಿಂದ ಬ್ರಹ್ಮಜ್ಞಾನವನ್ನು ಪಡೆದ ಕಥೆಯಿದೆ. ಇದರ ಶಾಂಕರ ಭಾಷ್ಯದಲ್ಲಿ 'ಉಮೈವ ಹಿಮವತೋ ದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನ ಈಶ್ವರೇಣ ಸಹವರ್ತತ ಇತಿ ಜ್ಞಾತುಂ' ಎಂದರೆ ಹಿಮವಂತನ ಮಗಳಾದ ಉಮೆಯು ಸರ್ವಜ್ಞನಾದ ಈಶ್ವರನೊಡನೆ ಸದಾ ಇರುವವಳಾದುದರಿಂದ ಅವನ ಸ್ವರೂಪವನ್ನು ಬಲ್ಲಳೆಂದೂ ತಿಳಿದು, ಅವಳನ್ನು ಇಂದ್ರನು (ಜ್ಞಾನಾರ್ಜನೆಗಾಗಿ) ಸಮೀಪಿಸಿದನೆಂದು ಹೇಳಿದೆ. 'ಅಲ್ಲದೆ ವಿದ್ಯೈವ ಉಮಾ ವಿದ್ಯಾಸಹಾಯವಾನ್ ಈಶ್ವರ ಇತಿ ಸ್ಮೃತಿಃ' ಎಂದೂ ಸಹಾ ಹೇಳಿ ಉಮೆಯೆಂದರೆ ವಿದ್ಯೆಯೇ ಎಂಬುದನ್ನು ಸ್ಮೃತ್ಯಾಧಾರದಿಂದ ಶಾಂಕರ ಭಾಷ್ಯದಲ್ಲಿ ಸಮರ್ಥಿಸಿದೆ. 'ಓಂಕಾರ ಸ್ವರೂಪಿಣಿ ಅಂಬಾ' ಎಂಬುದೂ ಪ್ರಸಿದ್ಧ ವಿಷಯ; ಹಾಗೆಂದು ಯೋಗವಾಸಿಷ್ಠದಲ್ಲಿ ಹೇಳಿದೆ. ಲಲಿತಾಸಹಸ್ರನಾಮದಲ್ಲಿ ವಿದ್ಯಾ, ಆತ್ಮವಿದ್ಯಾ, ಮಹಾವಿದ್ಯಾ, ಜ್ಞಾನದಾ—ಎಂದು ಮೊದಲಾಗಿ ದೇವಿಯು ವರ್ಣಿಸಲ್ಪಟ್ಟಿದ್ದಾಳೆ. ಆಚಾರ್ಯ ವಿನೋಬಾರವರ 'ಉಪನಿಷತ್ತುಗಳ ಅಧ್ಯಯನ' ಗ್ರಂಥದಲ್ಲಿ ಹೀಗೆ ಹೇಳಿದೆ :—

"ಇಂದ್ರನ ಹೃದಯಾಕಾಶದಲ್ಲಿ ಪ್ರಕಟವಾಗಿ ಅವನಿಗೆ ಬ್ರಹ್ಮೋಪದೇಶವನ್ನು ಮಾಡಿದ ಹಿಮಾಲಯದ ಕನ್ಯೆ ಶಕ್ತಿಸಥದ ಆದಿಮಾತೆ. ಈ ಉಮಾ ಯಾರು? ತೇಜಸ್ಸಿನಿಂದ ಹೊಳೆಯುತ್ತಿರುವ ಉಮೆಯನ್ನು ಭಾಷ್ಯಕಾರರು ವಿದ್ಯಾದೇವಿ ಎಂದಿದ್ದಾರೆ. ಇಂದ್ರನಲ್ಲಿ ಅಥವಾ ಜೀವ-ಈಶ್ವರನನ್ನು ಮೇಳಗೂಡಿಸುವ ಈ ಶಕ್ತಿಯನ್ನು ಬ್ರಹ್ಮವಿದ್ಯೆಯೆನ್ನಲು ಯಾವ ಅಡ್ಡಿಯೂ ಇಲ್ಲ. ಆದರೆ ಆ ಬ್ರಹ್ಮವಿದ್ಯೆಯನ್ನು 'ಉಮಾ' ಎನ್ನುವುದರಲ್ಲಿ ಏನು ವಿಶೇಷ?....ಓಂಕಾರ ಹೇಗೆ ಆಯಿತೋ ಗಮನಿಸಿದರೆ ಅದು ತಿಳಿಯುತ್ತದೆ. ಅ. ಉ. ಮ ಈ ಮೂರು ಅಕ್ಷರಗಳು ಸೇರಿ ಆಯಿತು ಓಂಕಾರ. ಇದೇ ಅಕ್ಷರಗಳನ್ನು ಬೇರೆ ಕ್ರಮದಿಂದ ತೆಗೆದುಕೊಂಡು ಸ್ತ್ರೀಲಿಂಗ ಶಬ್ದವನ್ನು ಮಾಡಿದರೆ 'ಉಮಾ' ಶಬ್ದವಾಗುತ್ತದೆ. ಹಾಗೆ ಉಮಾ ಶಬ್ದದಿಂದ ಓಂಕಾರ ಪರ್ಯಾಯದಿಂದ ಬ್ರಹ್ಮವಿದ್ಯೆ ಸೂಚಿತವಾಗುತ್ತದೆ. ಓಂಕಾರಚಿಂತನ ಬ್ರಹ್ಮವಿದ್ಯಾ ಮಂದಿರದ ಗರ್ಭಗೃಹ."

### – ಕಠೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಯಮನು ನಚಿಕೇತನಿಗೆ ಮಾಡಿದ ಅಧ್ಯಾತ್ಮೋಪದೇಶವನ್ನು ಕಠೋಪನಿಷತ್ತಿನಲ್ಲಿ ಹೇಳಿದೆ. ಉಪದೇಶದ ಪ್ರಾರಂಭದಲ್ಲಿಯೇ ಯಮನು ನಚಿಕೇತನಿಗೆ ಪ್ರಣವ

ವಿಷಯವನ್ನು ಹೇಳಿಸುವುದು ಅಧ್ಯಾತ್ಮ ವಿಷಯದಲ್ಲಿ ಪ್ರಣವಕ್ಕೆ ಈ ಉಪನಿಷತ್ತು ಕೊಟ್ಟಿರುವ ಮಹತ್ವವನ್ನು ಸೂಚಿಸುತ್ತದೆ. ಕಠೋಪನಿಷತ್ತಿನ ಒಂದನೆಯ ಅಧ್ಯಾಯದ ಎರಡನೆಯ ವಲ್ಲಿಯ ೧೫, ೧೬, ಮತ್ತು ೧೭ನೆಯ ಮಂತ್ರಗಳಲ್ಲಿ[1] ಹೇಳಿರುವ ಪ್ರಣವ ಪ್ರಶಂಸೆಯ ಅಭಿಪ್ರಾಯವಿದು :– ವೇದಗಳೆಲ್ಲವೂ ಪ್ರತಿಪಾದಿಸುವ ಸ್ಥಾನವು ಓಂಕಾರವೇ. ಆ ಸ್ಥಾನವನ್ನು ಪಡೆಯಲೋಸುಗವೇ ತಪಸ್ಸನ್ನಾಚರಿಸುವುದು; ಅದಕ್ಕಾಗಿಯೇ ಬ್ರಹ್ಮಚರ್ಯದಿಂದ ನಡೆಯುವುದು ಸಹಾ. ಇದೇ ೧೫ನೆಯ ಮಂತ್ರದ ಅಭಿಪ್ರಾಯ. ಬಯಸಿದುದನ್ನು ಕೊಡುವುದು ಓಂಕಾರ, ಅದೇ ಅಕ್ಷರ, ಪರವು—ಎಂಬುದು ೧೬ನೆಯ ಮಂತ್ರದ ಉಪದೇಶ. ಪರವೂ ಶ್ರೇಷ್ಠವೂ ಆದ ಈ ಓಂಕಾರಾವಲಂಬನವನ್ನು ತಿಳಿದುಕೊಂಡರೆ ಬ್ರಹ್ಮಲೋಕದಲ್ಲಿ ಮಹಿಮೆಯು ದೊರೆಯುವುದು ಎಂಬುದು ೧೭ನೆಯ ಮಂತ್ರದ ಉಪದೇಶ.

### – ಮುಂಡಕೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಎರಡನೆಯ ಮುಂಡಕದ ಎರಡನೆಯ ಖಂಡದ ಮೂರುನಾಲ್ಕನೆಯ ಮಂತ್ರಗಳಲ್ಲಿ ಪ್ರಣವ ವಿಷಯದ ಸುಂದರವಾದ ಉಪಮೆಯಿದೆ.[2] ಉಪನಿಷತ್ತಿನಲ್ಲಿ ಹೇಳಿರುವ ಪ್ರಣವವೆಂಬ ಧನುಸ್ಸನ್ನು ಹಿಡಿದು, ಉಪಾಸನೆಯಿಂದ ಹರಿತಗೊಳಿಸಿದ ಆತ್ಮವೆಂಬ ಬಾಣವನ್ನು ಹೂಡಿ, ಪರಬ್ರಹ್ಮವನ್ನು ಗುರಿಯಾಗಿಟ್ಟುಕೊಂಡು, ಅದರ ಭಾವನೆಯಲ್ಲಿಯೇ ಇರುವ ಏಕಾಗ್ರಚಿತ್ತದಿಂದ, ಎಚ್ಚರ ತಪ್ಪದೆ ತನ್ಮಯವಾಗಿ ಹೊಡೆಯಬೇಕು. ಇಂತಹ ಪ್ರಣವೋಪಾಸನೆಯಿಂದ ಬ್ರಹ್ಮೈಕ್ಯವಾಗುವುದೆಂಬುದೇ ಇದರ ಭಾವ. ಏಕಾಗ್ರಚಿತ್ತದಿಂದ ಹೊಡೆದ ಬಾಣವು ಗುರಿಯನ್ನು ಹೇಗೆ ಸೇರು

---

[1] ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ
ಬ್ರವೀಮ್ಯೋಮಿತ್ಯೇತತ್ ॥
ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಂ
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ ೧೬ ॥
ಏತದಾಲಂಬನಂ ಶ್ರೇಷ್ಠಮೇ ತದಾಲಂಬನಂ ಪರಂ
ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥ ೧೭ ॥

[2] ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ ಶರಂ ಹ್ಯುಪಾಸಾನಿಶಿತಂ ಸಂಧಯೀತ
ಆಯಮ್ಯ ತದ್ಭಾವಗತೇನ ಚೇತಸಾ ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ
ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ
ಅಪ್ರಮತ್ತೇನ ವೇದ್ಧವ್ಯಂ ಶರವತ್ ತನ್ಮಯೋ ಭವೇತ್

ತ್ರದೆಯೋ ಹಾಗೆ ಏಕಾಗ್ರಚಿತ್ತದಿಂದ ಪ್ರಣವೋಪಾಸನೆಯನ್ನು ಮಾಡಿ ಮೋಕ್ಷವನ್ನು ಪಡೆಯಬೇಕೆಂಬುದು ಈ ಉಪನಿಷತ್ತಿನ ಉಪದೇಶ

– ಪ್ರಶ್ನೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಪ್ರಶ್ನೋಪನಿಷತ್ತಿನಲ್ಲಿ ಸತ್ಯಕಾಮನು ಪಿಪ್ಪಲಾದನನ್ನು, ಸಾಯುವವರೆಗೂ ಓಂಕಾರೋಪಾಸನೆಯನ್ನು ಮಾಡುವವನಿಗೆ ಯಾವ ಲೋಕವು ಪ್ರಾಪ್ತವಾಗುವುದು ?- ಎಂದು ಪ್ರಶ್ನಿಸಲು ಪಿಪ್ಪಲಾದನು ಕೊಡುವ ಉತ್ತರವು ಉಲ್ಲೇಖಾರ್ಹವಾಗಿದೆ. ಪಿಪ್ಪಲಾದನ ಉತ್ತರವಿದು–ಓಂಕಾರವು ಪರಬ್ರಹ್ಮಕ್ಕೂ ಅಪರಬ್ರಹ್ಮಕ್ಕೂ ಪ್ರತೀಕ ವಾಗಿದೆ. ಸಾಧಕನು ಇವುಗಳಲ್ಲಿ ಯಾವುದಾವರೊಂದನ್ನು ಅವಲಂಬಿಸಿ ಅದನ್ನು ಪಡೆದುಕೊಳ್ಳುತ್ತಾನೆ. ಓಂಕಾರದ ಒಂದು ಮಾತ್ರೆಯನ್ನು ಅರಿತು ಅಭಿಧ್ಯಾನ ಮಾಡಿದರೆ ಅವನನ್ನು ನರಲೋಕಕ್ಕೆ ಋಕ್ಕುಗಳು ಒಯ್ಯುತ್ತವೆ. ಅಲ್ಲಿ ತಪಸ್ಸು ಮತ್ತು ಬ್ರಹ್ಮಚರ್ಯೆಗಳಿಂದ ಮಹತ್ತನ್ನು ಪಡೆಯುತ್ತಾನೆ. ಓಂಕಾರದ ಎರಡು ಮಾತ್ರೆಗಳನ್ನು ಅರಿತು ಅಭಿಧ್ಯಾನಮಾಡಿದರೆ, ಅವನನ್ನು ಯಜುಸ್ಸುಗಳು ಸೋಮ ಲೋಕಕ್ಕೆ ಒಯ್ಯುತ್ತವೆ; ಅವನು ಅಲ್ಲಿ ವಿಭೂತಿಯನ್ನು ಅನುಭವಿಸಿ ಹಿಂದಿರುಗು ತ್ತಾನೆ. ಅವನು ಓಂಕಾರದ ಮೂರು ಮಾತ್ರೆಗಳನ್ನು ಅರಿತು ಪರಮ ಪುರುಷನನ್ನು ಅಭಿಧ್ಯಾನ ಮಾಡಿದರೆ ಅವನು ಪಾಪಗಳಿಂದ ಬಿಡುಗಡೆ ಹೊಂದಿ ತೇಜಸ್ಸಾದ ಸೂರ್ಯನನ್ನು ಸೇರುವನು. ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡು ತ್ತಾನೆ. ಅಲ್ಲಿ ಪುರಿಶಯನಾದ ಪರಬ್ರಹ್ಮವನ್ನು ಅರಿತುಕೊಂಡು ಮುಕ್ತನಾಗುತ್ತಾನೆ. ಓಂಕಾರದ ಮೂರುಮಾತ್ರೆಗಳು ಅನವಿಪ್ರಯುಕ್ತವಾಗಿ ಎಂದರೆ ಬಿಡಿಬಿಡಿಯಾಗಿ ಒಂದೊಂದು ವಿಷಯದಲ್ಲಿ ಪ್ರಯೋಗಿಸಲ್ಪಟ್ಟರೆ, ಅವು ಮೃತ್ಯುವಂತವಾಗುವುವಾ ದುದರಿಂದ ಹಾಗೆ ಮಾಡಿದವನಿಗೆ ಮೋಕ್ಷವಾಗುವುದಿಲ್ಲ. ಓಂಕಾರದ ಪೂರ್ಣ ಸ್ವರೂಪವನ್ನೂ ಅರಿತು ಅವಿಪ್ರಯುಕ್ತವಾಗಿ ಒಟ್ಟಾಗಿ ಉಪಾಸನೆ ಮಾಡಿದರೆ ಮೋಕ್ಷ ವಾಗುವುದು. ವೇದತ್ರಯಗಳಿಂದ ತಿಳಿದುಬರುವ ಲೋಕತ್ರಯವನ್ನೂ ಪಡೆಯು ವುದು ಓಂಕಾರವೆಂಬ ಸಾಧನದಿಂದಲೇ ಮೋಕ್ಷವನ್ನು ಪಡೆಯುವುದೂ ಓಂಕಾರ ಸಾಧನದಿಂದಲೇ[1]

---

[1] ಋಗ್ಭಿರೇತಂ ಯಜುರ್ಭಿರಂತರಿಕ್ಷಂ
ಸಾಮಭಿರ್ಯತ್ ತತ್ ಕವಯೋ ವೇದಯಂತೇ ।
ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್
ಯತ್ ತಚ್ಛಾಂತಮಜರಮಮೃತಮಭಯಂ ಪರಂ ಚೇತಿ

– ತೈತ್ತಿರೀಯೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ತೈತ್ತಿರೀಯೋಪನಿಷತ್ತಿನ ಶಿಕ್ಷಾವಲ್ಲಿಯ ಅಷ್ಟಮಾನುವಾಕದಲ್ಲಿ ಓಂಕಾರೋಪಾಸನೆಯ ವಿಷಯವಿದೆ. ಓಂ–ಎಂಬುದೇ ಬ್ರಹ್ಮ; ಓಂ–ಎಂಬುದೇ ಎಲ್ಲವು; ಓಂಕಾರೋಚ್ಚಾರಣೆಯಿಂದಲೇ ಎಲ್ಲ ಕರ್ಮಗಳು ಮಾಡಲ್ಪಡುತ್ತವೆ. ಓಂಕಾರವನ್ನು ಬ್ರಹ್ಮವೆಂದು ಉಪಾಸನೆಮಾಡಿ ಮೋಕ್ಷವನ್ನು ಪಡೆಯಬೇಕೆಂಬುದು ಈ ಉಪನಿಷತ್ತಿನ ಆದೇಶ [1]

– ಶ್ವೇತಾಶ್ವತರೋಪನಿಷತ್ತಿನಲ್ಲಿ ಪ್ರಣವ ಪ್ರಶಂಸೆ –

ಶ್ವೇತಾಶ್ವತರೋಪನಿಷತ್ತಿನ ಪ್ರಥಮಾಧ್ಯಾಯದ ೧೩ ಮತ್ತು ೧೪ನೆಯ ಮಂತ್ರಗಳಲ್ಲಿ ಪರಮಾತ್ಮಾಭಿವ್ಯಕ್ತಿಯನ್ನು ಉಂಟುಮಾಡುವ ಪ್ರಣವವನ್ನು, ಅರಣಿಯಲ್ಲಿ ಬೆಂಕಿಯನ್ನು ಹೊರಹೊಮ್ಮಿಸುವ ಉತ್ತರಾರಿಣಿಗೆ ಹೋಲಿಸಿದೆ. ಸ್ವದೇಹವನ್ನು ಅರಣಿಯನ್ನಾಗಿಯೂ ಪ್ರಣವವನ್ನು ಉತ್ತರಾರಣಿಯನ್ನಾಗಿಯೂ ಮಾಡಿ, ಜ್ಞಾನ ನಿರ್ಮಥನಾಭ್ಯಾಸದಿಂದ ಪರಮಾತ್ಮನ ದರ್ಶನವನ್ನು ಪಡೆಯಬೇಕೆಂದು ಹೇಳಿದೆ. [2]

– ಭಗವದ್ಗೀತೆಯಲ್ಲಿ ಪ್ರಣವ ಪ್ರಶಂಸೆ –

ಭಗವದ್ಗೀತೆಯ ಅಷ್ಟಮಾಧ್ಯಾಯದಲ್ಲಿ, – ಪರಮಾತ್ಮಾನುಧ್ಯಾನದೊಡನೆ, ಬ್ರಹ್ಮವಾಚಕವಾದ ಓಂಕಾರದ ಉಚ್ಚಾರಣೆಯನ್ನು ಮಾಡುತ್ತ ಪ್ರಾಣವನ್ನು ಬಿಡುವವರು ಪರಮಗತಿಯನ್ನು ಹೊಂದುವರೆಂದು ಹೇಳಿದೆ.[3] ಹದಿನೇಳನೆಯ ಅಧ್ಯಾಯದಲ್ಲಿ ತಪಃಕ್ರಿಯೆಗಳು ಓಂಕಾರೋಚ್ಚಾರದಿಂದ ಮಾಡಲ್ಪಡುತ್ತವೆಯೆಂದು ಹೇಳಿದೆ. ಏಳನೆಯ ಅಧ್ಯಾಯದಲ್ಲಿ ಪ್ರಣವಃ ಸರ್ವ ವೇದೇಷು–ಎಂದು ಹೇಳಿರುವುದರಲ್ಲಿ ಪ್ರಣವವು ಸರ್ವವೇದಸಾರವೆಂಬ ಅಭಿಪ್ರಾಯವಿದೆ.

---

[1] ಓಮಿತಿಬ್ರಹ್ಮ; ಓಮಿತೀದಗ್ಂ ಸರ್ವಂ ಓಮಿತ್ಯೇತದನುಕೃತಿಃ....
ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ; ಬ್ರಹ್ಮೈವೋ ಪಾಪ್ನೋತಿ.

[2] ವಹ್ನೇರ್ಯಥಾ ಯೋನಿಗತಸ್ಯ ಮೂರ್ತಿರ್ನದೃಶ್ಯತೇ ನೈವಚ ಲಿಂಗನಾಶಃ।
ನ ಭೂಯ ಏವೇಂಧನ ಯೋನಿಗೃಹ್ಯಸ್ತದ್ವೋಭಯಂ ವೈ ಪ್ರಣವೇನ ದೇಹೇ॥
ಸ್ವದೇಹ ಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ।
ಜ್ಞಾನ ನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್॥

[3] ಓಮಿತ್ಯೇಕಾಕ್ಷರಂ ಬ್ರಹ್ಮವ್ಯಾಹರನ್ ಮಾಮನುಸ್ಮರನ್।
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಗತಿಂ॥

## – ಜ್ಞಾನದೇವನಿಂದ ಪ್ರಣವ ಪ್ರಶಂಸೆ –

ಜ್ಞಾನದೇವನ ಜ್ಞಾನೇಶ್ವರಿಯು ಭಗವದ್ಗೀತೆಯ ಮೇಲಿನ ಸ್ವಾರಸ್ಯವಾದ ವ್ಯಾಖ್ಯಾನವೆನ್ನಬಹುದು. ಜ್ಞಾನದೇವನ ಕಲ್ಪನೆಯಲ್ಲಿ ಓಂಕಾರವು ಎಲ್ಲಕ್ಕೂ ಮೊದಲು ನಾವು ಪೂಜಿಸುವ ವಿನಾಯಕನ ಪ್ರತೀಕವಾಗಿದೆ.

ಅಕಾರ ಚರಣ ಯುಗಳ । ಉಕಾರ ಉದರ ವಿಶಾಲ ।
ಮಕಾರ ಮಹಾಮಂಡಲ । ಮಸ್ತಕಾಕಾರೇ - ॥ ಜ್ಞಾ ೧-೧೯

ಅಕಾರವೇ ಚರಣದ್ವಯ, ಉಕಾರವು ವಿಶಾಲವಾದ ಉದರ, ಮಕಾರವು ಮಸ್ತಕಾಕಾರ–ಹೀಗಿದೆ ಜ್ಞಾನದೇವನ ಕಲ್ಪನೆ. ‘ ವಾತಾಪಿ ಗಣಪತಿಂ ’ ಎಂದು ಪ್ರಾರಂಭವಾಗುವ ಮುತ್ತುಸ್ವಾಮಿ ದೀಕ್ಷಿತರ ಕೀರ್ತನೆಯಲ್ಲಿ ‘ ಪ್ರಣವ ಸ್ವರೂಪ ವಕ್ರತುಂಡಂ’ ಎಂದು ಹೇಳಿದೆ. ಮಾಂಡೂಕ್ಯದ ಮಾಧ್ವ ಭಾಷ್ಯದಲ್ಲಿ ‘ವೈಶ್ವಾನರೋ ಜಾಗರಿತಸ್ಥಾನಗೋ ಗಜವಕ್ತ್ರಕಃ ಎಂದು ಹೇಳಿರುವುದನ್ನು ಇಲ್ಲಿ ತುಲನೆಗಾಗಿ ಉಲ್ಲೇಖಿಸಲಾಗಿದೆ.

# ' ಕಾಯಕ ' ತತ್ವ

ಎಂ. ಚಿದಾನಂದಮೂರ್ತಿ

ಮನುಷ್ಯನ ವೃತ್ತಿಗೆ, ತನ್ಮೂಲಕ ಅವನ ವ್ಯಕ್ತಿತ್ವಕ್ಕೆ ಗೌರವವನ್ನು ತಂದು ಕೊಟ್ಟದ್ದು ಹನ್ನೆರಡನೆಯ ಶತಮಾನದ ವೀರಶೈವ ಧಾರ್ಮಿಕ ನಾಯಕರ ದೊಡ್ಡ ಸಾಧನೆಗಳಲ್ಲೊಂದು. ಅವರು ಆಚರಿಸಿ, ಬೋಧಿಸಿದ ' ಕಾಯಕ ' ತತ್ವ ಇಂದಿನ ಹೊಸ ದೃಷ್ಟಿಗೂ ಮಾನ್ಯವಾಗಿರುವುದು ಅದರ ಶ್ರೇಷ್ಠತೆಗೂ ಸಾರ್ವಕಾಲೀನತೆಗೂ ಸಾಕ್ಷಿಯಾಗಿದೆ.

' ಕಾಯಕ ' ವೆಂದರೇನು ? ಇದು ಸಂಸ್ಕೃತದ 'ಕಾಯ'ದಿಂದ (ದೇಹ) ಬಂದಿರುವ ಪದನೆಂಬುದು ಮೇಲ್ನೋಟಕ್ಕೇ ಸ್ಪಷ್ಟವಾಗಿದೆ. 'ಕಾಯಕ'ವೆಂದರೆ ಮೂಲತಃ 'ದೇಹಕ್ಕೆ ಸಂಬಂಧಿಸಿದ್ದು' ಎಂದು ಮಾತ್ರ ಅರ್ಥವಾಗುತ್ತದೆ. ಆದರೆ ಈ ಪದವನ್ನು ಒಂದು ನಿರ್ದಿಷ್ಟಾರ್ಥದಲ್ಲಿ, ಪಾರಿಭಾಷಿಕವಾಗಿ ವೀರಶೈವ ವಚನಕಾರರಿಗಿಂತ ಹಿಂದೆ ಯಾರಾದರೂ ಬಳಸಿದ್ದರೇ ಎಂಬುದು ಸಂದೇಹಾಸ್ಪದ. ವಚನಕಾರರು ಅನೇಕ ಸಂಸ್ಕೃತ ಪದಗಳನ್ನು ಹೊಸ ಹೊಸ ಅರ್ಥಗಳಲ್ಲಿ ಚಲಾವಣೆಗೆ ತಂದರು ಎಂಬುದನ್ನು ಜ್ಞಾಪಿಸಿಕೊಂಡರೆ, 'ಕಾಯಕ'ವೆಂಬುದು ಅವರು ಹೊಸ ಅರ್ಥದಲ್ಲಿ ಬಳಕೆಗೆ ತಂದ ಶಬ್ದ ನಾಣ್ಯವೆಂಬ ಊಹೆಗೆ ಎಡೆಗೊಡುತ್ತದೆ.

ಅವರ ಪ್ರಕಾರ, ಕಾಯಕವು ದೈಹಿಕ (ಅಥವಾ ಮಾನಸಿಕ) ಶ್ರಮವನ್ನು ಒಳಗೊಂಡಿರುವ ವೃತ್ತಿಯನ್ನು ಸೂಚಿಸುತ್ತದೆ. ಪ್ರತಿಯೊಬ್ಬ ಮನುಷ್ಯನೂ ಈ ಲೋಕದಲ್ಲಿ ಬದುಕಲು ಅರ್ಹನಾಗಬೇಕಾದರೆ ತನಗೆ ಅನುಗುಣವಾದ ಅಥವಾ ಸಾಧ್ಯವಾದ ವೃತ್ತಿಯೊಂದನ್ನು ಅವಲಂಬಿಸಲೇಬೇಕು. ಇಡೀ ವಿಶ್ವವನ್ನೇ ಸೃಷ್ಟಿಸಿರುವ ಭಗವಂತನೂ ಒಂದು ವೃತ್ತಿಯನ್ನು ಅವಲಂಬಿಸಿದವನೇ ಆಗಿದ್ದಾನೆ ! ತಾನು ವಾಸ್ತವವಾಗಿ ಕಷ್ಟಪಡದೆ, ಪರಾವಲಂಬಿಯಾಗುವುದನ್ನು ಅಥವಾ ಇತರರ ಶ್ರಮವನ್ನು ತನ್ನ ಸುಖಕ್ಕೆ ತಿರುಗಿಸಿಕೊಳ್ಳುವ ಜಾಣತನವನ್ನು ಕಾಯಕ ತತ್ವ ಒಪ್ಪುವುದಿಲ್ಲ.

ಹೀಗೆ ಕಾಯಕವೆನ್ನುವುದು ಪ್ರತಿಯೊಬ್ಬನೂ ಕೈಗೊಳ್ಳಲೇಬೇಕಾದ್ದು ಎಂಬ ತತ್ವವನ್ನು ಒಪ್ಪಿಕೊಂಡರೆ, ಆಗ ಬೇರೆ ಬೇರೆಯವರು ಸ್ವಾಭಾವಿಕವಾಗಿಯೋ ಅನಿವಾರ್ಯವಾಗಿಯೋ ಸ್ವ-ಇಚ್ಛೆಯಿಂದಲೋ ಕೈಗೊಂಡಿರುವ ಬೇರೆ ಬೇರೆ ವೃತ್ತಿಗಳಲ್ಲಿ ಕೀಳು ಮೇಲನ್ನು ಎಣಿಸುವ ಪ್ರಶ್ನೆಯೇ ಬರುವುದಿಲ್ಲ. ವೃತ್ತಿಯೆನ್ನುವುದು ವ್ಯಕ್ತಿಯ ಜೀವನೋಪಾಯಕ್ಕೆ ಮಾರ್ಗ, ಸಮಾಜದ ಸುಸ್ಥಿತಿಗೆ ಅತ್ಯಗತ್ಯ ಎಂಬುದನ್ನು ಗಮನಿಸಿದರೆ, ರಾಜ್ಯದಲ್ಲಿ ಭಂಡಾರದಲ್ಲಿ ಮುಖ್ಯಾಧಿಕಾರಿಯ ವೃತ್ತಿ ಬೀದಿಯಲ್ಲಿ ಕುಳಿತು ಚಪ್ಪಲಿ ಹೊಲೆಯುವವನ ವೃತ್ತಿಗಿಂತ ತತ್ವಶಃ ಮೇಲೂ ಅಲ್ಲ, ಕೀಳೂ ಅಲ್ಲ. ಇವರಿಬ್ಬರಲ್ಲಿ ಒಟ್ಟು ಸಮಾಜಕ್ಕೆ ಯಾರು ತಾನೇ ಬೇಡವಾಗುತ್ತಾರೆ ? ಇಂತಹ ದೃಷ್ಟಿಯೊಂದನ್ನು ಬೆಳಸಿಕೊಳ್ಳಲು ಸಾಧ್ಯವಾದರೆ, ವ್ಯಕ್ತಿ ತಾನು ಅನುಸರಿಸುವ ವೃತ್ತಿಯ ವಿಷಯದಲ್ಲಿ ತೃಪ್ತ ಮನೋಭಾವವನ್ನು, ಶ್ರದ್ಧೆಯನ್ನು ಬೆಳಸಿಕೊಳ್ಳಬಹುದು. ಇದು ಒಬ್ಬ ವ್ಯಕ್ತಿ ಕೊನೆಯವರೆಗೆ ಒಂದೇ ವೃತ್ತಿಯನ್ನು ಅನುಸರಿಸಿಕೊಂಡು ಹೋಗಬೇಕೆಂಬ ಕಡ್ಡಾಯವನ್ನು ವಿಧಿಸುವುದಿಲ್ಲ. ಆದರೆ ಎಲ್ಲಿಯವರೆಗೆ ಯಾವ ವೃತ್ತಿಯನ್ನು ಅನುಸರಿಸಿರುವನೋ ಅಲ್ಲಿಯವರೆಗೆ ಅದರಲ್ಲಿ ಶ್ರದ್ಧೆಯನ್ನು ಪಡೆದಿರಬೇಕು ಎಂಬುದನ್ನು ಮಾತ್ರ ಒತ್ತಿ ಹೇಳುತ್ತದೆ. ಇನ್ನೊಂದು ವೃತ್ತಿ, ಪದವಿ ಸಿಗಲಿಲ್ಲವಲ್ಲವೆಂಬ ಕೊರತೆ ಅಥವಾ ಅಸೂಯೆ ಅವನನ್ನು ಕಾಡಿಸುವುದಿಲ್ಲ. ವೃತ್ತಿಯೆನ್ನುವುದು ಅವನಿಗೆ ಕರ್ತವ್ಯವಾಗಿ, ಜವಾಬ್ದಾರಿಯಾಗಿ ಪರಿಣಮಿಸುತ್ತದೆ.

ವ್ಯಕ್ತಿ ತನ್ನ ವೃತ್ತಿಯ ವಿಷಯದಲ್ಲಿ ಜೀಸರವನ್ನು ಬೆಳಸಿಕೊಳ್ಳಲು ಸಮಾಜವೂ ಕಾರಣವಾಗಿರುತ್ತದೆ. ಆದರೆ ಸಮಾಜ ಎಲ್ಲ ವೃತ್ತಿಗಳ ಬಗ್ಗೆ ಗೌರವವನ್ನು ತಾಳಿ, ಯಾವುದೇ ವೃತ್ತಿಯನ್ನು ಕಡೆಗಣಿಸುವುದನ್ನು, ಇನ್ನೊಂದನ್ನು ಮೇಲೆಣಿಸುವುದನ್ನು ಬಿಟ್ಟಾಗ, ಸಾಮಾಜಿಕವಾಗಿ ಕೆಳಗಿನ ವೃತ್ತಿಗಳನ್ನು ಅವಲಂಬಿಸಿರುವವನಿಗೂ ಆತ್ಮವಿಶ್ವಾಸ, ಆತ್ಮಗೌರವಗಳನ್ನು ಅಭಿಮಾನವನ್ನು ತಂದು ಕೊಟ್ಟಂತಾಗುತ್ತದೆ.

ನಿಜವಾದ ಅಭಿಮಾನವೆನ್ನುವುದಕ್ಕೆ ವಾಸ್ತವವಾಗಿ ಎರಡು ಮುಖಗಳಿವೆ: ಒಂದು–ನನ್ನನ್ನು ನಾನು ಇತರರಿಗಿಂತ ಕಡಮೆಯೇನೂ ಅಲ್ಲವೆಂದು ಭಾವಿಸುವುದು. ಹಾಗೆಯೇ, ಇತರರೂ ಕೂಡ ನನ್ನಿಂದ ಕಡಮೆಯೇನೂ ಅಲ್ಲವೆಂದು ಭಾವಿಸುವುದು. ಎಂದರೆ, ತನ್ನಂತೆ ಇತರರನ್ನೂ ಇತರರಂತೆ ತನ್ನನ್ನೂ ಕೇವಲ ಮನುಷ್ಯ ಎಂಬ ದೃಷ್ಟಿಯಿಂದ ನೋಡುವುದು. ಇಂತಹ ಅಭಿಮಾನ ಹೇಳುವಷ್ಟು ಬೆಳಸಿಕೊಳ್ಳುವುದು ಸುಲಭವಲ್ಲ. ಆದರೆ, ಕಾಯಕ ತತ್ವ ಇಂತಹ ಆತ್ಮಾಭಿಮಾನವನ್ನು ಬೋಧಿಸುತ್ತದೆ; ಮತ್ತು, ಮುಂದೆ ನೋಡುವಂತೆ, ಇಂತಹ ಆತ್ಮಾಭಿಮಾನವನ್ನು ಬೆಳಸಲು ವೀರಶೈವ ಧಾರ್ಮಿಕ ನಾಯಕರು ಶ್ರಮಿಸಿದರು.

ಯಾವಾಗ ವ್ಯಕ್ತಿಗೆ ತನ್ನ ವೃತ್ತಿಯ ಬಗ್ಗೆ ಆಲಸ್ಯ, ಅಸಡ್ಡೆಗಳ ಬದಲು ಒಲವು

ಶ್ರದ್ಧೆಗಳು ಮೂಡುತ್ತವೆಯೋ ಆಗ ಆವನು ಹೆಚ್ಚು ಚಟುವಟಿಕೆಯಿಂದ ಕೆಲಸಮಾಡುತ್ತಾನೆ. ದೇಶದ ಆರ್ಥಿಕಾಭಿವೃದ್ಧಿಗೂ ಕಾರಣಕರ್ತನಾಗುತ್ತಾನೆ.

ಇಷ್ಟೂ ಕಾಯಕ ತತ್ವದ ಒಂದು ಮುಖ ಮಾತ್ರ. ಅದಕ್ಕೆ ಇನ್ನೊಂದು ಮುಖವೂ ಉಂಟು, ವ್ಯಕ್ತಿ ತಾನು ಅನುಸರಿಸಿರುವ ಯಾವುದೇ ವೃತ್ತಿ ತನ್ನ ಆಧ್ಯಾತ್ಮಿಕ ಸಾಧನೆಯ ಒಂದು ಭಾಗವೆಂದು ಭಾವಿಸಬೇಕು. ಆಧ್ಯಾತ್ಮದ ಸ್ಪರ್ಶವಿಲ್ಲದಿದ್ದರೆ ವೃತ್ತಿ ವೃತ್ತಿಯಾಗಿ ಉಳಿಯುವುದೇ ಹೊರತು ಕಾಯಕವೆಂಬ ಹೆಸರಿಗೆ ಅರ್ಹವಾಗಲಾರದು.

ಇದಕ್ಕೆ ಸ್ಪಷ್ಟೀಕರಣ ಅಗತ್ಯ. ವ್ಯಕ್ತಿಗಳು ತಮ್ಮ ವೃತ್ತಿಗಳನ್ನು ಅವಲಂಬಿಸುವುದು ತಮ್ಮ ಸಂಸಾರದ ನಿರ್ವಹಣೆಗಾಗಿ ತಾನೇ. ವ್ಯಕ್ತಿಗೆ ಆವನ ಪರಿಮಿತವಾದ 'ಸಂಸಾರ'ವೊಂದಿರುವಂತೆ, ಆ ಸಂಸಾರದ ಸುತ್ತ ಮುತ್ತ ದೊಡ್ಡ ಪ್ರಪಂಚವೂ ಇದೆ ಎಂಬುದನ್ನು ಮರೆಯಬಾರದು. ಆ ದೊಡ್ಡ ಪ್ರಪಂಚವನ್ನೇ ವೀರಶೈವರು ಗುರು, ಲಿಂಗ, ಜಂಗಮ ಎಂದು ಕರೆದರು. ಎಂದರೆ, ವ್ಯಕ್ತಿ ತನ್ನ ಸಂಸಾರದ ಬಗ್ಗೆ ಜವಾಬ್ದಾರನಾಗಿರುವಂತೆಯೇ, ಗುರು, ಲಿಂಗ, ಜಂಗಮದ ಬಗ್ಗೆಯೂ ಅವನಿಗೆ ಒಂದು ಹೊಣೆಯಿದೆ. ವ್ಯಕ್ತಿಗೆ ದೀಕ್ಷೆಯನ್ನು ಕೊಟ್ಟು ಸನ್ಮಾರ್ಗಕ್ಕೆ ದಾರಿದೀಪವಾದ ವ್ಯಕ್ತಿಯೇ 'ಗುರು'. ಇಡೀ ಜಗತ್ತನ್ನು ಸೃಷ್ಟಿಸಿ ಅದರ ಪಾಲಕ ಶಕ್ತಿಯಾಗಿರುವ ಭಗವಂತನೇ 'ಲಿಂಗ.' ವಚನಗಳಲ್ಲಿ 'ಜಂಗಮ' ಎನ್ನುವ ಮಾತು ಸಾಮಾನ್ಯವಾಗಿ ನಪುಂಸಕ ಲಿಂಗದಲ್ಲಿ ಬಳಕೆಯಾಗಿರುವುದರಿಂದ, ಜಂಗಮವು ಒಂದು ವರ್ಗವನ್ನು ಅಥವಾ ಗುಂಪನ್ನು ಸೂಚಿಸುತ್ತದೆ. ಅದು ಪೂಜ್ಯ ವ್ಯಕ್ತಿಗಳ ಮೊತ್ತವನ್ನು ಹೇಳುತ್ತದೆ ಎಂದು ಬೇಕಾದರೆ ಭಾವಿಸಬಹುದು, ಅಥವಾ ನಮ್ಮ ಸುತ್ತಮುತ್ತಣ ಸಮಾಜವನ್ನು ಪ್ರತಿನಿಧಿಸುತ್ತದೆ ಎಂದು ಬೇಕಾದರೆ ಭಾವಿಸಬಹುದು. ವಚನಕಾರರು ಗುರುವಿಗೆ ತನುವನ್ನೂ, ಲಿಂಗಕ್ಕೆ ಮನವನ್ನೂ, ಜಂಗಮಕ್ಕೆ ಧನವನ್ನೂ ಸವೆಸಲೇಬೇಕು ಎಂದು ವಿಧಿಸಿದ್ದಾರೆ. ಎಂದರೆ, ವ್ಯಕ್ತಿ ತನ್ನ ವೃತ್ತಿಯ ಫಲವಾಗಿ ಬರುವ ಆದಾಯದ ಒಂದು ಭಾಗವನ್ನು ತನ್ನ ಸುತ್ತಮುತ್ತಣ ಸಮಾಜದೊಡನೆ ಹಂಚಿಕೊಳ್ಳಲು ಸಿದ್ಧನಾಗಿರಬೇಕು. ತ್ಯಾಗಮನೋಭಾವದಿಂದ, ಅರ್ಪಣಬುದ್ಧಿಯಿಂದ ಅನುಸರಿಸುವ ವೃತ್ತಿ ಕಾಯಕವೆನ್ನಿಸಿಕೊಳ್ಳುತ್ತದೆ. ತಾನು ಊಟಮಾಡುವ ಮೊದಲು, ಯಥಾಶಕ್ತಿ ಜಂಗಮವನ್ನು ಕರೆದು, ಅದನ್ನು ತೃಪ್ತಿಪಡಿಸಿ ಬಳಿಕ ಉಣ್ಣಬೇಕೆಂದು ಕಾಯಕ ತತ್ವ ಹೇಳುತ್ತದೆ. ಜಂಗಮವು ತೃಪ್ತಿ ಪಡೆದರೆ ಪರಮಾತ್ಮನಿಗೆ ತೃಪ್ತಿಯಾಗುತ್ತದೆ ಎಂದು ವೀರಶೈವರು ನಂಬಿದ್ದರು. ಕೆಳಕ್ಕೆ ನೀರೆರೆದರೆ ಮರದಲ್ಲಿ ಮೇಲೆ ಹೇಗೆ ಫಲ ಕಾಣಿಸುವುದೋ ಹಾಗೆ. ವ್ಯಕ್ತಿ ಕಾಯಕ ಮಾಡುವಾಗ, ಒಮ್ಮೊಮ್ಮೆ ಪರಮಾತ್ಮನ ಧ್ಯಾನ ಮರೆತರೂ ಅಂಥಹ ತಪ್ಪೇನೂ ಆಗುವುದಿಲ್ಲ

ಎಂದು ಭಾವಿಸಿದ್ದರು. ಶ್ರದ್ಧೆಯಿಂದ, ತ್ಯಾಗದಿಂದ ಮಾಡುವ ವೃತ್ತಿಗಿಂತ ದೊಡ್ಡ ಧ್ಯಾನ, ಸಾಧನೆ ಯಾವುದಿದೆ? "ಮಾಡುವ ಮಾಟದಿಂದಲೆ ಬೇರೊಂದನರಿಯಬೇಕು" ಎಂದು ಒಬ್ಬ ವಚನಕಾರ ನುಡಿದಿದ್ದಾನೆ. ತಾನು ಹಿಡಿದಿರುವ ವೃತ್ತಿಯೇ ವ್ಯಕ್ತಿಯನ್ನು ಪರಮಾತ್ಮನತ್ತ ಕೊಂಡೊಯ್ಯುವ ದಾರಿಯಾಗಬಲ್ಲುದು.

ಕಾಯಕದ ಬಗ್ಗೆ ಆಡಿರುವ ಈ ಮಾತುಗಳು ನೋಡಲಿಕ್ಕೆ ಚಂದವೆಂದೂ ಅನುಸರಣೆಗೆ ಅಸಾಧ್ಯವೆಂದೂ ಅನ್ನಿಸಬಹುದು. ಯಾವುದೇ ಬೋಧನೆ ಅರ್ಧ ಮಾತ್ರ (ಅಥವಾ ಅದಕ್ಕಿಂತ ಕಡಮೆ); ಆಚರಣೆ ಇನ್ನರ್ಧ. 'ವಚನಕಾರರನ್ನು' ಎಂದರೆ ವೀರಶೈವ ಧಾರ್ಮಿಕ ನಾಯಕರನ್ನು ನಾವು ಗೌರವಿಸುವುದು ಅವರು ದೊಡ್ಡ ಮಾತುಗಳನ್ನು ಆಡಿದರೆಂದಲ್ಲ; ಆಡುವ ಮುನ್ನ ಅವುಗಳನ್ನು ಆಚರಣೆಗೆ ತಂದಿದ್ದರೆಂದು. "ನಡೆದು ನುಡಿದ ವಚನಗಳು" ಎಂದು ಹಿಂದಿನ ವ್ಯಾಖ್ಯಾನಕಾರನೊಬ್ಬನ ಮಾತು ಇಲ್ಲಿ ಗಮನಾರ್ಹವಾಗುತ್ತದೆ. ಅಂತೆಯೇ, ನಾವು ಇಲ್ಲಿಯವರೆಗೆ ನಿರೂಪಿಸಿದ ಕಾಯಕತತ್ವ ಕೇವಲ ತತ್ವದ ಮಟ್ಟದಲ್ಲಿರದೆ ಆಚರಣೆಯ ವಸ್ತುವೂ ಆಗಿದ್ದಿತೆಂಬುದನ್ನು ತೋರಿಸಿಕೊಡುವುದು ಅಗತ್ಯ. ಬಸವ ಮುಂತಾದ ಧಾರ್ಮಿಕ ನಾಯಕರಲ್ಲಿ, ಅವರ ನೂರಾರು ಅನುಯಾಯಿಗಳಲ್ಲಿ ಭಿನ್ನ ಭಿನ್ನ ವೃತ್ತಿಗಳನ್ನವಲಂಬಿಸಿದ್ದ ಜನರಿದ್ದರು. ಬಸವಣ್ಣ ಬಿಜ್ಜಳನ ಬಳಿ ಭಂಡಾರದ ಅಧಿಕಾರಿಗಳಾಗಿದ್ದರು. ಅವರು 'ಭವಿ'ಯ (ಭವಿ= ವೀರಶೈವೇತರ) ಸೇವೆಯನ್ನು ಮಾಡುತ್ತಿದ್ದಾರೆ ಎಂಬ ಆರೋಪಣೆ ಬಂದಾಗ ತಾವು ತಮಗಾಗಿ ಅಲ್ಲವೇ ಅಲ್ಲ, ಇತರರಿಗಾಗಿ ಆ ವೃತ್ತಿಯನ್ನು ಅವಲಂಬಿಸಿರುವುದಾಗಿ ಸಮರ್ಥಿಸಿಕೊಂಡಿದ್ದರು. ಅಲ್ಲಮ ಒಬ್ಬ ಜಂಗಮರು; ನಾಡಿನ ತುಂಬ ಓಡಾಡಿ ಜನರಿಗೆ ಧರ್ಮಬೋಧನೆ ಮಾಡುವ ಕಾಯಕವುಳ್ಳವರು. ಅಗಸರ ಕಾಯಕದ ಮಡಿವಾಳ ಮಾಚಯ್ಯ, ಅಂಬಿಗನಾಗಿದ್ದ ಚೌಡಯ್ಯ, ದನಗಳನ್ನು ಕಾಯುತ್ತಿದ್ದ ತುರುಗಾಹಿ ರಾಮಣ್ಣ, ಹೀಗೆಯೇ ಬೇಸಾಯದ, ಕ್ಷೌರದ, ದೋಸೆಮಾಡುವ, ಹಾಡುವ, ಕುಣಿಯುವ, ನಗಿಸುವ, ನೇಯ್ಗೆಯ, ಬಟ್ಟೆ ಹೊಲಿಯುವ, ಬಡಗಿಯ, ಮರ ಕಡಿದು ಮಾರುವ ಇತ್ಯಾದಿ ಬೇರೆ ಬೇರೆ ವೃತ್ತಿಯ ಜನಗಳನ್ನು ಕಾಣಬಹುದು. ಬಸವಣ್ಣನವರ ಮನೆಯಲ್ಲಿ ಪಡಿ ಅಳೆದು ಕೊಡುವಾಗ ಬಿದ್ದ ಕಾಳನ್ನು ಆರಿಸುವುದನ್ನೇ ಕಾಯಕವಾಗಿ ಉಳ್ಳ ಆಯ್ದಕ್ಕಿ ಮಾರಯ್ಯ ಎಂಬ ಶಿವಶರಣನೂ ಇದ್ದಾನೆ. ಇವರೆಲ್ಲರೂ ಬರೆದಿರುವ ವಚನಗಳಲ್ಲಿ ತಮ್ಮ ವೃತ್ತಿಗಳ ಬಗ್ಗೆ ಇರುವ ಆದರ, ಶ್ರದ್ಧೆಗಳು ವ್ಯಕ್ತವಾಗಿವೆ. ಜೊತೆಗೆ, ತಮ್ಮ ಆಧ್ಯಾತ್ಮಿಕ ಅನುಭವಗಳನ್ನು, ತಾವು ನಂಬಿದ ತತ್ವಗಳನ್ನು ತಮ್ಮ ತಮ್ಮ ವೃತ್ತಿಗೆ ಸಂಬಂಧಿಸಿದ ಪಾರಿಭಾಷಿಕ ಪದಗಳ ಮೂಲಕ ವ್ಯಕ್ತ ಮಾಡಿದ್ದಾರೆ. ಇವರು ಗೋಷ್ಠಿಯಲ್ಲಿ ಒಂದೆಡೆ ಸೇರಿದಾಗ, ಮೇಲು ಕೀಳೆಂಬ ಭಾವನೆ ಪೂರ್ತಿಯಾಗಿ ಅಳಿಸಿ ಹೋಗುತ್ತಿದ್ದಿತು. ಮಡಿವಾಳ ಮಾಚಯ್ಯ ಭಂಡಾರಿಯಾಗಿದ್ದ ಬಸವಣ್ಣನವರನ್ನು ವಿಮರ್ಶಿಸಿ, ಅನೇಕ ಸಾರಿ ಖಂಡಿಸಿ ಮಾತನಾಡಿರು

ವುವನ್ನು ಗಮನಿಸಿದರೆ, ವ್ಯಕ್ತಿ ಸ್ವಾತಂತ್ರ್ಯಕ್ಕೆ ದೊರಕಿದ್ದ ಬೆಲೆಯು ಅರಿವಾಗುತ್ತದೆ. 'ಓದು'ವುದರಿಂದ ಒಬ್ಬ ಬ್ರಾಹ್ಮಣನೆನ್ನಿಸಿಕೊಳ್ಳುವನೆಂದೂ, ಬೀಸಿ ಮಡಿವಾಳನಾಗುವ ನೆಂದೂ ಲೋಹವನ್ನು ಕಾಸಿ ಕಮ್ಮಾರನಾಗುವನೆಂದೂ ಯಾರೂ 'ಕಿವಿ'ಯಿಂದ ಹುಟ್ಟಿಲ್ಲವೆಂದೂ ಒಬ್ಬ ವಚನಕಾರ ಮಾರ್ಮಿಕವಾಗಿ ನುಡಿದಿದ್ದಾನೆ. ವೃತ್ತಿ ಭೇದ ದಿಂದ ವ್ಯಕ್ತಿಯನ್ನು ಅಳೆಯುವ ಪದ್ಧತಿ ತಪ್ಪಿ ಹೋಯಿತೆಂಬುದು ಇದರಿಂದ ಸ್ಪಷ್ಟ ವಾಗುತ್ತದೆ. ಕಾಯಕ ತತ್ವವು ಜಾತಿ ಭೇದಕ್ಕೆ ಕೊಡಲಿಯ ಏಟಾಗಿ ಪರಿಣಮಿಸಿದ್ದು ಕರ್ಣಾಟಕದ ಸಾಮಾಜಿಕ ಇತಿಹಾಸದಲ್ಲಿ ಪ್ರಮುಖವಾಗಿ ಉಲ್ಲೇಖಿಸಬೇಕಾದ ಸಂಗತಿಯಾಗಿದೆ. ಮೋಳಿಗೆಯ ಮಾರಯ್ಯನಂತಹ ಶರಣನ ಬಡತನವನ್ನು ನೋಡಿ ಬಸವಣ್ಣನವರು ಅವನ ಮನೆಯಲ್ಲಿ ಯಾರಿಗೂ ತಿಳಿಯದಂತೆ ಐಶ್ವರ್ಯವನ್ನು ಬಿಟ್ಟು ಬಂದಾಗ ಮಾರಯ್ಯ ದಂಪತಿಗಳು ಆ ಐಶ್ವರ್ಯವನ್ನು ತಿರಸ್ಕರಿಸಿಬಿಟ್ಟರು. ಏಕೆಂದರೆ ಅದು ತಾವು ಕಷ್ಟಪಟ್ಟು ಸಂಪಾದಿಸಿದ್ದಲ್ಲವಾಗಿದ್ದಿತು. ಬಡತನ ಮತ್ತು ಅಭಿಮಾನ ಗಳು ಒಂದೆಡೆ ಇರಲು ಸಾಧ್ಯವೆಂಬುದಕ್ಕೆ ಇದು ಉಜ್ವಲ ನಿದರ್ಶನ. ಅಷ್ಟಕ್ಕೆ ಮಾರಯ್ಯ ಒಮ್ಮೆ ತನ್ನ ಕಾಯಕದ ವಿಷಯದಲ್ಲಿ ನಿರಾಸಕ್ತನಾದಾಗ, ಅವನ ಹೆಂಡತಿ ಬಂದು ಅವನನ್ನು ಎಚ್ಚರಿಸಿ ಕಾಯಕಕ್ಕೆ ನಿಯೋಗಿಸಬೇಕಾಯ್ತು. ಅಷ್ಟಕ್ಕೆ ಮಾರಯ್ಯ ಅತಿಯಾಸೆ ಬಿಟ್ಟು ಹೆಚ್ಚು ಕಾಳನ್ನು ಆರಿಸಿ ತಂದಾಗ, ಅವನ ಹೆಂಡತಿ ಆಸೆಯೆಂಬುದು ಅರಸನಿಗಲ್ಲದೆ ಭಕ್ತನಿಗಲ್ಲ ಎಂದು ಹಿಂದಕ್ಕೆ ಕಳುಹಿಸಿದ ಘಟನೆಯೂ ಗಮನಾರ್ಹ. ಹರಿಹರ ಕವಿ ತನ್ನ ಅನೇಕ ರಗಳೆಗಳಲ್ಲಿ ಬೇರೆ ಬೇರೆ ವೃತ್ತಿಗಳನ್ನವ ಲಂಬಿಸಿದ್ದ ಭಕ್ತರ ಕಾಯಕವೂ ಭಕ್ತಿ ಸಾಧನೆಯೂ ಹೇಗೆ ಅಭಿನ್ನವಾಗಿದ್ದುವೆಂಬು ದನ್ನು ಸೊಗಸಾದ ರೂಪಕಗಳಲ್ಲಿ ನಿರೂಪಿಸಿದ್ದಾನೆ.

ಕರ್ಣಾಟಕದ ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸಗಳಲ್ಲಿ ಹನ್ನೆರಡನೆಯ ಶತಮಾನ ಬಹು ಪ್ರಮುಖ ಕಾಲವೆನ್ನಿಸಿಕೊಂಡಿದೆ. ಆಗ ನಡೆದ ಕ್ರಾಂತಿಯಂತಹುದು ಕರ್ಣಾಟಕದಲ್ಲೇ ಏಕೆ, ಭರತ ಖಂಡದಲ್ಲೇ ಹಲವಿಲ್ಲ- ಆ ಕ್ರಾಂತಿ ಕರ್ಣಾಟಕಕ್ಕೆ ಕೊಟ್ಟ ಬಹು ಪ್ರಮುಖ ಆಲೋಚನೆಗಳಲ್ಲಿ ಕಾಯಕ ತತ್ವವೂ ಒಂದು. ಇದು ಇಂದಿಗೂ ಅದರ ಕೆಲವು ಅಂಶಗಳಲ್ಲಿ ಆಕರ್ಷಣೀಯವೂ ಅನುಸರಣ ಯೋಗ್ಯವೂ ಆಗಿರುವುದು ಬಹು ದೊಡ್ಡ ಸಂಗತಿಯಾಗಿದೆ.

---

* ಪ್ರೊ. ಎಂ ಯಾಮುನಾಚಾರ್ಯರು ಕಾಯಕತತ್ವದ ಜೀವಂತ ಪ್ರತೀಕದಂತಿದ್ದರು. ಆದ್ದರಿಂದ ಈ ಲೇಖನ ಅವರ ಸಂಸ್ಮರಣ ಗ್ರಂಥದಲ್ಲಿ ಪ್ರಕಟವಾಗುತ್ತಿರುವುದು ಉಚಿತವಾ ಗಿದೆ.

# ತೆಂಗಲೈ ಸಂಪ್ರದಾಯದಲ್ಲಿ ಪ್ರಪತ್ತಿಯ ಸ್ವರೂಪ

ಎನ್. ಎಸ್. ಅನಂತರಂಗಾಚಾರ್ಯ

ರಾಮಾನುಜರ ನಂತರದ ಕಾಲದಲ್ಲಿ ಶ್ರೀವೈಷ್ಣವ ಸಂಪ್ರದಾಯ ಕವಲೊಡೆದು ವಡಗಲೈ ಮತ್ತು ತೆಂಗಲೈ ಸಂಪ್ರದಾಯವೆಂಬ ಎರಡು ಪ್ರಾಕಾರಗಳಲ್ಲಿ ಮುಂದುವರಿಯಿತು. ಇವೆರಡು ಸಂಪ್ರದಾಯಗಳಲ್ಲಿ ಕೆಲವು ವೈಲಕ್ಷಣ್ಯಗಳು ಮೂಡಿಬಂದವು. ರಾಮಾನುಜರ ಸಿದ್ಧಾಂತವನ್ನೇ ಅನುಸರಿಸುವ ಇವೆರಡು ಸಂಪ್ರದಾಯಗಳಲ್ಲಿ ಹದಿನೆಂಟು ಅಂಶಗಳಲ್ಲಿ ಭೇದವಿದೆ. ಅವುಗಳಲ್ಲಿ ಪ್ರಪತ್ತಿಯ ಅನುಷ್ಠಾನವೂ ಮುಖ್ಯವಾದ ಒಂದು ಅಂಶ.

ತೆಂಗಲೈ ಸಂಪ್ರದಾಯಕ್ಕನುಸಾರ ಪ್ರಪತ್ತಿಯೇ ಮೋಕ್ಷೋಪಾಯ. ಈ ಪ್ರಪತ್ತಿ ಎಂಬುದು ನಾವು ಸ್ವಪ್ರಯತ್ನದಿಂದ ಅನುಷ್ಠಿಸುವಂತದಲ್ಲ. ಸರ್ವೇಶ್ವರನಾದ ಭಗವಂತನಿಗೆ ನಾವು ಸೇರಿದವರೆಂದೂ, ನಾವು ಅವನಿಗೆ ಅತ್ಯಂತ ಪರತಂತ್ರರೆಂದೂ, ನಮ್ಮ ರಕ್ಷಣೆ ಅವನ ಹೊಣೆಯೆಂದೂ ನಾವು ನಿಶ್ಚಯ ಜ್ಞಾನ ಹೊಂದಿ ಸ್ವರಕ್ಷಣದಲ್ಲಿ ಸ್ವಪ್ರಯತ್ನವನ್ನು ಬಿಟ್ಟುಬಿಟ್ಟು ಅವನನ್ನೇ ನಂಬಿರುವುದು ಪ್ರಪತ್ತಿ ಎನಿಸುವುದು. ಈ ಸಂಪ್ರದಾಯದಂತೆ ಪ್ರಪತ್ತಿಯ ಕ್ರಿಯಾತ್ಮಕವಾದ ಅನುಷ್ಠಾನ ಆವಶ್ಯಕವಿಲ್ಲ. ಈ ಸಂಪ್ರದಾಯ ನಿರೂಪಣೆಯನ್ನು ಶ್ರೀ ಪಿಳ್ಳೈ ಲೋಕಾಚಾರ್ಯರು 'ಶ್ರೀ ವಚನ ಭೂಷಣ'ದಲ್ಲಿ ಪ್ರತಿಪಾದಿಸಿದ್ದಾರೆ. ಶ್ರೀ ಜೀಯರ್ ಅವರು ಅದಕ್ಕೆ ಉತ್ತಮವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಪ್ರಪತ್ತಿಯ ಬಗೆಗೆ ಅವರ ಅಭಿಪ್ರಾಯಗಳನ್ನು ಕೆಳಗೆ ಸಂಗ್ರಹಿಸಲಾಗಿದೆ.

ಇತಿಹಾಸ ಪುರಾಣಗಳಿಂದ ಪುರುಷಕಾರತ್ವ ಮತ್ತು ಉಪಾಯತ್ವದ ನಿರೂಪಣೆ ಆಗಿದೆ. ಇತಿಹಾಸ ಇವುಗಳಲ್ಲಿ ಪ್ರಧಾನವಾದುದು. ರಾಮಾಯಣದಲ್ಲಿ ಪುರುಷಕಾರಳಾದ ಸೀತಾದೇವಿಯನ್ನೂ ಭಾರತದಲ್ಲಿ ಉಪಾಯ ಸ್ವರೂಪನಾದ ಶ್ರೀಕೃಷ್ಣನನ್ನೂ ಕೊಂಡಾಡಿದೆ. ಕೃಪೆ, ಪಾರತಂತ್ರ್ಯ ಮತ್ತು ಅನನ್ಯಾರ್ಹತ್ವಗಳು ಪುರುಷಕಾರಕ್ಕೆ

ಅವಶ್ಯಕ. ಸೀತಾದೇವಿ ಇದನ್ನು ಪ್ರಕಾಶಪಡಿಸುವವಳಾಗಿದ್ದಾಳೆ. ಪುರುಷಕಾರಳಾದ ದೇವಿ ತನ್ನ ಉಪದೇಶದಿಂದ ಚೇತನನನ್ನೂ ಈಶ್ವರನನ್ನೂ ತಿದ್ದುತ್ತಾಳೆ. ಉಪದೇಶಕ್ಕೆ ಒಳಗಾಗದಿದ್ದರೆ 'ಚೇತನನ್ನೆ ಅರುಳಾಲೇ ತಿರುತ್ತುಮವ್; ಈಶ್ವರನ್ನೆ ಅಳಗಾಲೆ ತಿರುತ್ತುಮವ್'; ಎಂದು ಹೇಳಿದಂತೆ ಕೃಪೆಯಿಂದ ಜೀವನನ್ನೂ ತನ್ನ ಸೌಂದರ್ಯ ದಿಂದ ಈಶ್ವರನನ್ನೂ ತಿದ್ದುತ್ತಾಳೆ. ಚೇತನನನ್ನು ಸ್ವೀಕಾರಮಾಡುವ ಕಾಲದಲ್ಲಿ ಉಪಾಯ ಪುರುಷಸಾಪೇಕ್ಷವೂ ಪುರುಷಕಾರ ಸಾಪೇಕ್ಷವೂ ಆದುದು. ಆದರೆ ಕಾರ್ಯ ಕಾಲದಲ್ಲಿ ಸಿದ್ಧೋಪಾಯನಾದ ದೇವನು ಉಭಯ ನಿರಪೇಕ್ಷನಾಗಿ ಪ್ರವರ್ತಿಸುತ್ತಾನೆ. ಉಪಾಯ ವೈಭವ ಮಹಾಭಾರತದಲ್ಲಿ ಪ್ರಕಾಶಿಸುತ್ತದೆ. ಶ್ರೀಕೃಷ್ಣನು ಅರ್ಜುನನಿಗೆ ತಾನೇ ಪ್ರಪತ್ತ್ಯುಪದೇಶ ಮಾಡಿದ್ದಾನೆ.

ಸಾಧಕರು ಐದು ಬಗೆಯಾಗಿರುವರೆಂದು ಪಿಳ್ಳೈ ಲೋಕಾಚಾರ್ಯರು ವಿಭಾಗಿಸುತ್ತಾರೆ. ಅವರು ಯಾರೆಂದರೆ—

೧) ದೇಹಾತ್ಮಾಭಿಮಾನಿ : ಇವರಿಗೆ ದೇಹವರ್ಧಕರಾದ ಮನುಷ್ಯರು ಉದ್ದೇಶ್ಯರು. ಇವರಿಗೆ ಉಪೇಯ ಐಹಿಕ ಭೋಗ; ಇವರಿಗೆ ಉಪಾಯ ಅರ್ಥ.

೨) ಸ್ವತಂತ್ರರು : ಇವರಿಗೆ ಸ್ವರ್ಗಾದಿಭೋಗ ಉದ್ದೇಶ್ಯ. ಅದೇ ಇವರಿಗೆ ಉಪೇಯ. ಕರ್ಮಾನುಷ್ಠಾನ ಉಪಾಯ.

೩) ಅನ್ಯಶೇಷಭೂತರು : ಇವರಿಗೆ ಬ್ರಹ್ಮರುದ್ರಾದಿಗಳು ಉದ್ದೇಶ್ಯರು. ಆಯಾ ದೇವತೆಗಳ ಸಾಯುಜ್ಯ ಉಪೇಯ. ಉಪಾಯ ಆ ದೇವತೆಗಳ ಸಮಾಶ್ರಯಣವೇ.

೪) ಉಪಾಯಾಂತರ ನಿಷ್ಠರು : ಇವರಿಗೆ ದೇವತಾಂತರ್ಯಾಮಿಯಾದ ಸರ್ವೇಶ್ವರನೇ ಉದ್ದೇಶ್ಯ–ಉಪೇಯ ಭಗವದನುಭವ. ಉಪಾಯ ಕರ್ಮಜ್ಞಾನ ಭಕ್ತಿಗಳು.

೫) ಸ್ವಪ್ರಯೋಜನಪರರು : 'ಸೆಂಜಿನಾಲ್ ನಿನ್ನೈಪ್ಪರ್ ಯವನ್' ಎಂಬುವನು ಉದ್ದೇಶ್ಯ. ಉಪೇಯ ಸ್ವಾರ್ಥಕೈಂಕರ್ಯ. ಉಪಾಯ ಸ್ವಕೀಯ ಸ್ವೀಕಾರ ಇದು ಅರ್ಚಾವತಾರಕ್ಕೆ ಅನ್ವಯಿಸುವುದು. ಅನಿಷ್ಟನಿವೃತ್ತಿಗೂ ಇಷ್ಟ ಪ್ರಾಪ್ತಿಗೂ ಅವನೇ ಉಪಾಯವೆಂದು ನೆನಸಿಕೊಂಡು ತಾನು ಅನುಸರಿಸುವ ಸ್ಥಿತಿ ಯನ್ನಿದು ಸೂಚಿಸುತ್ತದೆ. ತನಗೆ ಸಂತೋಷವನ್ನುಂಟುಮಾಡುವ ಕೈಂಕರ್ಯವೇ ಇಲ್ಲಿ ಉಪೇಯ. (ಸೂ. 265)

ಈ ಐದು ಜನ ಅಧಿಕಾರಿಗಳಲ್ಲಿ ಮೊದಲ ಮೂವರು ಭಗವಂತನನುಗ್ರಹಕ್ಕೆ ಪಾತ್ರರಾಗುವರು. ಕೊನೆಯ ಎರಡು ಬಗೆಯವರು ಅನುಗ್ರಹಕ್ಕೆ ಪಾತ್ರರು. ಮೊದಲ

ಮೂರು ಬಗೆಯ ಅಧಿಕಾರಿಗಳ ಕರ್ಮ ಅನುಭವ ವಿನಾಶ್ಯ. ನಾಲ್ಕನೆಯ ಅಧಿಕಾರಿಯ ಕರ್ಮ ಪ್ರಾಯಶ್ಚಿತ್ತವಿನಾಶ್ಯ. ಐದನೆಯ ಅಧಿಕಾರಿಯ ಕರ್ಮ ಪುರುಷಕಾರ ವಿನಾಶ್ಯ. (ಸೂ. 267)

ಈ ಸಂಪ್ರದಾಯದಂತೆ ಕರ್ಮ ಜ್ಞಾನ ಭಕ್ತಿಗಳು ನಮ್ಮ ಸ್ವರೂಪಕ್ಕೆ ಅನುಗುಣ ವಾದವಲ್ಲವೆಂದೂ ಪ್ರಪತ್ತಿಯು ನಮ್ಮ ಸ್ವರೂಪಕ್ಕೆ ಅನುಗುಣವಾದುದೆಂದೂ ಹೇಳಿದೆ. ಅತ್ಯಂತ ಪರತಂತ್ರರಾದ ನಾವು ಸ್ವಸ್ವರೂಪ ಜ್ಞಾನವನ್ನು ಹೊಂದಿರುವುದು ಮಾತ್ರ ಆವಶ್ಯಕ. ಸರ್ವಸ್ವಾಮಿಯಾದ ಭಗವಂತನು ತನ್ನ ನಿರ್ಹೇತುಕ ಕೃಪೆಯಿಂದ ಚೇತನ ರನ್ನು ಸಂರಕ್ಷಿಸುವವನಾಗಿದ್ದಾನೆ ಈ ನಿಶ್ಚಯ ಜ್ಞಾನದಲ್ಲಿದ್ದು ಈಶ್ವರನ ಸಂಕಲ್ಪಕ್ಕೆ ವಿರುದ್ಧವಾಗಿ ಹೋಗದೆ ಇರುವ ಸ್ಥಿತಿಯೇ ಪ್ರಪತ್ತಿಯ ಜೀವಾಳ. ಮಾರ್ಜಾಲ ಕಿಶೋರ ನ್ಯಾಯವನ್ನೇ ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಬೆಕ್ಕಿನ ಮರಿ ಯನ್ನು ತಾಯಿ ತನ್ನ ಇಚ್ಛೆಯಂತೆ ಒಂದೆಡೆಯಿಂದ ಮತ್ತೊಂದೆಡೆಗೆ ತಾನೇ ಒಯ್ಯು ವುದು. ತಾಯಿ ಮರಿಯ ರಕ್ಷಣೆಯನ್ನು ತಾನೇ ಮಾಡುತ್ತದೆ. ಮರಿಯ ಸ್ವಪ್ರಯತ್ನ ಇದರಲ್ಲಿ ಎಳ್ಳಷ್ಟೂ ಇರುವುದಿಲ್ಲ. ಹಾಗೆಯೇ ನಮ್ಮ ಸ್ವಪ್ರಯತ್ನವನ್ನು ಬಿಟ್ಟು ನಾವು ಈಶ್ವರನ ರಕ್ಷಣೆಯಲ್ಲಿ ನಿಲ್ಲಬೇಕು. ಈ ಬಗೆಯಾದ ದೃಢವಾದ ನಿಶ್ಚಯ ವನ್ನು ಹೊಂದಿರುವುದೇ ಪ್ರಪತ್ತಿಯ ಲಕ್ಷಣವು.

ಭಗವಂತನಲ್ಲಿ ರಕ್ಷಣೆಯನ್ನು ಬೇಡಬೇಕೆಂಬುದನ್ನೂ ಈ ಪ್ರಪತ್ತಿಗೆ ಎಲ್ಲರೂ ಅಧಿಕಾರಿಗಳೆಂದೂ ಇಲ್ಲಿ ಸೂಚಿಸಲಾಗಿದೆ. 'ಪ್ರಪತ್ತಿಕ್ಕು ದೇಶನಿಯಮಮುಮ್ ಕಾಲ ನಿಯಮಮುಮ್ ಪ್ರಕಾರ ನಿಯಮಮುಮ್ ಅಧಿಕಾರಿ ನಿಯಮಮುಮ್ ಫಲ ನಿಯಮಮುಮ್ ಇಲ್ಲೈ' ಎಂಬ ಸೂತ್ರದಲ್ಲಿ (ಸೂ. 23) ಇದನ್ನು ಸಮರ್ಥಿಸಿ ದ್ದಾರೆ. ಆದರೆ ವಿಷಯನಿಯಮವುಂಟು. ಯಾವ ದೇಶದಲ್ಲಿಯಾಗಲೀ ಯಾವ ಕಾಲ ದಲ್ಲಿಯಾಗಲೀ, ಒಬ್ಬನಿಗೆ ಭಗವತ್ಸನ್ನಾಪ್ರಯಣರುಚಿಉಂಟಾದರೆ ಕ್ಷಣಭಂಗುರ ವಾದ ಆ ರುಚಿ ಕಳೆಯುವ ಮುನ್ನವೇ, ಆ ರುಚಿ ಉಂಟಾದ ಕಾಲದಲ್ಲಿಯೇ ಪ್ರಪತ್ತಿ ಆಗಬೇಕು. ಇತರ ಪ್ರಕಾರಗಳ ನಿರ್ಬಂಧ ಇದಕ್ಕೆ ಇಲ್ಲ. ದ್ರೌಪದಿ ಸ್ನಾನಮಾಡಿ ಪ್ರಪತ್ತಿ ಮಾಡಲಿಲ್ಲ. ಅರ್ಜುನ ನೀಚರ ನಡುವೆ ನಿಂತು ಆ ಅರ್ಥಗಳನ್ನೆಲ್ಲಾ ಕೇಳಿ ದನು. ಶುದ್ಧಿ ಅಥವಾ ಅಶುದ್ಧಿ ಎಂಬ ಎರಡನ್ನೂ ಬಯಸಬೇಕಾಗಿಲ್ಲ. 'ಇರುಂದ ಪಡಿಯೇ ಅಧಿಕಾರಿಯಾಂ ಇತ್ತನೈ' ಎಂದು ಇದನ್ನು ಆಚಾರ್ಯರು ಸಾಧಿಸಿ ದ್ದಾರೆ. ಧರ್ಮ ಪುತ್ರಾದಿಗಳು, ದ್ರೌಪದೀ, ಕಾಕ, ಕಾಳೀಯ, ಗಜೇಂದ್ರ, ವಿಭೀಷಣ, ಶ್ರೀರಾಮ, ಲಕ್ಷ್ಮಣ ಇವರೆಲ್ಲರೂ ಇದನ್ನು ಅನುಷ್ಠಿಸಿರುವುದರಿಂದ ಅಧಿಕಾರಿ ನಿಯಮ ವಾಗಲೀ ಫಲ ನಿಯಮವಾಗಲೀ ಇದಕ್ಕೆ ಇಲ್ಲವೆಂಬುದು ಗೊತ್ತಾಗುತ್ತದೆ. ರಾಜ್ಯ, ವಸ್ತ್ರ, ಪ್ರಾಣ, ಕೈಂಕರ್ಯ, ರಾಮಪ್ರಾಪ್ತಿ, ಸಮುದ್ರತರಣ, ರಾಮಾನುವೃತ್ತಿ ಇವು ಮೇಲಿನ ಶರಣಾಗತಿಗಳಿಗೆ ಫಲವಾಗಿ ಲಭಿಸಿದವು. 'ಗುಣಪ್ರೀತಿಯುಳ್ಳ ವಿದುಮೇ

ವಿಷಯಮಪ್ಯೈ - ಪ್ರೂರ್ತಿಯುಳ್ಳತುಂ ಅರ್ಚಾವತಾರತ್ತಿಲೇ' (ಸೂ 34) ಎಂಬ ಸೂತ್ರದಿಂದ ಈ ಪ್ರಪತ್ತಿ ಅರ್ಚಾವತಾರದಲ್ಲಿ ಆಗಬೇಕೆಂಬುದನ್ನು ತಿಳಿಸಿದೆ. ಆಳ್ವಾ ರರುಗಳು ಅರ್ಚೆಯಲ್ಲಿ ಪ್ರಪತ್ತಿ ಮಾಡಿದರು. ಪ್ರಪತ್ತಿಗೆ ಅಪೇಕ್ಷಿತಗಳಾದ ಸೌಲಭ್ಯಾದಿ ಗಳು ಕತ್ತಲೆಯಲ್ಲಿನ ಬೆಳಕಿನಂತೆ ಪ್ರಕಾಶಿಸುವುದು ಅರ್ಚೆಯಲ್ಲಿ. 'ಅರ್ಚಾವತಾರ ವಿಷಯೇ ಮಯಾಪ್ಯುದ್ದೇಶ್ಯತಸ್ತಥಾ। ಉಕ್ತಾಗುಣಾನಶಕ್ಯಂತೇ ವಕ್ತುಂ ವರ್ಷ ಶತೈರಪಿ॥' ಎಂದು ಹೇಳಿರುವಂತೆ ಅರ್ಚಾವತಾರದ ಮಹಿಮೆ ಅಮಿತವಾದುದು.

ಪ್ರಪತ್ತಿಗೆ ಅಧಿಕಾರಿಗಳು ಮೂವರು—ಅಜ್ಞರು, ಜ್ಞಾನಾಧಿಕರು ಮತ್ತು ಭಕ್ತಿಪರವಶರು ಎಂದು. ನಮ್ಮಂತಹವರು ಅಜ್ಞರು. ಜ್ಞಾನಾಧಿಕ್ಯದಿಂದ ಪ್ರಪನ್ನರಾದ ವರು ಪೂರ್ವಾಚಾರ್ಯರುಗಳು. ಭಕ್ತಿಪಾರವಶ್ಯದಿಂದ ಪ್ರಪನ್ನರಾದವರು ಆಳ್ವಾರರು ಗಳು. ಕರ್ಮನಿಬಂಧನವಾದ ಅಚಿತ್ಸಂಬಂಧದಿಂದ ಉಂಟಾದ ಅಜ್ಞಾನಾಶಕ್ತಿಗಳು ನಾವು ಪ್ರಪತ್ತಿಮಾಡಲು ಹೇತುಗಳಾಗಿವೆ. ಅಜ್ಞಾನ ಅಚಿತ್ತತ್ವಕ್ಕೆ ಅನ್ವಯಿಸುತ್ತದೆ. ಆತ್ಮಸ್ವರೂಪ ಯಾಥಾತ್ಮ್ಯದರ್ಶನ ಇತರ ಸಾಧನಗಳು ಸ್ವರೂಪವಿರುದ್ಧವೆಂದು ತಿಳಿ ಯಲೂ ಅವುಗಳನ್ನು ಪರಿತ್ಯಜಿಸಲೂ ಕಾರಣವಾದ ಜ್ಞಾನಪೂರ್ತಿಗೆ ಮೂಲ. ಜ್ಞಾನಾ ಧಿಕ್ಯ ಆತ್ಮತತ್ವಕ್ಕೆ ಅನ್ವಯಿಸುತ್ತದೆ. ಯಾವುದನ್ನೂ ಅನುಷ್ಠಿಸಲು ಅವಕಾಶ ಕೊಡ ದಂತೆ ಇಂದ್ರಿಯಗಳನ್ನು ಶಿಥಿಲಗೊಳಿಸುವ ಭಕ್ತಿವಿವೃದ್ಧಿಗೆ ಕಾರಣ ಭಗವದ್ವಿಗ್ರಹ ವೈಲಕ್ಷಣ್ಯ. ಆದುದರಿಂದ ಭಕ್ತಿಪಾರವಶ್ಯ ಭಗವತ್ತತ್ವಕ್ಕೆ ಅನ್ವಯಿಸುತ್ತದೆ. ಈ ಮೂರು ಬಗೆಗಳಲ್ಲಿ ಭಕ್ತಿಪಾರವಶ್ಯದಿಂದ ಮೂಡಿಬರುವ ಪ್ರಪತ್ತಿ ಮುಖ್ಯವಾದುದು. ಇದರಲ್ಲಿ ಪ್ರಾಪ್ಯರುಚಿ ಸ್ವಲ್ಪವೂ ಮರೆಯಾಗುವುದಿಲ್ಲ.

ಪ್ರಪತ್ತಿ ಎಂದರೇನು ? ಪ್ರಪತ್ತಿ ಎಂದರೆ ಭಗವಂತನಲ್ಲಿ ನಮ್ಮ ರಕ್ಷಣೆಯ ಭಾರ ವನ್ನೊಪ್ಪಿಸುವುದೆಂದರ್ಥ. ಎಂದರೆ ಸ್ವಪ್ರವೃತ್ತಿಯಲ್ಲಿ ಅನ್ವಯವನ್ನು ಬಿಡುವುದೆಂದು ಅರ್ಥ. ಅವನನ್ನೇ ಉಪಾಯವೆಂದು ನಿಶ್ಚಯಿಸಿ ಅವನ ಆಗಮನವನ್ನೇ ನಿರೀಕ್ಷಿಸುತ್ತಿರ ಬೇಕು ಪ್ರಪನ್ನ. ಆದರೆ ಸ್ವಯತ್ನದಲ್ಲಿ ಕೆಲವರು ತೊಡಗುವುದೇಕೆ ಎಂದರೆ ಭಕ್ತಿಯ ಅವಸ್ಥಾಭೇದಗಳು ತೋರುವುದರಿಂದ ಎಂದು ಹೇಳಬೇಕು. ಯಾವ ರೀತಿಯಲ್ಲಾದರೂ ಭಗವಂತನನ್ನು ಆಗಲೇ ಪಡೆಯಬೇಕೆಂಬ ಅತಿಮಾತ್ರತ್ವರಾವಸ್ಥೆ ಈ ಬಗೆಯ ಸ್ವಪ್ರಯತ್ನಕ್ಕೆ ಕಾರಣ. ಅವನನ್ನು ಅರೆಕ್ಷಣವೂ ಬಿಟ್ಟಿರಲಾರದ ಭಕ್ತ್ಯವಸ್ಥೆ ಸ್ವಪ್ರಯತ್ನದಲ್ಲಿ ಪ್ರವೃತ್ತಿಯನ್ನು ಪ್ರೇರಿಸುತ್ತದೆ.

ಶಾಸ್ತ್ರ ಪ್ರಪತ್ತಿಯನ್ನು ವಿಧಿಸುತ್ತದೆ. ಇದನ್ನು ಮೋಕ್ಷಸಾಧನವೆಂದು ಅವು ಸಾರುತ್ತವೆ. ಆದರೆ ಇದಕ್ಕೆ ಉಪಾಯತ್ವ ಪ್ರತಿಪತ್ತಿ ಯೋಗ್ಯತೆ ಇಲ್ಲವೆಂದು ತಿಳಿಯ ಬೇಕು. (ಸೂ. 54). 1 ತಂದೆ ಹಿತೈಷಿಯಾಗಿ ಮಗನಿಗೆ ಅರಿವಿಲ್ಲದ ಅವಸ್ಥೆಯಲ್ಲಿಯೂ ಅವನನ್ನು ರಕ್ಷಿಸಿಕೊಂಡು ಬರುತ್ತಾನೆ. ಅಂಥವರಲ್ಲಿ ತನಗೆ ಅರಿವುಂಟಾದ ಸಮಯದಲ್ಲಿ

ಮಗ ತಂದೆಯನ್ನು 'ನನ್ನನ್ನು ನೀನು ರಕ್ಷಿಸಬೇಕು' ಎಂದು ಹೇಳಿದರೆ ಅದರಿಂದ ಅವರಿಬ್ಬರಿಗೂ ಇರುವ ಸಂಬಂಧಕ್ಕೆ ದೋಷಬರುತ್ತದೆ. ಹಾಗೆಯೇ ನಮಗೂ ಭಗವಂತನಿಗೂ. ನಮ್ಮ ಇರುವಿಕೆಗೆ ಕಾರಣನೂ, ಸರ್ವಕಾಲದಲ್ಲಿಯೂ ನಮಗೆ ರಕ್ಷಕನೂ ಆದ ಅಕಾರವಾಚ್ಯನಾದ ಸರ್ವೇಶ್ವರನಿಗೂ ಮಕಾರವಾಚ್ಯರಾದ ನಮಗೂ ಇರುವ ಸಂಬಂಧಕ್ಕೆ ಈ ಉಪಾಯತ್ವ ಕಲ್ಪನೆಯಿಂದ ದೋಷವುಂಟು. 2 ಚರಮಶ್ಲೋಕದಲ್ಲಿ ಇದನ್ನು ವಿಧಿಸಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಸ್ವೀಕಾರರೂಪವಾದ ಪ್ರಪತ್ತಿಯೊಂದನ್ನು ಬಿಟ್ಟು ಉಳಿದ ಚೇತನ ಪ್ರವೃತ್ತಿಗಳೊಂದನ್ನೂ ಸಹಿಸದಂತೆ ಅವೆಲ್ಲವನ್ನೂ ಬಿಡಬೇಕೆಂದು ಅಲ್ಲಿ ಹೇಳಿದೆ. ಸಾಧನರೂಪವಾದ ಸಕಲಪ್ರವೃತ್ತಿಗಳ ಸವಾಸನತ್ಯಾಗ ಅದಕ್ಕೆ ಅಂಗ. ಆದುದರಿಂದ ಇದು ಪ್ರಪತ್ತಿಯ ಅನುಪಾಯತ್ವವನ್ನೇ ಸೂಚಿಸುತ್ತದೆ. (3) ಸಿದ್ಧೋಪಾಯನಾದ ಸರ್ವೇಶ್ವರ ಇಷ್ಟಾನಿಷ್ಟ ಪ್ರಾಪ್ತಿಪರಿಹಾರಗಳಿಗೆಲ್ಲಾ ಸ್ವಯಂನಿರ್ವಾಹಕನಾಗಿರುವುದರಿಂದ ಅವನನ್ನು ಉಪಾಯವೆಂಬುವುದು ಯುಕ್ತವಾಗಿದೆ. ಈ ಸಿದ್ಧೋಪಾಯ ಸಹಾಯಾಂತರ ಸಂಸರ್ಗವನ್ನೂ ಸಹಿಸುವುದಿಲ್ಲ. ಆದುದರಿಂದಲೇ ಆನುಕೂಲ್ಯಸಂಕಲ್ಪಾದಿಗಳು ಉಪಾಯಕ್ಕೆ ಅಂಗವಾಗಿರದೆ ಸಂಭಾವಿತಸ್ವಭಾವಗಳಾಗಿವೆ. ಸಿದ್ಧೋಪಾಯಕ್ಕಿಂತ ಬೇರೆಯಾದ ಸಾಧ್ಯೋಪಾಯದಲ್ಲಿ ಉಪಾಯತ್ವ ಪ್ರತಿಪತ್ತಿಯೂ ಅಂಗಗಳೂ ಇರಬಹುದು. ಆದರೆ ಪ್ರಪತ್ತಿ ಅಂತಹುದಲ್ಲ. ಪ್ರಪತ್ತಿ ಸಿದ್ಧೋಪಾಯವರಣರೂಪವಾದುದೂ, ನಿವೃತ್ತಿಸಾಧ್ಯವೂ, ಅಧಿಕಾರಿ ವಿಶೇಷಣವೂ ಆದುದು. ಇದಕ್ಕೆ ಉಪಾಯತ್ವ ಸಲ್ಲದು.

ಪ್ರಪತ್ತಿಗೆ ಉಪಾಯತ್ವವಿಲ್ಲವೆಂದ ಮೇಲೆ ಫಲಸಿದ್ಧಿ ಹೇಗಾದೀತೆಂದು ಶಂಕಿಸಬೇಕಾಗಿಲ್ಲ. 'ಫಲತ್ತುಕ್ಕು ಆತ್ಮಜ್ಞಾನಮುಂ ಅಪ್ರತಿಷೇಧಮುಮೇ ವೇಂಡುವದು' (ಸೂ 60) ಎಂದಂತೆ ಭಗವದೇಕಶೇಷತ್ವ, ತದೇಕ ರಕ್ಷ್ಯತ್ವ ಇವುಗಳ ಅರಿವೂ, ನಿರುಪಾಧಿಕಶೇಷಿಯೂ ರಕ್ಷಕನೂ ಆದ ಭಗವಂತನೇ ಮಾಡುವ ರಕ್ಷಣೆಯನ್ನು ಪ್ರತಿಷೇಧ ಮಾಡದಿರುವಿಕೆಯೂ ಫಲಸಿದ್ಧಿಗೆ ಕಾರಣವಾಗುತ್ತವೆ. ಸ್ವರಕ್ಷಣದಲ್ಲಿ ಸ್ವಾನ್ವಯ ನಿವೃತ್ತಿಯಿಂದ ಫಲಸಿದ್ಧಿ. ಇಲ್ಲದಿದ್ದರೆ ಅವನ ನಿರುಪಾಧಿಕ ಶೇಷಿತ್ವಕ್ಕೂ ನಿರಪೇಕ್ಷೋಪಾಯತ್ವಕ್ಕೂ ಹಾನಿಯುಂಟಾಗುವುದು.

ಭಗವಂತನು 'ನೀನು ನನ್ನಿಂದ ರಕ್ಷಿಸಲ್ಪಡುವವನು' ಎಂದರೆ 'ಹಾಗಲ್ಲ' ವೆಂದು ಹೇಳದೇ ಇರುವುದು ಎಂದರೆ 'ರಕ್ಷ್ಯತ್ವಾನುಮತಿ' ರಕ್ಷಣಕ್ಕೆ ಬೇಕಾದುದು. 'ಯಾಂಚಾಪ್ರಪತ್ತಿ:' 'ಪ್ರಾರ್ಥನಾಮತಿ:' ಎಂಬುದಕ್ಕೆ ಅಪ್ರತಿಷೇಧದ್ಯೋತಕವೆಂದು ಅರ್ಥ. ಈ ಅನುಮತಿಯೂ ಸಾಧನವಾಗಲಾರದು. ಇದು 'ಅಚಿದ್ವ್ಯಾವೃತ್ತಿವೇಷ.' ಹಿತೈಷಿಯಾದ ಭಗವಂತನು ನನ್ನನ್ನು ನೆನೆಸಿಕೊಳ್ಳುವುದು ಪ್ರಾಪ್ತಿಗೆ ಉಪಾಯ. ಚೇತನೋಜ್ಜೀವನಾರ್ಥವಾದ ಅವನ ಈ ನೆನಪು ಯಾವಾಗಲೂ ಇದ್ದೇ ಇರುವುದಾದರೂ ಅದು ಫಲಿಸುವುದು ಮಾತ್ರ 'ಇವನ್ ನಿನೈವು ಮಾರಿನಾಲ್'

ಎಂದರೆ ಈ ಚೇತನನ ಸ್ವರಕ್ಷಣ ಚಿಂತೆ ಮೊದಲಾದ ಕಾಲದಲ್ಲಿ. ತನ್ನನ್ನು ತಾನು ಕಾಪಾಡಿಕೊಳ್ಳಲು ಪ್ರಯತ್ನಿಸುವುದನ್ನು ಇವನು ಬಿಟ್ಟಾಗ ಭಗವಂತನ ಚೇತನೋಜ್ಜೀವನ ಚಿಂತೆ ಫಲಿಸುತ್ತದೆ. ಉಪಾಯನೂ ಭಗವಂತನೇ. ಲಾಭವನ್ನು ಹೊಂದುವವನೂ ಅವನೇ. ಸ್ವತ್ತಿನಲಾಭದಲ್ಲಿ ಭೋಕ್ತೃವಾದ ಸ್ವಾಮಿ ಸಂತೋಷಗೊಳ್ಳುವಂತೆ ಚೇತನನನ್ನು ಪಡೆದಾಗ ಸಂತೋಷಿಸುವವನೂ ಭಗವಂತನೇ. ಹೀಗೆ ಸ್ವಪ್ರಯೋಜನದಲ್ಲಿಯೂ ಇವನಿಗೆ ಅನ್ವಯವಿಲ್ಲವೆಂಬುದನ್ನು ಅರಿಯಬೇಕು. 'ಸ್ವಯತ್ನನಿವೃತ್ತಿ ಪಾರತಂತ್ರ್ಯದಫಲ. ಸ್ವಪ್ರಯೋಜನನಿವೃತ್ತಿ ಶೇಷತ್ವಫಲ.' "ಭಗವತ್ಪ್ರವೃತ್ತಿ ವಿರೋಧಿ ಸ್ವಪ್ರವೃತ್ತಿನಿವೃತ್ತಿ: ಪ್ರಪತ್ತಿ:"–ಎಂಬಂತೆ ಅವನೇ ಉಪಾಯವೆಂಬ ಅಧ್ಯವಸಾಯದಿಂದ ಸ್ವಪ್ರವೃತ್ತಿಯಿಂದ ನಿವೃತ್ತನಾಗಿರುವುದು ಪ್ರಪತ್ತಿಯತ್ತಿರುಳು.

ಅವಾಪ್ತಸಮಸ್ತಕಾಮನಾದ ಭಗವಂತ ಪರಿಪೂರ್ಣನಾದುದರಿಂದ ಇವನು ಅವನಿಗಾಗಿ ಮಾಡಬೇಕಾದುದೇನೂ ಇಲ್ಲ. "ಆಭಿಮುಖ್ಯಸೂಚಕಮಾತ್ರತ್ತಲೇ ಸಂತೋಷಂ ವಿಳೈಯುಮ್' (ಸೂ. 137) ಎಂಬಂತೆ ಕೇವಲ ಭಗವದಾಭಿಮುಖ್ಯವೇ ಸಾಕು ಭಗವಂತನನ್ನು ಸಂತೋಷಪಡಿಸಲು. ವಿಲಕ್ಷಣಗುಣವಿಶಿಷ್ಟನಾದ ಭಗವಂತನೇ ಇವನನ್ನು ಸೇರಿಸಿಕೊಳ್ಳಲು ಉಪಾಯನಾಗಿದ್ದಾನೆ. ಹಾಗೆಯೇ ಎಂದೆಂದೂ ಇವನಿಗೆ ಉಪೇಯನೂ ಆಗಿದ್ದಾನೆ. ಫಲಸಾಧನಗಳೆರಡೂ ಒಂದೇವಸ್ತುವಾಗಿದೆ.

ಇಲ್ಲಿ ಸಿದ್ಧೋಪಾಯಕ್ಕೇ ಪ್ರಾಧಾನ್ಯ. ಪರಗತಸ್ವೀಕಾರೋಪಾಯತ್ವವನ್ನು ಇಲ್ಲಿ ಒತ್ತಿಹೇಳಿದೆ. 'ಪ್ರಾಪ್ತಿಕ್ಕುಪಾಯಂ ಅವನ್ ನಿನ್ನೈವು' ಎಂಬಲ್ಲಿ ಈಶ್ವರ ಸಂಕಲ್ಪವೇ ಮುಕ್ತಿಗೆ ಉಪಾಯವೆಂದು ತಿಳಿಸಿದೆ. ಭಗವಂತನು ಈ ಚೇತನನನ್ನು ಸ್ವೀಕರಿಸಲು ಸಂಕಲ್ಪಿಸಿದರೆ ಈ ಚೇತನನ ಪಾತಕವೂ ಅಡ್ಡಿಯಾಗದು.

"ಚಿತಃಪರಮಚಿಲ್ಲಾಭೇ ಪ್ರಪತ್ತಿರಪಿನೋಪಾಧಿಃ। ವಿಪರ್ಯಯೇತು ನೈವಾಸ್ಯ ಪ್ರತಿಷೇಧಾಯ ಪಾತಕಮ್ ॥" ಎಂಬಲ್ಲಿ ಇದನ್ನು ಹೇಳಿದ್ದಾರೆ. ಪ್ರಪತ್ತ್ಯುಪಾಯಕ್ಕೆ ಇತರ ಉಪಾಯಗಳಿಗಿರುವಂತಹ ದೋಷಗಳಾವುವೂ ಇಲ್ಲ. ವಸ್ತುತಃ ಉಪಾಯತ್ವವಿಲ್ಲದಿದ್ದರೂ ಆಪಾತತಃ ಉಪಾಯತ್ವಪ್ರತೀತಿ ಇದೆ. ಇದೊಂದೇ ಇದರ ದೋಷ. ಪ್ರಪತ್ತಿ ಆತ್ಮಯಾಥಾತ್ಮ್ಯ ಜ್ಞಾನದ ಕಾರ್ಯವಾದುದರಿಂದ ನಮ್ಮ ಸ್ವರೂಪಕ್ಕೆ ಉಚಿತವಾದುದು. ನಿವೃತ್ತಿ ಸಾಧ್ಯವಾದುದರಿಂದ ಸುಖಕರವಾದುದು. ಸಾಧ್ಯವಸ್ತುವೇ ಸಾಧನವಾದುದರಿಂದ ಸುಖರೂಪವಾದುದು. ಪ್ರಪತ್ತಿಯಲ್ಲಿ ಗುಣಾಂಶಗಳಿವೆ, ದೋಷಗಳಿಲ್ಲ.

ಪ್ರಪತ್ತಿಯನ್ನನುಷ್ಠಿಸಿದವನು ಇತರ ಉಪಾಯಗಳನ್ನು ಬಿಡಬೇಕು. ಏಕೆಂದರೆ ಅವು ಸ್ವರೂಪವಿರುದ್ಧವಾದವು. ನಮ್ಮ ಸ್ವರೂಪ ಭಗವಂತನಿಗೆ ಅತ್ಯಂತವಾಗಿ ಪರ

ತಂತ್ರರಾಗಿರುವುದೇ ಆಗಿದೆ. ಆ ಕಾರಣ ಪ್ರಾಪಕಾಂತರಗಳು ನಮಗೆ ತಕ್ಕುವಲ್ಲ. ಸಾಮರ್ಥ್ಯವಿದ್ದರೂ ಇತರ ಉಪಾಯುಗಳನ್ನು ನಾವು ಸ್ವೀಕಾರ ಮಾಡಬಾರದೆಂಬುದು ಇದರ ತಾತ್ಪರ್ಯ. ಜ್ಞಾನಿಗಳಿಗೆ ಪ್ರಾಪಕಾಂತರ ಅಪಾಯಕರ ಹಾಗೂ ಸ್ವರೂಪ ನಾಶಕ. ಪ್ರಪನ್ನನಿಗೆ ಪ್ರಾಮಾದಿಕವಾಗಿ ಉಪಾಯಾಂತರ ಪ್ರವೃತ್ತಿ ಬಂದರೆ ಪುನಃ ಪ್ರಪತ್ತಿರೂಪವಾದ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು 'ಪ್ರಾಯಶ್ಚಿತ್ತಿರಿಯಂ ಯತ್ರ ಯತ್ಪುನಶ್ಶರಣಂವ್ರಜೇತ್' ಎಂದು ಹೇಳಿಸುವುದು ಪ್ರಾಪಕಾಂತರದ ಅಪಾಯಕರತ್ವ ಸೂಚಿಸುತ್ತದೆ. ಇಲ್ಲಿ ಪುನಃ ಪ್ರಪದನವೆಂದರೆ ಪೂರ್ವಪ್ರಪದನದ ಸ್ಮರಣೆ ಎಂದು ತಿಳಿಯಬೇಕು.

'ಓಮಿತ್ಯಾತ್ಮಾನಂ ಧ್ಯಾಯಥ' ಎಂಬೆಂದು ಉಪನಿಷತ್ತುಗಳು ಏಕೆ ಧ್ಯಾನ ವನ್ನು ಉಪಾಯವನ್ನಾಗಿ ವಿಧಿಸಿವೆ ಎಂದರೆ ಈಶ್ವರನ ಉಪಾಯತ್ವವನ್ನು ತಿಳಿಯ ಪಡಿಸುವುದಕ್ಕಾಗಿ ಎಂದು ತಿಳಿಯಬೇಕು. 'ಔಷಧ ಸೇವೈಪಣ್ಣಾತವರ್ಹಳುಕ್ಕು ಅಭಿಮತವಸ್ತುಕ್ಕಳಿಲೇ ಅತ್ತೈ ಕಲತಿಯಿಡುವಾರ್ಪ್ಪೋಲೇ ಈಶ್ವರನ್ನೈ ಕಲಂದ್ ವಿಧಿಕ್ಕಿರವಿತ್ತನ್ನೈ' (ಸೂ. 128) ಎಂದು ಪಿಳ್ಳೈಲೋಕಾಚಾರ್ಯರು ಹೇಳುತ್ತಾರೆ. ಚೇತನರಿಗೆ ಅಭಿಮತವಾದ ಸ್ವಯತ್ನರೂಪವಾದ ಉಪಾಸನದಲ್ಲಿ ಚೇತನರನ್ನು ಶಾಸ್ತ್ರ ಉಪ್ಯೋಗಿಸುವುದು ಉಪಾಸನೆಗಿಂತ ಅದರೊವನೆ ಸಂಬಂಧಿಸಿದ ಈಶ್ವರನೇ ಉಪಾಯ ವೆಂಬುದನ್ನು ಸ್ಪಷ್ಟವಾಗಿ ತಿಳಿಯಪಡಿಸುವ ಉದ್ದೇಶದಿಂದ. ಯಾಗಾದಿಕರ್ಮಗಳಿಂದ ಮನಸ್ಸನ್ನು ಬಿಡಿಸಿ ಹಾಗೆಯೇ ಸ್ವರ್ಗಾದಿ ಸಾಧನಗಳಿಂದ ಅಗ್ನೀಂದ್ರಾದಿಗಳನ್ನು ಭಜಿಸುವುದನ್ನು ತಪ್ಪಿಸಿ ಭಗವದೇಕ ವಿಷಯವಾದ ಉಪಾಸನೆಯಲ್ಲಿ ಅವರನ್ನು ತೊಡಗಿಸುವುದಕ್ಕಾಗಿ ವಿವಿಧವಾದ ಉಪಾಸನೆಗಳನ್ನು ವಿಧಿಸಿದೆ. ಉಪಾಸನವಿಧಿಗೆ ಕಾಮ್ಯಕರ್ಮನಿವೃತ್ತಿ ಉದ್ದೇಶ. ಆದರೆ ಈ ಉಪಾಸನೆಯೂ ಸ್ವರೂಪ ವಿರುದ್ಧ ವಾದುದರಿಂದ ಇದನ್ನು ಬಿಟ್ಟುಕೊಟ್ಟು ಭಗವಂತನಲ್ಲಿ ಪ್ರಪತ್ತಿನಿಷ್ಠನಾಗಬೇಕು. ಈ ಉಪಾಸನವಿಧ ಶಾಸ್ತ್ರವಿಶ್ವಾಸವನ್ನು ಮಾಡಿಸುವುದಕ್ಕಾಗಿ ಆದುದು. ತಾನು ಸ್ವತಂತ್ರ ನೆಂದಾಗಲೀ, ಅನ್ಯಶೇಷ ಭೂತನೆಂದಾಗಲೀ ತಿಳಿಯುವೆ ಇರಲೆಂದೂ ತನ್ನ ಸ್ವರೂಪ ಸಾಧಕನಿಗೆ ಗೊತ್ತಾಗಲೆಂದೂ ಉಪಾಸನ ವಿಧಿ ಬಂದಿದೆ. 'ಸ್ವರೂಪ ವಿಶ್ವಾಸ ತ್ತುಕ್ಕಾಹ ವಿಧಿತ್ತದು' (ಸೂ 131) ಎಂದು ಇದನ್ನು ತಿಳಿಸಿದ್ದಾರೆ. ಭಗವದೇಕ ಪಾರತಂತ್ರ್ಯರೂಪ ಸ್ವರೂಪಕ್ಕೆ ಉಪಾಸನೆ ಹಾನಿಯುಂಟುಮಾಡುವುದರಿಂದ ಅದು ಯುಕ್ತವಾದುದಲ್ಲ.

ಭಗವನ್ನಿಷ್ಠನಾದವನು ಪ್ರಪನ್ನ. ಸಿದ್ಧೋಪಾಯನಿಷ್ಠನ ಪ್ರಭಾವ ಅಮಿತ ವಾದುದು. ಪ್ರಪನ್ನನ ಆರ್ತಿಯನ್ನು ನೋಡಿ ಕರುಣೆತೋರಿ ರಕ್ಷಿಸುವುದಕ್ಕಿಂತ ಭಗ ವಂತನ್ನು ತನ ನಿರ್ಹೇತುಕ ಕೃಪೆಯಿಂದಲೂ ಸ್ವಾತಂತ್ರ್ಯದಿಂದಲೂ ಸಲಹುವುದು

ಶ್ರೇಷ್ಠಕರ. (ಸೂ 148) ಯ ಮೇವೈಷ ವೃಣುತೇ ತೇನಲಭ್ಯಃ' ಎಂಬ ಶ್ರುತಿ ಭಗವಂತನು ಅಪೇಕ್ಷಾನಿರಪೇಕ್ಷನಾಗಿ ನಮ್ಮನ್ನು ಸಲಹುವನೆಂದು ಸಾರಿ ಹೇಳುತ್ತಿದೆ.

ಹೀಗೆ ಈ ಸಂಪ್ರದಾಯಕ್ಕನುಸಾರವಾಗಿ ನಮ್ಮ ಸ್ವರೂಪೋಚಿತವಾದ ಸಾಧನ ವೆಂದರೆ ಈ ಪ್ರಪತ್ತಿಯೇ. ಇದು ಸ್ವಪ್ರವೃತ್ತಿನಿವೃತ್ತಿರೂಪವಾದುದು. ಭಗವಂತನು ನಮ್ಮನ್ನು ರಕ್ಷಿಸುವನೆಂಬ ವಿಶ್ವಾಸದಿಂದ ಅವನ ರಕ್ಷಣೆಯನ್ನೇ ನಿರೀಕ್ಷಿಸುತ್ತಾ ಇರು ವುದು ಪ್ರಪನ್ನನ ಲಕ್ಷಣ. ಇಲ್ಲಿ ಅರ್ಥಪಂಚಕ ಜ್ಞಾನದ ಅನುಸಂಧಾನ ಪೂರ್ಣ ವಾಗಿರುವುದು.

ಈ ಸಂಪ್ರದಾಯ ಪ್ರವರ್ತಕರಾದ ಆಚಾರ್ಯರುಗಳು ಪ್ರಪತ್ತಿಯ ಮಹತ್ವ ವನ್ನು ಹೀಗೆ ಒತ್ತಿ ಹೇಳಿದ್ದಾರೆ. ಪ್ರಪತ್ತಿಯೇ ರಾಮಾನುಜರ ಇಷ್ಟೋಪಾಯ ವೆಂದೂ ಸಮರ್ಥಿಸಿದ್ದಾರೆ.

# ತಿರುಪಾಣಿ ಆಳ್ವಾರ್

## ಎಂ. ವಿ. ಸಂಪತ್ಕುಮಾರಾಚಾರ್

ವಂದೇ ಶ್ರೀಪಾಣ ಯೋಗೀಂದ್ರಂ ಲೋಕಸಾರಂಗಸೇವಿತಂ ।
ಶ್ರೀರಂಗನಾಥ ಕೈಂಕರ್ಯನಿರತಂ ಗಾಯಕೋತ್ತಮಂ ॥

ಲೋಕದಲ್ಲಿ ಅನೇಕ ಸಂಪ್ರದಾಯಗಳುಂಟು. ಪ್ರತಿಯೊಂದು ಸಂಪ್ರದಾಯ ದಲ್ಲೂ ಒಂದು ವಿಧವಾದ ವಿಶೇಷ ಮಹತ್ವವು ಇದ್ದೇ ಇವೆ. ಈ ವಿಶೇಷವನ್ನು ಅರಿಯಬೇಕಾದರೆ ಸ್ವಲ್ಪ ಹೆಚ್ಚು ಹೃದಯ ವೈಶಾಲ್ಯ ಮತ್ತು ಸಮಾಲೋಚನೆಯು ಅತ್ಯಗತ್ಯ.

"ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ"—ಎಂದು ಮಹಾಕವಿ ಭವಭೂತಿಯು ತಿಳಿಸಿರುವಂತೆ, ಶ್ರೀ ವೈಷ್ಣವ ಸಂಪ್ರದಾಯದಲ್ಲಿ, ಜಾತಿ, ಮತ, ಇವುಗಳಿಗಿಂತ ಜ್ಞಾನ ಭಕ್ತಿಗಳಿಗೇ ಪ್ರಾಶಸ್ತ್ಯವು ದೊರೆತಿವೆ. ಇದಕ್ಕೆ ಈ ಲೇಖನಕ್ಕೆ ವಿಷಯೀಭೂತರಾದ ಶ್ರೀ ತಿರುಪಾಣಿ ಆಳ್ವಾರ್ ಅವರೇ ನಿದರ್ಶನ ರಾಗಿದ್ದಾರೆ.

"ಆಳ್ವಾರ್" ಎಂದರೆ ಭಗವದ್ಗುಣಾತಿಶಯದಲ್ಲಿಯೇ ನಿರತರಾದವರು ಎಂದರ್ಥ. ಅಥವಾ "ಜ್ಞಾನಿಗಳು" "ಸಂತರು" "ಭಕ್ತಾಗ್ರೇಸರರು" ಎಂಬ ಅರ್ಥದಲ್ಲಿಯೂ ಇದನ್ನು ಉಪಯೋಗಿಸಬಹುದು. ಈ ರೀತಿಯಾದ ಆಳ್ವಾರ್‌ಗಳು ಹತ್ತು ಜನ. ಅವರ ದಿವ್ಯ ನಾಮಧೇಯಗಳು ಹೀಗಿವೆ. 1) ಪೊಯ್‌ಕೈ ಆಳ್ವಾರ್ 2) ಪೂದತ್ತಾಳ್ವಾರ್ 3) ಪೇಯಾಳ್ವಾರ್ 4) ತಿರುಮಳಿಸೈ(ಪ್ಪಿರಾನ್) ಆಳ್ವಾರ್ 5) ನಮ್ಮಾಳ್ವಾರ್ 6) ಕುಲಶೇಖರಾಳ್ವಾರ್ 7) ಪೆರಿಯಾಳ್ವಾರ್ 8) ತೊಂಡರಡಿ ಪ್ಪೊಡಿ ಆಳ್ವಾರ್ 9) ತಿರುಪ್ಪಾಣಾಳ್ವಾರ್ 10) ತಿರುಮಂಗೈ ಆಳ್ವಾರ್.

ನಮ್ಮಾಳ್ವಾರ್ ಅವರ ತಿರುವಡಿಯೆನಿಸಿದ ಮಧುರ ಕವಿ ಆಳ್ವಾರ್ ಅವರನ್ನು, ಪೆರಿಯಾಳ್ವಾರ್ ಅವರ ಸುಪುತ್ರಿಯಾದ ಶ್ರೀ ಗೋದಾದೇವಿಯನ್ನು ಸೇರಿಸಿಕೊಂಡು

12 ಜನಳಿಂದೂ ಹೇಳುವ ಪದ್ಧತಿಯುಂಟು.

ಶ್ರೀರಂಗ ಕ್ಷೇತ್ರಕ್ಕೆ ಸಮೀಪದಲ್ಲಿರುವ ಉರೈಯೂರ್ ಎಂಬ ಸ್ಥಳದಲ್ಲಿ ಕಾರ್ತಿಕ ಮಾಸ ರೋಹಿಣೀ ನಕ್ಷತ್ರದಲ್ಲಿ ಸಂತಾನ ರಹಿತರಾದ ಹರಿಜನ ದಂಪತಿಗಳಿಗೆ ಭತ್ತದ ಗದ್ದೆಯಲ್ಲಿ ಒಂದು ಶಿಶುವು ದೊರೆಯಿತು. ಅವರು ಆ ಶಿಶುವನ್ನು ಬಹಳ ಸಂತೋಷ ದಿಂದ ಕರೆದುಕೊಂಡು ಹೋಗಿ ಬಹಳ ಪ್ರೀತಿಯಿಂದ ಬೆಳೆಸಿದರು. ಆ ಶಿಶುವು ಪವಿತ್ರವಾದ ಗೋಕ್ಷೀರವನ್ನಲ್ಲದೆ ತಾಯಿಯ ಹಾಲನ್ನು ಕುಡಿಯುತ್ತಿರಲಿಲ್ಲ. ಹೀಗೆ ತಿರುಪ್ಪಾಣರ ಅವತಾರವಾಯಿತು. ಇವರು ಶ್ರೀ ವತ್ಸಾಂಶ ಸಂಭೂತರೆಂದು ತಿಳಿದು ಬರುತ್ತದೆ.

" ಅಥತತ್ರ ಕುಲೇಽಂತಿಮೇರಮಾರಮಣೋರಃ ಸ್ಥಿತಲಾಂಛನಾಂಶಜಃ ।
ಸಮಜಾಯತ ಪಾಣಸಂಜ್ಞಕಃ ಸುಕವಿಃ ಕಾರ್ತಿಕಮಾಸಿ ವೈದಭೇ " ॥

(ಆ ಉರೈಯೂರ್ ಎಂಬ ಸ್ಥಳದಲ್ಲಿ ಅಂತಿಮ ವರ್ಣದಲ್ಲಿ ಶ್ರೀ ಲಕ್ಷ್ಮೀವಲ್ಲಭ ನಾದ ಶ್ರೀಮನ್ನಾರಾಯಣನ ವಕ್ಷಃಸ್ಥಳದಲ್ಲಿ ವಿರಾಜಿಸುವ ಶ್ರೀವತ್ಸಲಾಂಛನಾಂಶ ಸಂಭೂತರಾದ, ತಿರುಪ್ಪಾಣಾಳ್ವಾರ್ ಎಂಬ ದಿವ್ಯ ನಾಮಧೇಯದಿಂದ ಪ್ರಕಾಶಿಸುವ ಉತ್ತಮ ಕವಿವರ್ಯರೊಬ್ಬರು ಕಾರ್ತಿಕ (ವೃಶ್ಚಿಕ) ಮಾಸದಲ್ಲಿ ಪ್ರಜಾಪತಿ ದೇವತಾಕ ವಾದ ರೋಹಿಣೀ ನಕ್ಷತ್ರದಲ್ಲಿ ಅವತರಿಸಿದರು).

" ಪ್ರಜಾಪತೇ ರೋಹಿಣೀ ವೇತುಪತ್ನೀ " ಎಂದೂ " ರೋಹಿಣೀ ನಕ್ಷತ್ರಂ ಪ್ರಜಾಪತಿರ್ದೇವತಾ " ಎಂದು ವೇದವು ಉದ್ಘೋಷಿಸಿರುವಂತೆ ಇವರು ವಿರಿಂಚಿದೇವ ತಾಕವಾದ ರೋಹಿಣೀ ನಕ್ಷತ್ರದಲ್ಲಿ ಅವತರಿಸಿದರು.

"ಶ್ರೀವೇಲಾಬ್ದವಿಸರ್ಗಮೇ ಕಲಿಯುಗೇ ಸಂವತ್ಸರೇ ದುರ್ಮತೌ ಭಾನೌ ವೃಶ್ಚಿಕ ಭಾಜಿ ಪಂಚಮದಿನೇ ವಾರೇ ಬುಧಸ್ಯೋತ್ತಮೇ । ರೋಹಿಣ್ಯಾಸಹಿತೇ ಲಸತ್ಯುಡು ಪತೌ ಕೃಷ್ಣೇ ದ್ವಿತೀಯಾತಿಥೌ ಸಂಜಜ್ಞೇ ಮುನಿವಾಹನಸ್ಸ್ವರಣಯೋಃ ಯೋ ರಂಗಿಣೋಽಂತರ್ದಧೇ ॥ " ಎಂದು ಗುರುಪರಂಪರಾ ಪ್ರಭಾವದಲ್ಲಿ ಮತ್ತೊಂದು ಶ್ಲೋಕ ಇವರ ಅವತಾರವನ್ನು ಹೀಗೆ ವರ್ಣಿಸಿದೆ.

ಇವರ ಕಾಲವು ಕಲ್ಯಬ್ದ 342 ಅಥವಾ ಕ್ರಿ.ಪೂ. 2759.

ಪರಮಾತ್ಮನ ನಿರ್ಹೇತುಕ ಕಟಾಕ್ಷಕ್ಕೆ ಪಾತ್ರರಾದ ಇವರು ಜನ್ಮತಃ ಜ್ಞಾನಭಕ್ತಿ ವೈರಾಗ್ಯಗಳನ್ನು ಪಡೆದುಕೊಂಡು ಅತಿಸಾತ್ವಿಕರಾಗಿ, ಅಪ್ರಾಕೃತಸಂಗೀತದಲ್ಲಿ ಪ್ರವೀಣರಾಗಿ ಉಭಯಕಾವೇರೀ ಮಧ್ಯ ಪ್ರದೇಶದಲ್ಲಿ, ತಮ್ಮ ವರ್ಣದ ಪದ್ಧತಿ ಯನ್ನು ಅತಿಕ್ರಮಿಸದೇ ವೀಣೆಯನ್ನು ಸದಾ ಕೈಯಲ್ಲಿ ಧರಿಸಿಕೊಂಡು ಶ್ರೀರಂಗನಾಥ

ನನ್ನು ಅದೇ ದಿಕ್ಕಿಗೆ ಅಭಿಮುಖವಾಗಿದ್ದುಕೊಂಡು ಅನವರತವೂ ಧ್ಯಾನಿಸಿಕೊಂಡಿರುತ್ತಿದ್ದರು. ಇವರ ಗಾನವು ದೇವರ್ಷಿಗಳಾದ ನಾರದ ಮಹಾಮುನಿಗಳ ಗಾನದಂತೆ ಅನ್ಯಾದೃಶವಾಗಿರುತ್ತಿತ್ತು. ಅವರು ಸರ್ವದಾ ಭಗವನ್ನಾಮಾಮೃತವನ್ನು ಗಾನರೂಪದಲ್ಲಿ ಪಾನ ಮಾಡುತ್ತಿದ್ದರು. ಹೀಗಿರುತ್ತಿರಲು ಶ್ರೀರಂಗನಾಥನ ಕೈಂಕರ್ಯಪರರಾದ ಲೋಕ ಸಾರಂಗ ಮುನಿಗಳು ಉಷಃಕಾಲದಲ್ಲಿಯೇ ಶ್ರೀರಂಗನಾಥನಿಗೋಸ್ಕರ ಅಭಿಷೇಕ ತೀರ್ಥವನ್ನು ತರಲು ಕಲಶ ಹಸ್ತರಾಗಿ ಕಾವೇರೀ ನದಿಗೆ ಹೋದಾಗ ಇವರನ್ನು ನೋಡಿ "ದೂರಹೋಗು" ಎಂದು ಹೇಳಿ ಒಂದು ಕಲ್ಲನ್ನು ಇವರ ಮೇಲೆ ಎಸೆದಾಗ ಅದು ಇವರ ಮುಖಕ್ಕೆ ತಗುಲಿ ರಕ್ತವು ಧಾರಾಕಾರವಾಗಿ ಪ್ರವಹಿಸತೊಡಗಿತು. ಆ ಸಮಯದಲ್ಲಿ ಇವರು ಕಣ್ಣುಮುಚ್ಚಿಕೊಂಡು ಧ್ಯಾನನಿರತರಾಗಿದ್ದುದರಿಂದ ಲೋಕ ಸಾರಂಗರು ಬಂದುದು ಇವರಿಗೆ ತಿಳಿಯಲಿಲ್ಲ. ಕಲ್ಲುತಗುಲಿದ ಕೂಡಲೇ ಇವರು ಬಹಿರ್ಮುಖರಾಗಿ ಅವರನ್ನು ನೋಡಿ ತಕ್ಷಣವೇ ಪಶ್ಚಾತ್ತಾಪತಪ್ತರಾಗಿ "ನನ್ನಿಂದ ಭಾಗವತಾಪಚಾರವಾಯಿತು" ಎಂದು ಹೇಳುತ್ತಾ ದೂರಹೋಗಿ ನಿಂತರು. ಅವರು ತಮ್ಮ ನಿತ್ಯಕರ್ಮಾನುಷ್ಠಾನಗಳನ್ನು ಆಚರಿಸಿ, ಛತ್ರಚಾಮರ ಮೊದಲಾದ ವೈಭವ ಮತ್ತು ವಾದ್ಯಘೋಷದೊಡನೆ ಶ್ರೀರಂಗನಾಥನ ಸನ್ನಿಧಿಗೆ ದಯಮಾಡಿಸಿದರು. ಅಷ್ಟರಲ್ಲಿಯೇ ಶ್ರೀರಂಗನಾಥನೂ ಮತ್ತು ಶ್ರೀದೇವಿಯೂ ತಮ್ಮ ಭಕ್ತನಿಗೆ ಇವರಿಂದ ಅಪಚಾರವಾಯಿತೆಂದು ಭಾವಿಸಿ ಅಸಮಾಧಾನದಿಂದ ತಮ್ಮ ಗರ್ಭಗೃಹದ ಬಾಗಿಲನ್ನೇ ತೆಗೆಯಲಿಲ್ಲ. ಆಗ ಲೋಕಸಾರಂಗ ಮುನಿಗಳು ಬಹಳ ವ್ಯಾಕುಲಗೊಂಡು "ತನ್ನಿಂದ ಮಹಾಭಾಗವತಾಪಚಾರವಾಯಿತು"—ಎಂದು ಹೇಳುತ್ತಾ "ತನ್ನ ಅಪರಾಧವನ್ನು ಕ್ಷಮಿಸಬೇಕು" ಎಂದು ಪ್ರಾರ್ಥಿಸಿದರು. ಆಗ ಶ್ರೀರಂಗನಾಥನು "ನನ್ನ ಭಕ್ತೋತ್ತಮನಾದ ತಿರುಪ್ಪಾಣರನ್ನು ನೀವು ತೋಳಿನ ಮೇಲೆ ಕೂಡಿಸಿಕೊಂಡು ನನ್ನ ಸಮೀಪಕ್ಕೆ ಕರೆತರಬೇಕೆಂದು" ಸ್ವಪ್ನಮುಖೇನ ಆಜ್ಞಾಪಿಸಲು, ಅವರು ಉಷಃಕಾಲದಲ್ಲಿಯೇ ಎದ್ದು, "ಅದ್ಯಮೇ ಸಫಲಂ ಜನ್ಮ ಸುಪ್ರಭಾತಾ ಚಮೇನಿಶಾ" ಎಂದು ಯೋಚಿಸುತ್ತಾ ಪರಮಾನಂದ ಭರಿತರಾಗಿ "ಸುದೂರಮಪಿಗಂತವ್ಯಂ ಯತ್ರ ಭಾಗವತಃ ಸ್ಥಿತಃ"—ಎಂಬಂತೆ ಭಗವದ್ಭಕ್ತನೊಬ್ಬನ ದರ್ಶನವಾಗಬೇಕಾದರೆ ಎಷ್ಟು ದೂರವಾದರೂ ಹೋಗಲೇಬೇಕೆಂದು ನಿಶ್ಚಯಿಸಿ, ಅವರಿರುವ ಸ್ಥಳಕ್ಕೆ ಹೋಗಿ ಅವರಿಗೆ ದಂಡವತ್ ಪ್ರಣಾಮವನ್ನು ಮಾಡಿ, "ಶ್ರೀರಂಗನಾಥರು ನಿಮ್ಮನ್ನು ಕರೆದುಕೊಂಡು ಬರಬೇಕೆಂದು ಆಜ್ಞಾಪಿಸಿರುವರು"—ಎಂದು ತಿಳಿಸಲು ಅವರು "ನೀಚನಾದ ನಾನು ಆ ಪವಿತ್ರವಾದ ಶ್ರೀರಂಗಕ್ಷೇತ್ರ ಭೂಮಿಯನ್ನು ಕಾಲಿನಿಂದ ತುಳಿಯಲು ಅಯೋಗ್ಯ"ನೆಂದು ತಮ್ಮ ನೈಚ್ಯವನ್ನು ತಿಳಿಸಿದಾಗ, ಲೋಕಸಾರಂಗರು "ನೀವು ಆ ಭೂಮಿಯನ್ನು ಕಾಲಿನಿಂದ ಸ್ಪರ್ಶಿಸಬೇಕಾಗಿಲ್ಲ. ನನ್ನ ತೋಳಿನ ಮೇಲೆ ಕುಳಿತು, ಶ್ರೀರಂಗನಾಥನ ಆಜ್ಞೆಯಂತೆ ಅಲ್ಲಿಗೆ ಬರಬೇಕು"—ಎಂದು ಬಲಾತ್ಕರಿಸಿದರು. ಹೀಗೆ ಅವರಿಬ್ಬರಿಗೂ ಸ್ವಲ್ಪಕಾಲ ಚರ್ಚೆ ನಡೆದು ಕೊನೆಗೆ ಅವರು ತಿರುಪ್ಪಾಣರನ್ನು ತಮ್ಮ

ಭುಜದ ಮೇಲೆ ಕೂರಿಸಿಕೊಂಡು ಶ್ರೀರಂಗನಾಥನ ಸನ್ನಿಧಿಗೆ ದಯಮಾಡಿಸಿದರು. ಆ ದಿವ್ಯಮಂಗಳ ವಿಗ್ರಹದ ದರ್ಶನಲಾಭದಿಂದ ಪುಲಕಿತಾಂತಃಕರಣರಾದ ಶ್ರೀತಿರು ಪ್ಪಾಣರು ಅತಿಶಯಭಕ್ತಿಪರವಶರಾಗಿ, ಚತುರ್ಮುಖ ಬ್ರಹ್ಮನಿಗೂ ಪಡೆಯಲಶಕ್ಯವಾದ ದಿವ್ಯಚಕ್ಷುಸ್ಸುಗಳಿಂದ—

"ಕಿರೀಟ ಕೇಯೂರಕ ರತ್ನಕುಂಡಲಂ ಪ್ರಲಂಬಮುಕ್ತಾಮಣಿಹಾರಭೂಷಿತಂ ।
ವಿಶಾಲ ವಕ್ಷಃ ಸ್ಥಳಶೋಭಿಕೌಸ್ತುಭಂ ಶ್ರಿಯಾಜದೇವ್ಯಾಽಧ್ಯುಷಿತೋರು ವಕ್ಷಸಂ ॥
ಪ್ರತಪ್ತಚಾಮೀಕರಚಾರುವಾಸಸಂ ಸುಮೇಖಲಂ ನೂಪುರ ಶೋಭಿತಾಂಘ್ರಿಕಂ ।
ಸುವರ್ಧುನೀಜಾತ ಮೃಣಾಳ ಕೋಮಲಂ ದಧಾನಮುಚ್ಚಚ್ಛವಿ ಯಜ್ಞಸೂತ್ರಕಂ ॥
ಭುಜೋಪಧಾನಂ ಪ್ರಸೃತಾನ್ಯಹಸ್ತಂ ನಿಕುಂಚಿತೋಕ್ತಾನಿತಪಾದಯುಗ್ಮಂ ।
ಸುದೀರ್ಘ ಮುದ್ಬಾಹು ಮುದಗ್ರವೇಷಂ ಭುಜಂಗತಲ್ಪಂ ಪುರುಷಂದದರ್ಶ "—

ಎಂದು ತಿಳಿಸಿರುವಂತೆ, ನಿತ್ಯ ದರಿದ್ರನಿಗೆ ನಿಧಿ ಜಾಲವೇ ದೊರೆತಷ್ಟು ಆನಂದವನ್ನು ಹೊಂದಿ "ಏ ಕಣ್ಣಿನುಳ್ಳನವೊಕ್ಕಿನ್ನದೇ " ಎಂದು ನನ್ನ ನಿಕೃಷ್ಟವಾದ ಕಣ್ಣಿನಲ್ಲಿ ನಿನ್ನ ಪಾದಾರವಿಂದಗಳು ಪ್ರಕಾಶಿಸುತ್ತಾ ನೆಲೆಗೊಂಡಿವೆ—ಎಂದು ಸ್ತೋತ್ರಮಾಡಲು ಪ್ರಾರಂಭಿಸಿ ಅವನ ದಿವ್ಯ ಸೌಂದರ್ಯವನ್ನು ಮನಃಪೂರ್ತಿಯಾಗಿ ಅನುಭವಿಸುತ್ತಾ, ಪಾದಾದಿಕೇಶಾಂತವಾಗಿ ಮತ್ತೆ ಮತ್ತೆ ಆ ದಿವ್ಯ ಸುಂದರ ವಿಗ್ರಹದಿಂದ ಮುಗ್ಧರಾಗಿ, ಅದರಿಂದ ಉದ್ಭವಿಸಿದ ಆ ಆನಂದರಸವನ್ನು ಹೃದಯದಲ್ಲಿ ಧರಿಸಿಕೊಳ್ಳಲು ಅಸಮರ್ಥ ರಾಗಿ " ಅಮಲನಾದಿಪರ್ರಾ " ಎಂಬ ದಿವ್ಯವಾದ ಪ್ರಬಂಧದ ಮೂಲಕ ಆ ಆನಂದ ಸಾರಸರ್ವಸ್ವವನ್ನು ಪ್ರಪಂಚಕ್ಕೆ ಅನುಗ್ರಹಿಸಿದರು. ಅಲ್ಲದೆ ತಾವು ಆ ಶ್ರೀರಂಗ ನಾಥನ ಪಾದಾರವಿಂದಗಳಲ್ಲಿಯೇ ಐಕ್ಯವಾದರು ಎಂದು ಹಿರಿಯರು ಅಪ್ಪಣೆ ಕೊಡಿ ಸಿರುತ್ತಾರೆ.

" ಏ ಅಮುದನ್ನೈಕ್ಕಂಡಕಣ್‌ಗಳ್‌ ಮತ್ತೊನ್ನಿನೈಕಾಣಾವೇ " — ಎಂದು ತಮ್ಮ ಪ್ರಬಂಧವನ್ನು ಮುಕ್ತಾಯ ಮಾಡುತ್ತಾ " ಈ ಅಪ್ರಾಕೃತ ದಿವ್ಯ ಮಂಗಳ ವಿಗ್ರಹದ ದರ್ಶನವಾದನಂತರ ನಾನು ಮತ್ತೇನನ್ನೂ ನೋಡಲಾರೆ " ಎಂದು ಉಪ ಸಂಹಾರಮಾಡಿರುತ್ತಾರೆ.

ಇವರ ಮತ್ತೊಂದು ವೈಶಿಷ್ಟ್ಯವೇನೆಂದರೆ—ಶ್ರೀಗೋದಾದೇವಿಯಂತೆ ಇವರೂ ಪರಮಾತ್ಮನಲ್ಲಿಯೇ ಐಕ್ಯವಾದುದು–ಶಿವಭಕ್ತರಲ್ಲಿ " ಸಂತ ನಂದನಾರ್ " ಮೊದ ಲಾದವರು ಹೀಗೆಯೇ ಪರಮೇಶ್ವರನಲ್ಲಿ ಐಕ್ಯವಾದರೆಂದು ತಿಳಿದುಬರುತ್ತದೆ.

ಇವರ ದಿವ್ಯ ಪ್ರಬಂಧವು ಒಂದೇ ಆದರೂ, ಕೇವಲ 10 ಪಾಶುರಗಳನ್ನು ಹೊಂದಿ ದ್ದರೂ ಆಕಾರದಲ್ಲಿ ಚಿಕ್ಕದಾದರೂ ಮಹಿಮೆಯಿಂದ ಬಹಳ ದೊಡ್ಡದು. ಅದರ ಅರ್ಥ

ವಿಶೇಷಗಳು ಬಹಳ ವಿಸ್ತಾರವಾಗಿವೆ. ಶ್ರೀಮದ್ವೇದಾಂತ ದೇಶಿಕರು ಈ ಪ್ರಬಂಧಕ್ಕೆ "ಮುನಿವಾಹನ ಭೋಗ" ವೆಂಬ ವಿಸ್ತಾರವಾದ ವ್ಯಾಖ್ಯಾನವನ್ನು ಅನುಗ್ರಹಿಸಿರುತ್ತಾರೆ.

ಆ ದಿವ್ಯ ಪ್ರಬಂಧದ ಪದ್ಯಗಳ ಸಾರಾಂಶ ಈ ರೀತಿ ಇದೆ :

1) ಅತಿ ಪವಿತ್ರನಾದವನೂ, ಜಗತ್ಕಾರಣಭೂತನೂ, ತನ್ನ ಭಕ್ತ ಸಮೂಹಕ್ಕೆ ನನ್ನನ್ನು ದಾಸನನ್ನಾಗಿ ಮಾಡಿದವನೂ, ಅತ್ಯುಜ್ವಲವಾಗಿ ಪ್ರಕಾಶಿಸುವವನೂ, ನಿತ್ಯಸೂರಿಗಳಿಗೆ ಸ್ವಾಮಿಯಾದವನೂ, ಪರಿಮಳೋಪೇತವಾದ ಉದ್ಯಾನವನಗಳಿಂದ ಕಂಗೊಳಿಸುವ ತಿರುಪತಿ ಕ್ಷೇತ್ರದಲ್ಲಿ ದಯಮಾಡಿಸಿರುವವನೂ, ಅತಿ ನಿರ್ಮಲನೂ, ಅತಿ ಪ್ರಕಾಶಮಾನನಾಗಿರುವವನೂ, ನಿತ್ಯ ವಿಭೂತಿಯುಕ್ತನೂ, ಪರಮ ವಿಸ್ತಾರವಾದ ಪ್ರಾಕಾರಗಳಿಂದ ಶೋಭಿಸುವ ಶ್ರೀರಂಗನಾಥಸ್ವಾಮಿಯ ದಿವ್ಯ ಪಾದಾರವಿಂದಗಳು ನನ್ನ ಕಣ್ಣುಗಳಲ್ಲಿ ಸರ್ವದಾ ನೆಲೆಸಿರುವವು. ಈ ವಿಶೇಷ ಸನ್ನಿವೇಶವು ಉಭಯತ್ರರಿಗೂ (ನಮ್ಮಿಬ್ಬರಿಗೂ) ಉಚಿತವಾದುದೇ ಆಗಿದೆಯಲ್ಲವೇ !

2) ಸಂತುಷ್ಟಾಂತಃಕರಣನಾಗಿ, ತ್ರಿವಿಕ್ರಮರೂಪದಿಂದ ಅತ್ಯುನ್ನತನಾಗಿ ಬೆಳೆದು, ಮೂರು ಲೋಕಗಳನ್ನು ಅಳೆದು, ಲೋಕಕ್ಕೆಲ್ಲಾ ತನ್ನ ಅಧಿರಾಜ್ಯವನ್ನು ಸೂಚಿಸುವ ದಿವ್ಯ ಮುಖಕಮಲವುಳ್ಳವನಾಗಿಯೂ ತಾನು ಜನಸ್ಥಾನದಲ್ಲಿದ್ದಾಗ ತನ್ನ ಮೇಲೆ ಯುದ್ಧಸನ್ನದ್ಧರಾಗಿ ಬಂದ ಖರದೂಷಣಾದಿ ಕ್ರೂರ ರಾಕ್ಷಸರನ್ನು ನಿರ್ಮೂಲ ಮಾಡಿದ, ಕಾಲಾಗ್ನಿ ಸದೃಶವಾದ ನಿಶಿತಬಾಣಗಳನ್ನು ಪಡೆದಿದ್ದ ಶ್ರೀರಾಮಚಂದ್ರನ ರೂಪದಲ್ಲಿ ವಿರಾಜಿಸಿದವನೂ, ದಿವ್ಯಸುಗಂಧಯುಕ್ತವಾದ ಉದ್ಯಾನವನಗಳಿಂದ ಪ್ರಕಾಶಿಸುವ ಶ್ರೀರಂಗ ಕ್ಷೇತ್ರದಲ್ಲಿ ಯೋಗನಿದ್ರೆಯಲ್ಲಿ ಪವಡಿಸಿರುವವನೂ ಆದ ಶ್ರೀರಂಗನಾಥನ ಮಧ್ಯ ಪ್ರದೇಶ (ನಡುವು)ದಲ್ಲಿ ವಿರಾಜಿಸುವ ದಿವ್ಯ ಪೀತಾಂಬರದ ಮೇಲೆ ನನ್ನ ಜ್ಞಾಪಕವು ಸ್ಥಿರವಾಗಿ ನಿಂತಿರುವುದು–ಏನಾಶ್ಚರ್ಯ.

3) ಮರದಿಂದ ಮರಕ್ಕೆ ಹಾರುತ್ತಿರುವ ಅನೇಕ ವಾನರರಿಂದ ನಿಬಿಡವಾದ, ಉತ್ತರದಲ್ಲಿ "ತಿರುಪತಿ" ಯೆಂಬ ದಿವ್ಯ ಕ್ಷೇತ್ರದಲ್ಲಿ ನಿತ್ಯ ಸೂರಿಗಳಿಂದ ಆರಾಧಿಸಲ್ಪಡುತ್ತಾ ನಿಂತುಕೊಂಡಿರುವನಾಗಿಯೂ, ಶ್ರೀರಂಗ ಕ್ಷೇತ್ರದಲ್ಲಿ ಅನಂತ ಫಣಾಫಣಿ ಪರ್ಯಂಕದಲ್ಲಿ ಶಯನಿಸಿಕೊಂಡು ಶ್ರೀರಂಗನಾಥನ ರೂಪದಲ್ಲಿರುವವನೂ ಆದ ಸ್ವಾಮಿಯ ದಿವ್ಯ ಪೀತಾಂಬರವೂ, ಅದರ ಮೇಲೆ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದ ಅಸದೃಶ ಸೌಂದರ್ಯಯುತವಾದ ದಿವ್ಯ ನಾಭೀ ಕಮಲದಮೇಲೆ ಸ್ಥಿರವಾಗಿ ನೆಲೆಸಿರುವ ನನ್ನ ಮನಸ್ಸಿನ ಭಾವವು ಇತರ ವಸ್ತುಗಳ ಕಡೆಗೆ ತಿರುಗುವುದೇ ಇಲ್ಲ. ಇದು ಅದ್ಭುತವಲ್ಲವೇ !

4) ಅತ್ಯುನ್ನತ ಪ್ರಾಕಾರಗಳಿಂದ ಆವೃತವಾದ ಲಂಕಾನಗರಿಯ ಅಧಿಪತಿಯಾದ ರಾವಣೇಶ್ವರ(ನನ್ನು)ನ ಹತ್ತು ತಲೆಗಳನ್ನೂ ತೆಂಗಿನಕಾಯಿನಂತೆ ಕೆಳಕ್ಕೆ ಉರುಳಿಸಿ ತನ್ನ ಪರಾಕ್ರಮವನ್ನು ಪ್ರಕಾಶಪಡಿಸಿದ, ಸಮುದ್ರದಂತೆ ನೀಲವರ್ಣನಾದ ಶ್ರೀರಂಗ ನಾಥನ ಉಡಿದಾರವು ನನ್ನ ಮನಸ್ಸಿನಲ್ಲಿ ಶಾಶ್ವತವಾಗಿ ನಿಂತಿರುವುದಲ್ಲವೇ ? ಇದು ಪರಮಾಶ್ಚರ್ಯ.

5) ಅವಧಿ ಇಲ್ಲದೆ ಅನಾದಿ ಕಾಲದಿಂದ ಆರ್ಜಿಸಿದ ಪಾಪರಾಶಿಯನ್ನು ನಿರ್ಮೂಲಮಾಡಿ, ದಾಸಭೂತನಾದ ನನ್ನನ್ನು ತನಗೆ ಶೇಷಭೂತನನ್ನಾಗಿ ಪರಮಕೃಪೆ ಯಿಂದ ಮಾಡಿಕೊಂಡು ಉದ್ಧಾರ ಮಾಡಿದನು. ಅಲ್ಲದೆ ನನ್ನ ಹೃದಯಾಂತರಾಳ ದಲ್ಲಿ ಪ್ರವೇಶಿಸಿರುವನು ನಾನು ಅಂತಹ ಮಹಾ ತಪಸ್ಸನ್ನು ಏನು ಮಾಡಿರು ವೆನೋ—ನನಗೇ ತಿಳಿಯದು. ಶ್ರೀರಂಗ ದಿವ್ಯ ಕ್ಷೇತ್ರದಲ್ಲಿ ಯೋಗನಿದ್ರಾನಿರತನಾಗಿ ಲಕ್ಷ್ಮೀದೇವಿಯನ್ನೂ, ದಿವ್ಯ ಮುಕ್ತಾಹಾರವನ್ನೂ ವಕ್ಷಃಸ್ಥಳದಲ್ಲಿ ಪಡೆದಿರುವ ಸ್ವಾಮಿಯ ವಕ್ಷಃಸ್ಥಳವೇ ಅಲ್ಲವೇ—ನನ್ನನ್ನು ನಿನಗೆ ದಾಸಭೂತನನ್ನಾಗಿ ಮಾಡಿ ಸಿದುದು !

6) ಅತಿ ಸೂಕ್ಷ್ಮರೂಪದಲ್ಲಿರುವ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ, ಕಪಾಲಿ ಯಾಗಿ ಭಿಕ್ಷೆಯನ್ನು ಬೇಡುತ್ತಾ ಅಲೆಯುತ್ತಿದ್ದ ಪರಮೇಶ್ವರನ ಕಷ್ಟವನ್ನು ಪರಿಹರಿಸಿ, ಅತಿ ರಮಣೀಯವಾದ ಉದ್ಯಾನಗಳಿಂದ ಸುಶೋಭಿಸುವ ಶ್ರೀರಂಗದಲ್ಲಿ ದಯಮಾಡಿಸಿ ರುವ, ಜಗಜ್ಜನಕನೂ, ಈ ಪ್ರಪಂಚದ ಅಂಡಾಂತಕರ್ತೃಗಳಾದ ದೇವತೆಗಳಿಗೆ ಸೇರಿದ ಅಂಡಗಳನ್ನೂ ಅಲ್ಲಿದೆ, ಅವುಗಳಿಗೆ ಹೊರಗಿರುವ ಅಂಡಾಂತರಗಳನ್ನೂ, ಮಹಾಪೃಥಿವಿ ಯನ್ನೂ, ಸಪ್ತಕುಲಾಚಲಗಳನ್ನೂ, ನಿಶ್ಶೇಷವಾಗಿ ಕಬಳಿಸುವ ಶ್ರೀರಂಗರಾಜನ ದಿವ್ಯ ಕಂಠವೇ ಅಲ್ಲವೇ—ನನ್ನನ್ನು ಈ ಸಂಸಾರ ಬಂಧನದಿಂದ ಬಿಡಿಸಿ ಆನಂದ ಮಾರ್ಗದಲ್ಲಿ ಸಂಚರಿಸುವಂತೆ ಮಾಡಿದುದು !

7) ಸುದರ್ಶನ ಚಕ್ರ ಮತ್ತು ಪಾಂಚಜನ್ಯಗಳನ್ನು ದಿವ್ಯ ಹಸ್ತಗಳಲ್ಲಿ ಧರಿಸಿ ಭಕ್ತ ಜನರಿಗೆ ಒದಗುವ ಸರ್ವಾರಿಷ್ಟಗಳನ್ನೂ ಪರಿಹರಿಸುವ, ದಿವ್ಯ ವನಮಾಲಾಲಂಕೃತ ನಾದ, ಉನ್ನತ ಪರ್ವತದಂತಿರುವ ದಿವ್ಯ ಶರೀರವನ್ನು ಧರಿಸಿಕೊಂಡಿರುವ, ಮನೋಜ್ಞ ವಾದ ಶಿರಸ್ಸನ್ನು ಪಡೆದಿರುವ, ನನ್ನ ತಂದೆಯಾಗಿರುವ, ಆದಿಶೇಷನ ಮೇಲೆ ಪವಡಿಸಿರು ವವನೂ ಆದ ನಿನ್ನ ರಮಣೀಯವಾದ ಮುಖ ಕಮಲವು ಅತಿ ನೀಚನಾದ ನನ್ನನ್ನೂ ನನ್ನ ಮನಸ್ಸನ್ನೂ ಆಕರ್ಷಿಸಿಬಿಟ್ಟಿರುವುದಲ್ಲವೇ ! ಇದೆಂತಹ ಆಶ್ಚರ್ಯ !

8) ಅತಿ ಘೋರ ರೂಪದೊಡನೆ ಕಾಣಿಸಿಕೊಂಡ ಹಿರಣ್ಯಕಶಿಪುವಿನ ಶರೀರ ವನ್ನು ಲೀಲಾಜಾಲವಾಗಿ ಸೀಳಿ ಹಾಕಿ, ಬ್ರಹ್ಮಾದಿದೇವತೆಗಳಿಗೂ ಕೂಡ ಭಯವನು

ಉಂಟುಮಾಡುವ " ನರಸಿಂಹ " ರೂಪದಿಂದ ವಿರಾಜಿಸಿ, ಸರ್ವ ಕಾರಣಭೂತನಾದ, ಹಾಗೂ ಮಹೋಪಕಾರಿಯಾದ, ಶ್ರೀರಂಗ ದಿವ್ಯಸ್ಥಳದಲ್ಲಿ ಯೋಗನಿದ್ರೆಯ ವ್ಯಾಜದಿಂದ ಮಲಗಿರುವ ದಿವ್ಯ ಮಂಗಳ ವಿಗ್ರಹನಾದ ಸ್ವಾಮಿಯ ಮುಖಸರೋಜದಲ್ಲಿ ಕೃಷ್ಣವರ್ಣವಾಗಿಯೂ ವಿಶಾಲವಾಗಿಯೂ ಇರುವ ಆ ದಿವ್ಯ ನಯನಗಳು ಅತಿ ಕಠಿಣ ಹೃದಯನಾದ ನನ್ನನ್ನೂ ಪರವಶನನ್ನಾಗಿ ಮಾಡಿರುವುವಲ್ಲವೇ !

9) ಅತಿ ವಿಶಾಲವಾದ ವಟವೃಕ್ಷದ ಮೇಲೆ ಬಹಳ ಚಿಕ್ಕದಾಗಿರುವ ಎಲೆಯೊಂದರ ಮೇಲೆ ಅದ್ವಿತೀಯ ಬಾಲಕನಾಗಿ ಸಪ್ತಲೋಕಗಳನ್ನೂ ತನ್ನ ಉದರದಲ್ಲಿ ಧರಿಸಿಕೊಂಡು, ಶ್ರೀರಂಗ ಕ್ಷೇತ್ರದಲ್ಲಿ ಶೇಷಪರ್ಯಂಕಾರೂಢನಾಗಿ ಸರ್ವಲೋಕಶರಣ್ಯನಾಗಿರುವ ಶ್ರೀರಂಗನಾಥನ ಸುಂದರವಾದ, ಅನರ್ಘರತ್ನಗಳಿಂದ ವಿರಾಜಿಸುವ ಆ ದಿವ್ಯ ಹಾರವು, ಅಪಾರವಾದ ಹಾಗೂ ಅಸದೃಶವಾದ ಲಾವಣ್ಯದಿಂದ ಪ್ರಕಾಶಿಸುವುದು. ಇಂತಹ ದಿವ್ಯಾಭರಣಗಳಿಂದ ಭೂಷಿತವಾದ, ಆ ಆಭರಣಗಳಿಗೆ ನಿನ್ನ ಅಪ್ರಾಕೃತ ಸೌಂದರ್ಯ ವಿಶೇಷದಿಂದ ಅತಿಶಯ ಕಾಂತಿಯನ್ನು ಉಂಟುಮಾಡುತ್ತಲೂ, ಕನ್ನೈದಿಲೆಯಂತಿರುವ ದಿವ್ಯ ಶರೀರದಿಂದ ಪ್ರಕಾಶಿಸುವನೂ ಆದ ಸ್ವಾಮಿಯೇ! ನಿನ್ನ ಈ ಪರಮಾದ್ಭುತ ಶರೀರವೇ ಅಲ್ಲವೇ ನನ್ನ ಚಿತ್ತಚಾಂಚಲ್ಯವನ್ನು ನಿರ್ಮೂಲ ಮಾಡಿ ನಿನ್ನಲ್ಲಿಯೇ ಸ್ಥಿರವಾಗಿ ನೆಲೆಸುವಂತೆ ಮಾಡಿದ್ದು !

10) ನೀಲಮೇಘದಂತೆ ಅದೇ ವರ್ಣದಿಂದ ವಿರಾಜಿಸುವ, ಗೋಪಾಲಕರ ಕುಲದಲ್ಲಿ ಅವತರಿಸಿ, ನವನೀತವನ್ನು ಅಪಹರಿಸಿದ ವದನಾರವಿಂದದಿಂದ ಪ್ರಕಾಶಿಸುತ್ತಿದ್ದ ಕೃಷ್ಣಪರಮಾತ್ಮನೇ ! ಬೆಣ್ಣೆಯನ್ನು ಅಪಹರಿಸಿರುವೆಯಲ್ಲಾ ! ಸಮಸ್ತ ಚರಾಚರ ವಸ್ತುಗಳಿಗೂ ಅಧಿಪತಿಯಾಗಿ, ಲೀಲಾ ವಿಭೂತಿಯಲ್ಲಿ ಶ್ರೇಷ್ಠವೆನಿಸಿದ ಶ್ರೀರಂಗ ಕ್ಷೇತ್ರದಲ್ಲಿ ನೆಲೆಸಿರುವ ಪರಮಾತ್ಮನೇ ! ಅಮೃತದಂತೆ ಪರಮ ಭೋಗ್ಯನಾದ ನಿನ್ನನ್ನು ಸೇವಿಸಿ ಕೃತಾರ್ಥತೆಯನ್ನು ಪಡೆದಿರುವ ನನ್ನ ಕಣ್ಣುಗಳು ಅನಿತ್ಯ ಹಾಗೂ ಅಲ್ಪವಾದ ಬೇರೊಂದು ವಸ್ತುವನ್ನು ನೋಡಲಾರವು.

ಎಂದು ವಿವಿಧ ರೀತಿಯಲ್ಲಿ ಸ್ತೋತ್ರಮಾಡಿ ಶ್ರೀರಂಗನಾಥನಲ್ಲಿಯೇ ಐಕ್ಯರಾದರಲ್ಲದೇ ತಮ್ಮ ದಿವ್ಯ ಶ್ರೀಸೂಕ್ತಿಯಿಂದ ಪಾಮರರಾದ ಜನರೂ ಉಜ್ಜೀವಿಸುವಂತೆ ಪರಮೋಪಕಾರ ಮಾಡಿದ ಮಹಾನುಭಾವರಿವರು.

ಈ ಪ್ರಬಂಧವು " ಅ "ಕಾರದಿಂದ ಪ್ರಾರಂಭವಾಗುವುದರಿಂದ ವೇದಸಾರ ಸರ್ವಸ್ವವೆನಿಸಿದ " ಪ್ರಣವ "ವನ್ನು ಸೂಚಿಸುವುದೆಂದೂ ಜಗತ್ಕಲ್ಯಾಣಕಾರಕವೆಂದೂ ಹಿರಿಯರು ಅಭಿಪ್ರಾಯಪಟ್ಟಿರುತ್ತಾರೆ.

# ಚರಮ ಪರ್ವನಿಷ್ಠಮೂರ್ತಿ
# ಶ್ರೀ ಮಧುರಕವಿ

---

**ಮಂ. ಆ. ನರಸಿಂಹ**

ಅವಿದಿತ ವಿಷಯಾಂತರಃ ಶಠಾರೇರುಪನಿಷಧಾಂ ಉಪಾಧಾನಮಾತ್ರಭೋಗಃ।
ಅಪಿ ಚ ಗುಣವಶಾತ್ ತದೇಕಶೇಷೀ ಮಧುರಕವಿಹೃದಯೇ ಮಮಾವಿರಸ್ತು ॥

[ಶಠಕೋಪರನ್ನಲ್ಲದೆ (ನಮ್ಮಾಳ್ವಾರ್) ಇತರ ವಿಷಯಗಳನ್ನರಿಯದವರಾಗಿ, ವೇದಸಾರವೆನಿಸಿಕೊಂಡ ಅವರ ತಿರುವಾಯ್‌ಮೊಳಿ (ಸಿರಿಬಾಯ್ ನುಡಿ) ಪಾಶುರಗಳನ್ನು ಹಾಡುವುದನ್ನೇ ಮುಖ್ಯ ಕಾಲಕ್ಷೇಪವಾಗಿಟ್ಟುಕೊಂಡು ಅವರ ವಾತ್ಸಲ್ಯಾದಿಗುಣಗಳಲ್ಲೇ ಪರವಶರಾಗಿ, ಅವರ ಅವಿಚ್ಛಿನ್ನ ದಾಸರಾಗಿದ್ದ ಮಧುರಕವಿಗಳು ನನ್ನ ಮನಸ್ಸಿನಲ್ಲಿ ಸದಾ ನೆಲಸಲಿ.]

ವೈದಿಕ ದರ್ಶನಗಳಿಗೆಲ್ಲಾ ವೇದ ಪ್ರಮಾಣ, ಆಕರಗ್ರಂಥ. ಅದರ ಭಾಷೆ ದೇವಭಾಷೆಯೆನಿಸಿಕೊಂಡಿದೆ. ದೇವಭಾಷೆಯಾದ ಸಂಸ್ಕೃತವನ್ನು ಬಿಟ್ಟು ದ್ರಾವಿಡ ಭಾಷೆ ಎನಿಸಿಕೊಂಡ ತಮಿಳಿನ ಒಂದು ಗ್ರಂಥಕ್ಕೆ ವೇದವಷ್ಟೇ ಹಿರಿಮೆಯನ್ನು ಕೊಟ್ಟ ವೈಶಿಷ್ಟ್ಯ ಶ್ರೀ ವೈಷ್ಣವರಿಗೆ ಮಾತ್ರ. ಅದೇ " ನಾಲಾಯಿರಂ." ಇದು ಶ್ರೀವೈಷ್ಣವರಿಗೆ ಅತ್ಯಾದರಣೀಯ ಗ್ರಂಥ. ಅವರು ಈ ಗ್ರಂಥವನ್ನು " ದ್ರಾವಿಡವೇದ "ವೆಂದು ಗೌರವಿಸಿದ್ದಾರೆ. ಇದು ಅವರಿಗೆ ವೇದವಷ್ಟೇ ಶಿರೋಧಾರ್ಯ.

ಈ ನಾಲಾಯಿರಂ ಗ್ರಂಥ, ಅದರ ಹೆಸರೇ ತಿಳಿಸುವಂತೆ ನಾಲ್ಕು ಸಾವಿರ ಪದ್ಯಮಾಲೆ. ಈ ಪಾಶುರಗಳು (ಪದ್ಯಗಳು) ಮೇಲ್ನೋಟಕ್ಕೆ ಶ್ರೀಮನ್ನಾರಾಯಣನ ಅವತಾರ ವೈಭವಗಳನ್ನೂ, ವಿವಿಧ ಅರ್ಚಾಮೂರ್ತಿಗಳ ಸೌಂದರ್ಯವನ್ನೂ ವರ್ಣಿಸುವ ಸುಂದರ ಪದ್ಯಗಳು. ಅವುಗಳಲ್ಲಡಗಿರುವ ಪಾರಮಾರ್ಥಿಕ ತತ್ವಗಳನ್ನೂ ವಿಶೇಷಾರ್ಥಗಳನ್ನೂ ಅರಿಯಬೇಕಾದರೆ ವ್ಯಾಖ್ಯಾನ ಚಕ್ರವರ್ತಿ ಎನಿಸಿಕೊಂಡ ಪೆರಿಯವಾಚ್ಚಾನ್‌ಪಿಳ್ಳೈ ಮತ್ತು ಅಳಹಿಯ ಮಣವಾಳಪ್ಪೆರುಮಾಳ್ ನಾಯನಾರ್, ಅವರುಗಳಲ್ಲನ್ನವೆ ಕೇಳಬೇಕು ! ಈ ನಾಲ್ಕುಸಾಸಿರ ಪದ್ಯಗಳ ಕರ್ತೃಗಳು ಹನ್ನೆರಡು

ಮಂದಿ. ಈ ಹನ್ನೆರಡು ಹಿರಿಯರೂ 'ಆಳ್ವಾರ್' ಎಂಬ ಹೆಸರಿನಿಂದ ಶ್ರೀವೈಷ್ಣವರಿಗೆ ಪರಮಾದರಣೀಯರು.

ಆಳ್ವಾರ್ ಎಂದರೆ 'ಮುಳುಗಿದವರು' ಎಂದರ್ಥ; ಭಗವದನುಭವ ಸಾಗರದಲ್ಲಿ ಸರ್ವದಾ ಮುಳುಗಿದವರಂತೆ, ಈ ಶ್ರೀವೈಷ್ಣವ ಭಕ್ತರು. ಅವರು ತಮ್ಮ ಆನಂದಾನುಭವವನ್ನು ಪಾಶುರಗಳೆಂದು ಕರೆಸಿಕೊಳ್ಳುವ ಗೀತಗಳ ರೂಪದಲ್ಲಿ ಹಾಡಿದ್ದಾರೆ. ಇವರ ಕೃತಿಗಳ ಭಾಷೆ, ತಮಿಳೇ ಆದ್ದರಿಂದ ಆ ನಾಡಿನ ಜನತೆಯೆಲ್ಲಾ ಈ ಕೃತಿಗಳನ್ನು ಹಾಡಿ ಆನಂದಿಸಲು ಸಾಧ್ಯವಾಯಿತು. ಈ ಆಳ್ವಾರುಗಳ ಕಾಲ, ಸಂಪ್ರದಾಯದ ಪ್ರಕಾರ ಕ್ರಿ.ಪೂ. ಮೂರು ನಾಲ್ಕುಸಾವಿರ ವರ್ಷಗಳ ಹಿಂದಿನದು. ಆದರೆ ಚಾರಿತ್ರಿಕ ಸಂಶೋಧನಕಾರರು, ಆಳ್ವಾರುಗಳ ಕಾಲವನ್ನು ಕ್ರಿ. ಶ. 7-9 ಶತಮಾನಗಳ ಮಧ್ಯಕಾಲವೆಂದು ನಿರ್ಧರಿಸಿದ್ದಾರೆ. ಆಳ್ವಾರುಗಳ ಕಾಲವಾದ ಮೂರು ಶತಮಾನಗಳ ಮೇಲೆ ಬಂದ ಶ್ರೀನಾಥಮುನಿಗಳು, ಈ ಎಲ್ಲಾ ಪ್ರಬಂಧಗಳನ್ನೂ ಒಟ್ಟುಗೂಡಿಸಿ ನಾಲಾಯಿರಂ ಗ್ರಂಥ ಸಂಪಾದನೆಗೆ ಕಾರಣರಾದರು.

ಆಳ್ವಾರುಗಳಲ್ಲಿ ಯಾರು ಮುಂದು, ಯಾರು ಹಿಂದು ಎನ್ನುವುದರಲ್ಲಿ ನಾಥಮುನಿಗಳು ಹಾಕಿಕೊಟ್ಟ ಸಾಂಪ್ರದಾಯಿಕ ಪ್ರಕ್ರಿಯೆ ಈ ರೀತಿಯದು. ಪೊಯ್ಗೈ, ಪೂದತ್ತಾರ್, ಪೇಯ್, ತಿರುಮಳಿಸೈ, ಕುಲಶೇಖರ್ರ, ಪೆರಿಯಾಳ್ವಾರ್, ಆಂಡಾಳ್, ತೊಂದರಡಿಪ್ಪೊಡಿ, ತಿರುಪ್ಪಾಣ್ರ, ತಿರುಮಂಗೈ, ನಮ್ಮಾಳ್ವಾರ್ ಮತ್ತು ಮಧುರಕವಿ. ಮಧುರಕವಿಗಳು ಆಳ್ವಾರುಗಳಲ್ಲಿ ಕೊನೆಯವರಾದರೂ, ಹಿರಿಮೆಯಲ್ಲಿ ಮಿಕ್ಕೆಲ್ಲರಿಗಿಂತ ಅತಿಶ್ರೇಷ್ಠರು.

ಮಧುರಕವಿಯಾಳ್ವಾರರ ಜನ್ಮಸ್ಥಳ, ತಿರುಕ್ಕೋವಿಲೂರ್. ಇವರ ಅವತಾರ, ಚಿತ್ರಮಾಸದ ಒಂದು ಶುಕ್ರವಾರ, ಚಿತ್ತಾನಕ್ಷತ್ರದಲ್ಲಿ. ಅತಿ ಚಿಕ್ಕ ವಯಸ್ಸಿನಲ್ಲಿಯೇ ಹದಿನಾಲ್ಕು ಶಾಸ್ತ್ರಗಳಲ್ಲಿ ಪಾರಂಗತರು. ಇವರ ವೈದುಷ್ಯ, ಕವಿತಾಶಕ್ತಿ, ಮಧುರಕವಿ ಎಂಬ ಬಿರುದಿಗೆ ಕಾರಣ. ಮಧುರಕವಿಗೆ ಯೌವನಕ್ಕೆ ಹೆಜ್ಜೆ ಇಟ್ಟಾಗಲೇ ಪ್ರಾಪಂಚಿಕ ಸುಖಗಳಲ್ಲಿ ವೈರಾಗ್ಯ. ತೀರ್ಥಯಾತ್ರಾ ನಿರತರಾದ ಇವರಿಗೆ ಭಾರತದ ದಿವ್ಯಕ್ಷೇತ್ರಗಳ ದರ್ಶನ ಅನೇಕ ಸಲ.

ಒಂದು ರಾತ್ರಿ, ಶ್ರೀರಾಮನ ಅವತಾರ ಸ್ಥಳವಾದ ಅಯೋಧ್ಯೆಯಲ್ಲಿ, ಆಕಾಶದಲ್ಲಿ, ದಕ್ಷಿಣದಿಕ್ಕಿನಲ್ಲಿ, ಒಂದು ಪ್ರಖರಜ್ಯೋತಿ ದರ್ಶನ. ಹಲವಾರು ರಾತ್ರಿಗಳು ಕಳೆದರೂ, ಜ್ಯೋತಿ ನಿಶ್ಚಲ. ಆ ಜ್ಯೋತಿಯ ಉಗಮವನ್ನರಿಯಲು ದಕ್ಷಿಣದತ್ತ ಪಯಣ. ನಡೆನಡೆದು ಕಡೆಗೆ 'ಕುರುಹೂರು' ಪ್ರವೇಶ. ಅಲ್ಲಿ ತಾಮ್ರಪರ್ಣೀ ನದೀ ತೀರದಲ್ಲಿ ನಿಂತ ತಿಂತ್ರಿಣೀ ವೃಕ್ಷದಡಿಯಲ್ಲಿ ಹದಿನಾರು ವರ್ಷಗಳಿಂದ ಧ್ಯಾನಾಸಕ್ತವಾದ ಮಗುವಿನ ಕೌತುಕದ ಸುದ್ದಿ. ಪದ್ಮಾಸನಾರೂಢರಾಗಿ ಕಣ್ಣು ಮುಚ್ಚಿ ಶಿಲಾ ಪ್ರತಿಮೆಯೋ ಎಂಬಂತೆ ನಿಶ್ಚಲರಾಗಿ ಕುಳಿತ ನಮ್ಮಾಳ್ವಾರರನ್ನು ಕಂಡು ಅಚ್ಚರಿ.

ತಾವು ಕಂಡ ಜ್ಯೋತಿಯು, ಆ ಹದಿನಾರು ವರ್ಷದ ಬಾಲಕ ನಮ್ಮಾಳ್ವಾರರ ಹೊನ್ನೊಡಲ ದಿವ್ಯತೇಜಸ್ಸೇ ಎಂಬುದನ್ನು ಕಂಡಾಗ ವಿಸ್ಮಯ. ಮಧುರಕವಿಗಳಿಂದ ಆಳ್ವಾರರ ಪರೀಕ್ಷೆ. ಆಳ್ವಾರರಿಗೆ ಆಚಾರ್ಯ ಪೀಠಪ್ರಾಪ್ತಿ. ಮಧುರಕವಿಗೆ ಸ್ವಸಂತೋಷದಿಂದಲೇ ಉಂಟಾದ ಶಿಷ್ಯವೃತ್ತಿ. ನಮ್ಮಾಳ್ವಾರರ ಕೃಪೆಯಿಂದ ಪಾಶುರಗಳ ಮೂಲಕ ವೇದರಹಸ್ಯ ಸಾರಾರ್ಥಗಳ ಅನುಗ್ರಹ. ಆಳ್ವಾರರ ಪರಮಪದಯಾತ್ರಾಕಾಲದವರೆಗೂ ಆಚಾರ್ಯಸೇವಾನಿರತ. ನಂತರ, ಆಚಾರ್ಯಮೂರ್ತಿ ಪ್ರತಿಷ್ಠಾಪನೆ. ಸದಾ ಆಚಾರ್ಯನಾಮ ಜಪ. ತಿರುವಾಯ್‌ಮೊಳಿಯ ಪಾರಾಯಣ. ನಮ್ಮಾಳ್ವಾರರ ಗುಣಕೀರ್ತನ, ಪ್ರಚಾರ. ಹಾಗೆಯೇ, ತಮಗೆ ಪರಮೋಪಕಾರ ಮಾಡಿದ ನಮ್ಮಾಳ್ವಾರರಲ್ಲಿ ಅಸದೃಶ ಭಕ್ತಿಯನ್ನು ವಿಶದಪಡಿಸುವ 'ಕಣ್ಣಿನುಣ್ ಶಿರುತ್ತಾಂಬು' ಮುಂತಾದ ಹನ್ನೊಂದು ಪಾಶುರಗಳ ರಚನೆ.

ಮಧುರಕವಿ ಆಳ್ವಾರುಗಳಲ್ಲಿ ಹೇಗೆ ಹಿರಿಯರೋ, ಹಾಗೆಯೇ ನಾಲಾಯಿರದಲ್ಲಿ, ಅವರ 'ಕಣ್ಣಿನುಣ್ ಶಿರುತ್ತಾಂಬಿಗೆ' ಮೊದಲಸ್ಥಾನ. ಪೆರಿಯಾಳ್ವಾರರ ಮಂಗಳ ಶ್ಲೋಕರೂಪದ 'ತಿರುಪ್ಪಲ್ಲಾಂಡು' ವಿನ ನಂತರ ಕಣ್ಣಿನುಣ್ ಶಿರುತ್ತಾಂಬಿನ ಅನುಸಂಧಾನ ಒಂದು ಸಂಪ್ರದಾಯ. ಇನ್ನೂ ಹಲವೆಡೆಗಳಲ್ಲಿ ಇಂದಿಗೂ ನಾಲಾಯಿರದ ಮೊದಲಸಾಸಿರ ಶ್ಲೋಕಗಳ ಆರಂಭದಲ್ಲೂ, ಅಂತ್ಯದಲ್ಲೂ ಇದು ಅನುಸಂಧೇಯವಾಗಿರುವುದು ಮತ್ತೊಂದು ಸಂಪ್ರದಾಯ. ಈ ಹನ್ನೊಂದು ಪಾಶುರಗಳ ಪುಟ್ಟ ಪದ್ಯಮಾಲೆಯ ವೈಶಿಷ್ಟ್ಯ ಆಚಾರ್ಯನ ಗೌರವ ಹಿರಿಮೆಗಳನ್ನು ಸ್ತುತಿಸುವುದೇ ಆಗಿದೆ. ಶ್ರೀವೈಷ್ಣವರ ವೈಶಿಷ್ಟಗಳಲ್ಲಿ ಒಂದಾದ ಆಚಾರ್ಯನಿಷ್ಠಾ ಪ್ರತಿಪಾದಕ ಇದು. ಈ ಪ್ರಬಂಧ ನಮ್ಮಾಳ್ವಾರರ ವೇದಸಾರವೆನಿಸಿ ತಿರುವಾಯ್‌ಮೊಳಿಯ ಸಾರ.



ರಾಮಾನುಜ ದರ್ಶನದ ಪ್ರಕಾರ ಮುಮುಕ್ಷುವಿಗೆ (ಮೋಕ್ಷದಲ್ಲಿ ಅಪೇಕ್ಷೆಯುಳ್ಳವನಿಗೆ) ಆದರಣೀಯರಾಗಿರುವವರು ನಾಲ್ಕು ವ್ಯಕ್ತಿಗಳು. ಭಗವಾನ್, ಭಗವತಿ, ಆಚಾರ್ಯ ಮತ್ತು ಇತರ ಶ್ರೀವೈಷ್ಣವರು. ಭಗವಾನ್, ತನಗೆ ಶರಣಾದ ಚೇತನರನ್ನು ತನ್ನ ಕರುಣೆಯಿಂದ ಉದ್ಧರಿಸಿ ಇಷ್ಟಾನಿಷ್ಟಪ್ರಾಪ್ತಿ ಪರಿಹಾರಕನಾಗುತ್ತಾನೆ. ಭಗವತಿಯು ಒಂದು ಕಡೆ ಚೇತನನಿಗೆ ತಾಯಿಯಾಗಿಯೂ, ವಾತ್ಸಲ್ಯಮೂರ್ತಿಯೂ ಆಗಿರುವುದರಿಂದಲೂ, ಮತ್ತೊಂದುಕಡೆ ಭಗವಾನನಿಗೆ ಸಹಧರ್ಮಿಣಿ ಆಗಿರುವುದರಿಂದಲೂ, ಚೇತನನು ಅವನ ಪೂರ್ವಾಪರಾಧಗಳನ್ನು ಕ್ಷಮಿಸಿ ಉದ್ಧರಿಸಲು ಸಹಾಯ ಮಾಡುತ್ತಾಳೆ. ಜೊತೆಯ ಶ್ರೀವೈಷ್ಣವರಾದರೋ, ಚೇತನನಿಗೆ ಆಧ್ಯಾತ್ಮ ವಿಷಯಗಳಲ್ಲಿ ಆಸಕ್ತಿಯನ್ನುಂಟುಮಾಡುವವರಾಗಿಯೂ, ಆಚಾರ್ಯನಿಂದ ಉಪದೇಶವಾದ ಜ್ಞಾನವರ್ಧರಾಗಿರುವುದರಿಂದಲೂ, ಇವನಿಗೆ ಆದರಣೀಯರು. ಆಚಾರ್ಯರಾದರೊ, ಚೇತನನಿಗೆ ಸುಲಭವಾಗಿ ತಿಳಿಯುವಂತೆ ಚಿತ್, ಅಚಿತ್, ಈಶ್ವರರ ವಿಷಯಗಳನ್ನು ಭಗವತಿಯ ವೈಭವವನ್ನೂ ಉಪದೇಶಿಸುವುದಷ್ಟೇ ಅಲ್ಲದೆ ತಾನು ಅನುಷ್ಠಾನಮಾಡಿ,

ತೋರಿ ಇವನು ಅನುಷ್ಠಿಸುವಂತೆ ಮಾಡುತ್ತಾರೆ. ಚೇತನನು ಪರಮದ್ರೋಹಿಯಾಗಿದ್ದರೂ ಕೂಡ, ತನಗೆಷ್ಟೇ ತೊಂದರೆಗಳು ಬಂದರೂ ಸಹ ಗಣಿಸದೆ ಶಿಷ್ಯನ ಹಿತವನ್ನೇ ಮುಖ್ಯವಾಗಿಟ್ಟುಕೊಂಡು, ತನ್ನ ಅಪಾರ ಕಾರುಣ್ಯದಿಂದ ಕೈಹಿಡಿದು ಮೋಕ್ಷಮಾರ್ಗದಲ್ಲಿ ನಡೆಸುವವರಾದುದರಿಂದ ಆಚಾರ್ಯರು ಚೇತನನಿಗೆ ಅತ್ಯಾದರಣೀಯರು. ಇಂತಹ ಆಚಾರ್ಯರನ್ನು, 'ಆಚಾರ್ಯದೇವೋ ಭವ' ಎಂದು ಗೌರವಿಸುವುದರಲ್ಲೇನಚ್ಚರಿ !

ಇಂತಹ ಆಚಾರ್ಯ ಪರಂಪರೆಗೆ ಮಾದರಿ ನಮ್ಮಾಳ್ವಾರ್. ನಮ್ಮಾಳ್ವಾರರಿ ಶ್ರೀಪಾದಪದ್ಮಗಳಲ್ಲಿ ಪರಿಚರ್ಯ ನಡೆಸಿ ಅವರು ಮಾಡಿದ ಮಹದುಪಕಾರಕ್ಕೆ ತಮ್ಮ ಕೃತಜ್ಞತಾ ಸ್ವರೂಪವಾಗಿ ಈ ಪ್ರಬಂಧವನ್ನು ಮಧುರಕವಿಗಳು ರಚಿಸಿದ್ದಾರೆ. ಇವರ ಮುಖ್ಯ ವಿಷಯ ಆಳ್ವಾರರ ಹಿರಿಮೆ ಅವರ ಮಾತಿನಲ್ಲೇ ಹೇಳುವುದಾದರೆ, ಈ ಪಾಶುರಗಳ ಸಂಕ್ಷಿಪ್ತ ಭಾವಾರ್ಥ ಈ ರೀತಿಯದು.

"ಶ್ರೀ ಕೃಷ್ಣನ ದಿವ್ಯ ನಾಮಗಳಿಗಿಂತಲೂ ಕುರುಹೂರ್ ನಬಿಂಯ (ನಮ್ಮಾಳ್ವಾರರ) ದಿವ್ಯ ನಾಮಗಳು ನನಗೆ ಅತಿಪ್ರಿಯ. ಅವನ್ನು ಒಂದು ಬಾರಿ ಉಚ್ಚರಿಸಿದರೂ ಕೂಡ ನನ್ನ ನಾಲಿಗೆಯಲ್ಲಿ ಅಮೃತ ಒಸರುತ್ತದೆ. ಆಳ್ವಾರುಲ್ಲದೆ ಬೇರಾವ ದೈವವನ್ನೂ ನಾನರಿಯೇ. ನನಗೆ ಆಶ್ರಯಕೊಟ್ಟ ಅವರ ದಿವ್ಯ ಶ್ರೀಪಾದ ಪದ್ಮಗಳು ಇಹಪರಗಳೆರಡಕ್ಕೂ ಪ್ರಾಪ್ಯ, ಪ್ರಾಪಕಗಳೆಂದು ನಿಸ್ಸಂಶಯವಾಗಿ ಅರಿತಿದ್ದೇನೆ. ಅವರ ಮಧುರವಾದ ತಿರುವಾಯ್ ಮೊಳಿಗಳನ್ನು ಗಾನಮಾಡಿ ಕಾಲವನ್ನು ಕಳೆಯುತ್ತೇನೆ. ಸಕಲ ವೇದಗಳಲ್ಲೂ ಪಾರಂಗತರಾದ ಶ್ರೋತ್ರಿಯರು ನನ್ನ ಅಪಾರವಾದ ದೋಷಗಳನ್ನು ಕಂಡು ನನ್ನನ್ನು ಉದ್ಧರಿಸಿಲು ನಿರಾಕರಿಸಿದರು. ಹೀಗೆ ಎಲ್ಲರೂ ಕೈಬಿಟ್ಟರೂ ನನ್ನ ಆಚಾರ್ಯರಾದ ನಮ್ಮಾಳ್ವಾರ್ ನನ್ನನ್ನು ಸ್ವೀಕರಿಸಬೇಕೆಂದು ಯೋಚಿಸಿ, ಆರಂಭದಲ್ಲಿ ತಾಯಿಯಂತೆ ಪ್ರಿಯಕಾರಿಯಾಗಿಯೂ, ಆಮೇಲೆ ತಂದೆಯಂತೆ ಹಿತಕಾರಿಯಾಗಿಯೂ ಇದ್ದು ಸದ್ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡಿ ನನಗೆ ಮಹೋಪಕಾರ ಮಾಡಿದ್ದಾರೆ. ತಮ್ಮ ನಿರ್ಹೇತುಕ ಕೃಪೆಯಿಂದ ನನ್ನ ಪಾಪ ರಾಶಿಯನ್ನು ನಾಶಮಾಡಿ, ದ್ರಾವಿಡ ಪ್ರಬಂಧವಾದ ತಿರುವಾಯ್‌ಮೊಳಿಯನ್ನು ನನಗೆ ಉಪದೇಶಿಸಿದ್ದಾರೆ. ಅಂತ ಹಆಳ್ವಾರರ ಅಸ್ಸಾದೃಶವಾದ ಕೃಪೆಯನ್ನು ಈ ಪ್ರಪಂಚಕ್ಕೆಲ್ಲಾ ಚೆನ್ನಾಗಿ ತಿಳಿಯುವಂತೆ ಹೇಳುತ್ತೇನೆ. ಶ್ರೀಯಃ ಪತಿಯಾದ ಶ್ರೀಮನ್ನಾರಾಯಣನ ಕೃಪೆಯನ್ನೇ ಅತಿಶಯವಾಗಿ ಹೊಗಳುವಹಾಗೆ ವೇದಗಳ ಮುಖ್ಯ ರಹಸ್ಯಾರ್ಥಗಳನ್ನು ಈ ಪ್ರಪಂಚದಲ್ಲಿರುವವರಿಗೆ ಪರಿಷ್ಕಾರವಾಗಿ ತಿಳಿಸಿ ಪರಮೋಪಕಾರ ಮಾಡಿದ್ದಾರೆ. ಅವರು ತಮಗೆ ಯಾವ ಪ್ರಯೋಜನವಿಲ್ಲದಿದ್ದರೂ ಪರೋಪಕಾರವೃತ್ತಿಯಿಂದ ಹಿತವನ್ನು ಹೇಳಿದರೂ ಕೇಳುವುದಕ್ಕೆ ಕೂಡ ಇಷ್ಟ ಪಡದ ಚೇತನರನ್ನೂ ತಮ್ಮ ಶಕ್ತಿವಿಶೇಷದಿಂದ ಭಗವದ್ಭಾಗವತ ಕೈಂಕರ್ಯಗಳಲ್ಲಿ ತೊಡಗುವಂತೆ ಮಾಡಿ

ದ್ದಾರೆ. ಇಂತಹ ಉಪಕಾರಕ್ಕೆ ಪ್ರತಿಯಾಗಿ ನಾನು ಮಾಡಲರ್ಹವಾದ ಪ್ರತ್ಯುಪಕಾರ ಯಾವುದೂ ಇಲ್ಲವಲ್ಲಾ. ಸೇವಕನಾದ ನಾನು ತಮ್ಮ ಶ್ಲಾಘ್ಯತರವಾದ ಚರಣಾರವಿಂದಗಳಲ್ಲಿ ಮಾಡತಕ್ಕ ಪ್ರೀತಿಯೇ ಪ್ರತ್ಯುಪಕಾರವೆಂದೆಣಿಸಿ ಸಂತೋಷಿಸಬೇಕೆಂದು ಪ್ರಾರ್ಥಿಸುವೆನು."

ಮಿಕ್ಕೆಲ್ಲ ಆಳ್ವಾರುಗಳೂ ಭಗವದ್ವಿಷಯದಲ್ಲಿ ಆಚಾರ್ಯ ಪ್ರತಿಪತ್ತಿ ತೋರಿದರೆ, ಮಧುರಕವಿಗಳು ಆಚಾರ್ಯ ವಿಷಯದಲ್ಲಿ ಭಗವತ್ ಪ್ರತಿಪತ್ತಿ ಮಾಡಿದ್ದಾರೆ. ಅಂದರೆ, ಆಳ್ವಾರುಗಳು ಭಗವಂತನೇ ತಮಗೆ ಉಪದೇಶಕನೆಂದೂ, ಹೊಂದಬೇಕಾದ ವಡೆಂದೂ ಪಾಡಿ ನಲಿದಿದ್ದಾರೆ. ಇದು ಎಲ್ಲ ಸಂತರಲ್ಲೂ ಕಾಣುವ ವಿಷಯವೇ.

ಆದರೆ, ಆಚಾರ್ಯನನ್ನು ಭಗವಾನ್ ಸ್ಥಾನದಲ್ಲಿಟ್ಟು ಆಚಾರ್ಯನ ಸಂತೋಷಕ್ಕೋಸ್ಕರ ಭಗವಾನನಲ್ಲಿ ಭಕ್ತಿತೋರಿದ ವೈಚಿತ್ರ್ಯ ಮಧುರಕವಿಗಳಲ್ಲಿ ಕಾಣುತ್ತದೆ. ಈ ಮಾದರಿಯನ್ನು ನಮ್ಮ ಹಿರಿಯರು "ಚರಮಪರ್ವ ನಿಷ್ಠೆ" ಎಂದು ಕರೆದಿದ್ದಾರೆ.

ಈ ಚರಮಪರ್ವ ನಿಷ್ಠೆ, ನಿಷ್ಠೆಗಳಲ್ಲಿ ಕೊನೆಯಹಂತ ಅದರ ಹಿರಿಮೆ ಬಹುದೊಡ್ಡದು. ಅದರ ಸ್ವರೂಪವನ್ನು ಸ್ಥೂಲವಾಗಿ ನೋಡಿದಲ್ಲಿ; ಭಗವಾನ್ ಈ ಪ್ರಪಂಚಕ್ಕೆ ಸ್ವಾಮಿ (ಶೇಷಿ) ಈ ಪ್ರಪಂಚದ ಜೇತನರು (ಜೀವಿಗಳು) ಆತನಿಗೆ ದಾಸರು (ಶೇಷಭೂತರು). ಹೀಗಿರುವಲ್ಲಿ ಭಗವಾನ್ ತಮಗೆ ಪ್ರಭುವೆಂಬುದನ್ನರಿತು, ಆತನ ಮನೋಲ್ಲಾಸವನ್ನುಂಟುಮಾಡುವಂತಹ ಕೈಂಕರ್ಯಗಳನ್ನು ನಡೆಸಿ ಅನುಗ್ರಹವನ್ನು ಸಂಪಾದಿಸುವುದು ಸಾಮಾನ್ಯಧರ್ಮ. ಇದನ್ನೇ ಈ ಪ್ರಪಂಚದಲ್ಲಿನ ಸ್ವಾಮಿ ಭೃತ್ಯ ಸಂಬಂಧದಲ್ಲಿಯೂ ಕಾಣಬಹುದು. ಇದರಲ್ಲಾವ ವೈಶಿಷ್ಟ್ಯವೂ ಇಲ್ಲ. ಆದುದರಿಂದಲೇ ಇದು ಪ್ರಥಮಪರ್ವ ನಿಷ್ಠೆ, ಅಥವಾ ಮೊದಲಮೆಟ್ಟಿಲು ಎನಿಸಿಕೊಂಡಿದೆ.

ಸೇವಕನೆನಿಸಿಕೊಂಡ ಚೇತನ ಭಗವಾನನ ಇಚ್ಛೆಗಳು ತನ್ನ ಇಚ್ಛೆಗಳಿಗೆ ವಿರೋಧವಾಗಿದ್ದರೂ ಕೂಡ ಮರುಮಾತಾಡದೆ, ದುಃಖಿಸದೆ, ಸಂತೋಷದಿಂದಲೆ ನಡೆಸಿ ತನ್ನ ತನವನ್ನೇ ಮರೆತು ಭಗವತ್ ಕೈಂಕರ್ಯ ಒಂದನ್ನೇ ಕಾಲಕ್ಷೇಪವಾಗಿಟ್ಟುಕೊಂಡಿರುವ ರೀತಿ ಎರಡನೆಯ ಹಂತ. ಇದು ಸಾಧ್ಯ ಜ್ಞಾನ, ಭಕ್ತಿಗಳನ್ನು ಹೊಂದಿದ ಯಾವ ಪಕ್ವಜೀವವಾದರೂ ಇದನ್ನು ಅನುಸರಿಸಬಲ್ಲುದು.

ಆದರೆ, ಒಂದು ಜೀವಿ ತನ್ನಂತೆಯೇ ತೋರುವ ಮತ್ತೊಂದು ಜೀವಿಯನ್ನು ಹಿರಿಯನೆಂದೂ, ಆಚಾರ್ಯನೆಂದೂ. ಜೀವಮಾನಪರ್ಯಂತ ಗೌರವಿಸುವುದು ವಿಶೇಷವಲ್ಲವೆ! ಅಷ್ಟೇ ಅಲ್ಲದೆ ತನ್ನ ಜ್ಞಾನಚಕ್ಷುವನ್ನು ತೆರೆದ ಆತನನ್ನು ಭಗವಾನನಿಗಿಂತ ಹಿರಿಯನೆಂದು ತಿಳಿದು ಸರ್ವದಾ ಆತನ ಗುಣಗಾನವನ್ನೇ ಮಾಡುತ್ತಿರುವುದು ಅಚ್ಚರಿಯಲ್ಲವೇ! ಜ್ಞಾನಿಗಳಾಗಿರುವ ಎಲ್ಲಾ ಜೀವಿಗಳೂ, ಪರಮಾತ್ಮನ ಸೌಲಭ್ಯ,

ಸೌಶೀಲ್ಯಾದಿಗುಣಗಳನ್ನು ಅರಿತವರು, ಆತ, ಸಕಲಾಭೀಷ್ಟದಾಯಕ ಎಂಬುದು ಅವರಿಗೆ ನಿಸ್ಸಂಶಯವಾಗಿ ಗೊತ್ತು. ಆದರೆ ತಾನು ಆಶ್ರಯಿಸಿದ ಈ ಚೇತನನಲ್ಲಿ ತನಗೆ ಮೋಕ್ಷಕೊಡಿಸುವ ಚೈತನ್ಯವಿದೆ ಎಂಬನಂಬಿಕೆ ಶೇಷಭೂತನಾದ ಚೇತನನಲ್ಲಿ ಬರುವುದು ಅಪರೂಪ. ಒಬ್ಬ ಚೇತನ, ಮತ್ತೊಬ್ಬ ಚೇತನನಲ್ಲಿ ಕೃತಜ್ಞನಾಗಿರ ಬಹುದು. ಪ್ರೀತಿ, ಆದರ, ಭಕ್ತಿಗಳನ್ನು ಹೊಂದಿರಬಹುದು. ಆದರೆ, ಇವು ಸಾಮಾ ನ್ಯವಾಗಿ ನಿಯತಕಾಲಿಕವಾದದ್ದು. ಉಪಕಾರಸ್ಮರಣೆ ಕಾಲಕಳೆದಂತೆ ಕ್ಷೀಣಿಸುವುದು ಸಾಮಾನ್ಯ, ಇದು ಕ್ಷೀಣಿಸಿದಂತೆಲ್ಲಾ ಉಪಕಾರ ಮಾಡಿದವನಲ್ಲಿ ಮೊದಲ ಕಂಡಿಲ್ಲ ದಂತಹ ದೋಷಗಳು ಉಪಕೃತ್ಯನಿಗೆ ಕಾಣಿಸುವುದು ಮಾನವರಲ್ಲಿ ಸಹಜ. ಆದರೆ, ಚರಮಪರ್ವ ನಿಷ್ಠನಾದವನು ತನಗೆ ಜ್ಞಾನವನ್ನು ಕರುಣಿಸಿದ ಆಚಾರ್ಯನಲ್ಲಿ ಸರ್ವದಾ ಕೃತಜ್ಞ. ಆಚಾರ್ಯನೇ ತನ್ನನ್ನು ಉದ್ಧರಿಸುವವನೆಂದೂ, ಪ್ರಾಪ್ಯನೂ (ಹೊಂದ ಬೇಕಾದುದು) ಪ್ರಾಪಕನೂ (ಕೈಹಿಡಿದು ನಡೆಸುವವನು) ಅವನೇ ಎಂದು ತಿಳಿದು, ಕೈಂಕರ್ಯದಲ್ಲೇ ನಿರತನಾಗಿರುತ್ತಾನೆ. ಇದು ಕಷ್ಟಸಾಧ್ಯ, ಇಂತಹ ಚಿಂತನರು, ಬಹಳ ವಿರಳ. ಆದುದರಿಂದಲೇ ಚರಮ ಪರ್ವನಿಷ್ಠೆಗೆ ಅಷ್ಟುಹಿರಿಮೆ.

ಶ್ರೀರಾಮಾಯಣದಲ್ಲಿ ಈ ರೀತಿಯ ಅನುಷ್ಠಾನವನ್ನು ಶ್ರೀ ಶತ್ರುಘ್ನನಲ್ಲಿ ಕಾಣುತ್ತೇವೆ. ರಾಮಾಯಣದ ಪುರುಷರೆನಿಸಿಕೊಂಡ ನಾಲ್ವರೂ ಧರ್ಮಸಂಸ್ಥಾಪನೆ ಗೋಸ್ಕರ ಅವತರಿಸಿದವರು ; ನಾಲ್ವರೂ ಧರ್ಮದ ನಾಲ್ಕು ಸ್ವರೂಪಗಳನ್ನು ಅನುಷ್ಠಿಸಿ ಕೋರಿದರು. ಪಿತೃಸ್ವರೂಪರಾದ ಹಿರಿಯರ ವಚನಗಳನ್ನು ಪಾಲಿಸುವ ಸಾಮಾನ್ಯ ಧರ್ಮವನ್ನು ಭಗವಾನ್ ಶ್ರೀರಾಮನಲ್ಲಿ ಕಾಣುತ್ತೇವೆ. ಸ್ವಾಮಿಯಲ್ಲಿ ಸೇವಕನಿಗಿರ ಬೇಕಾದ ನಿಷ್ಠೆ, ಸೇವಾಧರ್ಮ, ಇವಕ್ಕೆ ಮಾದರಿ ಶ್ರೀ ಲಕ್ಷ್ಮಣ. 'ಅಹಂ ಸರ್ವಂ ಕರಿಷ್ಯಾಮಿ' (ನಾನೇ ಎಲ್ಲವನ್ನೂ ಮಾಡುತ್ತೇನೆ) ಇದು ಲಕ್ಷ್ಮಣನ ದೀಕ್ಷಾಮಂತ್ರ. ತನಗೆ ಸ್ವಾಮಿಯಾದ ಶ್ರೀರಾಮನ ಆಜ್ಞೆ ಶಿರೋಧಾರ್ಯವೆಂದು, ಸ್ವಾಮಿಯ ಹಿತ ಸಂತೋಷಗಳೇ ತನ್ನ ಇಚ್ಛೆಗಳಿಗಿಂತ ಹಿರಿದೆಂದು ತಿಳಿದು ತನಗಿಚ್ಛೆಯಿಲ್ಲದಿದ್ದರೂ ರಾಜ್ಯಭಾರ ನಡೆಸಿದ ಶ್ರೀಭರತ ಮಧ್ಯಮಪರ್ವ ನಿಷ್ಠ. ನಿಷ್ಠೆಯ ಎರಡನೆಯ ಹಂತ ದಲ್ಲಿ ನಿಂತ ಈತ ಆಚಾರ್ಯರುಗಳಿಗೆ ಅನುಕರಣೀಯ. ಪರಮ ಧರ್ಮವೆನಿಸಿಕೊಂಡ ಭಾಗವತ ಕೈಂಕರ್ಯಕ್ಕೆ ಮಾದರಿ ಶ್ರೀಶತ್ರುಘ್ನ. ಆತನಿಗೆ ಭರತನಲ್ಲಿ ಅಪಾರ ಪ್ರೀತಿ, ಭಕ್ತಿ, ಭರತನಲ್ಲಿ ತಾನು ನಡೆಸುವ ಸೇವಾ ಕೈಂಕರ್ಯದಲ್ಲಿ ಭಗವಾನ್ ಎನಿಸಿಕೊಂಡ ರಾಮನೂ ತ್ಯಾಜ್ಯನೇ. ಶ್ರೀಶತ್ರುಘ್ನನಿಗೆ ಸರ್ವರಿಗೂ ಪ್ರಿಯನಾದ ಶ್ರೀರಾಮನಿಗಿಂತ ಭರತನೇ ಹೆಚ್ಚು. ಇಲ್ಲಿ ನಮ್ಮಾಳ್ವಾರ್ ಭರತನಂತೆ ಭಗವಾನನ ಇಚ್ಛೆಗಳನ್ನೇ ಅನು ಸರಿಸಿದವರು. ಮಧುರಕವಿಯ ಆಚಾರ್ಯಾಭಿಮಾನದ ರೀತಿ ಶತ್ರುಘ್ನನಂತೆ.

ಈ ಚರಮಪರ್ವ ನಿಷ್ಠೆ ಜೀವಿಗಳಿಗೆಷ್ಟು ಅವಶ್ಯಕ ಎಂಬುದನ್ನು ಪಿಳ್ಳೈಲೋಕಾ ಚಾರ್ಯ ಶ್ರೀವಚನಭೂಷಣದಲ್ಲಿ ಕಾಣುತ್ತೇವೆ. ಅಲ್ಲಿ, ಆಚಾರ್ಯ ಸಂಬಂಧದ

ಹಿರಿಮೆಯನ್ನು ಹೀಗೆ ವಿವರಿಸುತ್ತಾರೆ: "ನೀರಿನಲ್ಲಿರುವ ತಾವರೆ ಸೂರ್ಯನ ಕಿರಣಗಳಿಂದ ಅರಳುತ್ತದೆ. ಆದರೆ, ಅದೇ ಕಿರಣಗಳು, ನೀರಿಲ್ಲದಿದ್ದಲ್ಲಿ ತಾವರೆಯನ್ನು ವಿಕಸಿಸುವ ಬದಲು ಒಣಗಿಸುತ್ತವೆ. ಹಾಗೇಯೇ, ಶಿಷ್ಯನು ಭಗವತ್ ಕೃಪಾಕಟಾಕ್ಷವನ್ನು ಹೊಂದಬೇಕಾದಲ್ಲಿ ತಾವರಿಗೆ ನೀರಿನಂತೆ ಶಿಷ್ಯನಿಗೆ ಆಚಾರ್ಯನು ಧಾರಕನು. ಜ್ಞಾನ, ಭಕ್ತಿ, ವೈರಾಗ್ರಗಳಿದ್ದೂ ಆಚಾರ್ಯ ಸಂಬಂಧವಿಲ್ಲದಿದ್ದಲ್ಲಿ ಅವು ಮೋಕ್ಷ ಸಾಧಕಗಳಾಗಲಾರವು. ಆಚಾರ್ಯ ಸಂಬಂಧ ಪತಿವ್ರತೆಯ ಮಂಗಲಸೂತ್ರದಂತೆ; ಮಿಕ್ಕೆಲ್ಲ ಗುಣಗಳಾದ ಜ್ಞಾನ, ಭಕ್ತಿ, ವೈರಾಗ್ಯಗಳು ಇತರ ಆಭರಣಗಳಂತೆ ಗೌಣ." ಮುಮುಕ್ಷುವಿಗೆ ಇದು ಅತ್ಯಾವಶ್ಯಕ. ಕಾರಣ, ಭಗವಾನನು ಕಾರುಣ್ಯಮೂರ್ತಿಯಾಗಿರುವಂತೆಯೇ ಸ್ವತಂತ್ರನೂ ಕೂಡ. ಈ ಭಗವತ್ ಸ್ವಾತಂತ್ರ್ಯವನ್ನು ನೋಡಿ ಮುಮುಕ್ಷುವಿಗೆ, ಭಗವಾನನು ತನಗೆ ಮೋಕ್ಷವನ್ನು ನೀಡುವನೋ ಇಲ್ಲವೋ ಎಂಬ ಭಯ ಉಂಟಾಗಬಹುನು. ಹಾಗೆಯೇ, ಭಗವಾನನು ಚೇತನದ ಪಾಪರಾಶಿಯನ್ನು ನೋಡಿ, ಮೋಕ್ಷವನ್ನು ನಿರಾಕರಿಸಲೂ ಬಹುದು. ಈ ಭಯ, ಸ್ವಾತಂತ್ರ್ಯಗಳೆರಡೂ, ಚೇತನನು ಮಾಡಬೇಕಾದ ಪ್ರಪತ್ತಿಗೆ ಪ್ರತಿಬಂಧಗಳು. ಇದನ್ನು ನಿವಾರಿಸ ಬಲ್ಲವನು ಆಚಾರ್ಯನೊಬ್ಬನೇ. ಕಾರಣ ಆಚಾರ್ಯನಲ್ಲಿ ಭಗವಾನನಿಗೆ ಅಪಾರ ಪ್ರೀತಿ ಆಚಾರ್ಯನಿಗೆ ತನ್ನ ಶಿಷ್ಯನಲ್ಲಿ ಅತೀವ ಕೃಪೆ. ಆದ್ದರಿಂದ ಆಚಾರ್ಯನು ತನ್ನ ಶಿಷ್ಯನ ಬೇಡಿಕೆಯನ್ನು ಭಗವತ್ ಸನ್ನಿಧಿಯಲ್ಲಿ ಜಯಪ್ರದವಾಗುವಂತೆ ಮೂಡಬಲ್ಲನು. ಅದುದರಿಂದಲೆ 'ಚರಮಪರ್ವನಿಷ್ಠೆ' ಚೇತನರಿಗೆ ಅತ್ಯಾವಶ್ಯಕ.

ಇಂತಹ ಚರಮಪರ್ವ ನಿಷ್ಠೆಗೆ ಮಾದರಿಯಾದ ಮಧುರಕವಿಗಳು ಶ್ರೀವೈಷ್ಣವರಿಗೆಲ್ಲಾ ಬಹು ಆದರಣಿಯರು. ಇಂಗೂ ಶ್ರೀವೈಷ್ಣವರು ವಂದನ, ಪ್ರತಿವಂದನ ಮಾಡುವಾಗ, 'ಮಧುರಕವಿ ರಾಮಾನುಜದಾಸ' ಎಂದು ಹೇಳುತ್ತಾರೆ. ದಿನದ ದೇವತಾರ್ಚನೆ, ಕೈಂಕರ್ಯ ಇವುಗಳಲ್ಲಿ "ಕಣ್ಣಿನುಣ್ ಶಿರುತ್ತಾಂಬು" ಅಷ್ಟೇ ಅಲ್ಲ, ಮಧುರಕವಿಯ ಹಿರಿಮೆಯನ್ನು ಹೇಳುವಂತಹ ಕೃತಜ್ಞತಾ ಪೂರ್ವಕವಾದ ಶ್ಲೋಕಗಳು ಅನುಸಂಧೇಯವಾಗಿವೆ.

ಆದರೂ, ಒಟ್ಟಿನಲ್ಲಿ ನಮಗೆ ಮಧುರಕವಿಯಾಳ್ವಾರರ ವಿಷಯ ತಿಳಿದಿರುವುದು ಅತ್ಯಲ್ಪ. ಅವರ ನಿಜವಾದ ಹೆಸರನ್ನೇ ನಾವರಿಯವು. ಈ "ಮಧುರಕವಿ" ಎಂಬುದು ಅನ್ವರ್ಥನಾಮ ಎಂದು 'ಗುರುಪರಂಪರಾ' 'ಪ್ರಪನ್ನಾಮೃತ' ಮುಂತಾದ ಚಾರಿತ್ರಕ ಗ್ರಂಥಗಳು ತಿಳಿಸುತ್ತವೆ. ಇವರು ಮಧುರಕವಿ ಎನಿಸಿಕೊಳ್ಳಬೇಕಾದರೆ ಕಾವ್ಯರಾಶಿಯನ್ನೇ ಸೃಷ್ಟಿಸಿರಬೇಕೆಂದು ತೋರುತ್ತದಲ್ಲವೇ? ಆದರೆ, ಇಂದು ನಮಗೆ ಲಭ್ಯವಾಗಿರುವುದು ಈ ಹನ್ನೊಂದು ಪಾಶುರಗಳು ಮಾತ್ರ. ಶ್ರೀವೈಷ್ಣವ ಸಮುದಾಯದಲ್ಲಿ ಮಧುರಕವಿಗಿರುವ ಹಿರಿಮೆಯನ್ನು ನೋಡಿದರೆ, ಅವರು ನಮ್ಮಾಳ್ವಾರರ ತಿರುವಾಯ್‌ಮೊಳಿಯ ಪ್ರಚಾರಕ್ಕಾಗಿ ಶ್ರೀವೈಷ್ಣವ ಸಿದ್ಧಾಂತಕ್ಕಾಗಿ ತಮ್ಮ ಜೀವನವನ್ನೇ

ತೇಯಿದ್ದಿರಬೇಕೆಂದು ತೋರುತ್ತದೆ. ಆದರೆ, ಇವುಗಳ ವಿವರ ನಮಗೆ ಲಭಿಸಿಲ್ಲ, ಅವರ ಇತರ ಕಾವ್ಯಗಳನ್ನಾಗಲೀ, ಅವರು ಶ್ರೀವೈಷ್ಣವ ಸಮುದಾಯಕ್ಕೆ ಮಾಡಿದ ಉಪಕಾರಗಳ ವಿವರಗಳನ್ನಾಗಲೀ, ಕಾಲಗರ್ಭದಿಂದ ಹೊರತೆಗೆಯಬಲ್ಲೆವಾದರೆ ನಾವೆ ಧನ್ಯರು.

" ಪಾಂಡ್ಯಕ್ಷಮಾಯಾಂ ಪ್ರಥಿತಾವತಾಂ ಚೈತ್ರಸ್ಯ ಚಿತ್ರೋಡು ಜಮೂರ್ಧ ಚೂಡಂ |
ಖಗಾಂಶಭಾಜಂ ಮಧುಂಕವೀಂದ್ರ ಶಠಾರಿಭಕ್ತಂ ಶರಣಂ ಪ್ರಪದ್ಯೇ || "

**ಆರಕಗ್ರಂಥಗಳು :—**

1. ಗುರುಪರಂಪರಾ ಪ್ರಭಾವ
2. ಮೊದಲಾಯಿರಂ (ವ್ಯಾಖ್ಯಾನ ಸಹಿತ)
3. ಶ್ರೀ ವಚನ ಭೂಷಣಂ –ಶ್ರೀಪಿಳ್ಳೈ ಲೋಕಾಚಾರ್ಯ.
4. ಕಣ್ಣಿನುಣ್ ಶಿರುತ್ತಾಂಬು –ಶ್ರೀ ಮಂ. ಭಿ. ಶ್ರೀನಿವಾಸ ಐಯ್ಯಂಗಾರ್.
5. ಆಳ್ವಾರುಗಳು –ಶ್ರೀ ಯಂ. ಯಾಮುನಾಚಾರ್ಯ.
6. Alvars of South India—K. A. Varadachari.
7. Hymns of the Alvars— J. S. M. Hooper.
8. ಪ್ರಪನ್ನಾಮೃತಂ.
9. ಗುರುಪರಂಪರಾ ಸಾರ — C. M. ವಿಜಯರಾಘವಾಚಾರ್ಯ.
10. ಶ್ರೀಮತ್ ದ್ರಮಿಡೋಪನಿಷತ್ ಸಾರಸಂಗ್ರಹ –ಇಕ್ಕೆಯುವಲ್ಲಿ ಜಿಗ್ಗಾ ವೆಂಕಟಾಚಾರ್ಯ.



# ಭೂಮಿಯಲ್ಲಿ ಅರಳಿದ ಪಾರಿಜಾತ

## ಟಿ. ವಿ. ರತ್ನಮ್ಮ, ಎಂ.ಎ.

ಜಗತ್ತಿನಲ್ಲಿ ಭಾರತದ ಮಹಿಳೆಯರ ಸ್ಥಾನ ಮಹತ್ವಪೂರ್ಣವಾದುದು, ವಿಶಿಷ್ಟವಾದುದು. ಜೀಜಾಬಾಯಿಯಂತಹ ವೀರಮಾತೆಯರು ಉಂಟು. ಕಿತ್ತೂರು ರಾಣಿ ಚನ್ನಮ್ಮ, ಝಾನ್ಸಿ ಲಕ್ಷ್ಮೀಬಾಯಿಯಂತಹ ವೀರ ರಮಣಿಯರು ಈ ದೇಶದಲ್ಲಿ ಆಗಿ ಹೋಗಿದ್ದಾರೆ. ಗಾರ್ಗಿ, ಲೋಪಾಮುದ್ರೆಯಂತಹ ಜ್ಞಾನಿಗಳೂ ಜನ್ಮರ್ಕತಾಕೊನ ತಳೆದಿದ್ದಾರೆ ಈ ಭರತ ಖಂಡದಲ್ಲಿ. ಇಷ್ಟೇ ಅಲ್ಲದೆ ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ದಿಟ್ಟತನದಿಂದ ಮುನ್ನಡೆದು ಭಗವತ್ಸಾಕ್ಷಾತ್ಕಾರ ಮಾಡಿಕೊಂಡು ತಮ್ಮ ಅನುಭವವನ್ನು ಜಗತ್ತಿಗೇ ಸಾರಿದ ಆದರ್ಶ ಮಹಿಳೆಯರೂ ಇದ್ದಾರೆ. ಇವರಲ್ಲಿ, ಉತ್ತರದೇಶದ ಮೀರಾ, ತಮಿಳುನಾಡಿನ ಆಂಡಾಳ್ ಹಾಗೂ ಕರ್ನಾಟಕದ ಅಕ್ಕಮಹಾದೇವಿ–ಈ ಮೂವರೂ ಈ ದೇಶದ ಪ್ರಸಿದ್ಧ ಮಹಿಳಾನುಭಾವಿಗಳು. ಈ ಮೂವರ ಕಾಲ, ದೇಶ, ಭಾಷೆ, ಭಿನ್ನವಾದರೂ ಭಾರತ ದೇಶದ ಧರ್ಮ, ಸಂಸ್ಕೃತಿಗಳ ಪ್ರತೀಕವಾಗಿದ್ದಾರೆ. ಮೇಲ್ನೋಟಕ್ಕೆ ಇವರ ಜೀವನ ಬೇರೆ ಬೇರೆಯಾಗಿ ಕಂಡುಬಂದರೂ ಇವರೆಲ್ಲರನ್ನು ಒಟ್ಟಿಗೆ ಬಂಧಿಸಿರುವ ಶಕ್ತಿ ಎಂದರೆ ಅಂತರಂಗದ ಭಕ್ತಿ. ಇವರೆಲ್ಲರೂ ಸತಿ–ಪತಿ ಭಾವದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಅವನಲ್ಲಿ ಐಕ್ಯರಾದವರು. ಜೀವನದ ಧ್ಯೇಯ, ಅದನ್ನು ಸಾಧಿಸಲು ಅನುಸರಿಸಿದ ಮಾರ್ಗ, ಆ ಶ್ರೇಯೋ ಮಾರ್ಗದಲ್ಲಿ ಎದುರಿಸಬೇಕಾಗಿ ಬಂದ ಎಡರು–ತೊಡರುಗಳು–ಈ ಮೂವರ ಜೀವನದಲ್ಲೂ ಸಮಾನವಾದುದು.

ಈಗಿನ ತಮಿಳುನಾಡಿನ ರಾಮನಾಥಪುರಂ ಡಿಸ್ಟ್ರಿಕ್ಟ್‌ನಲ್ಲಿರುವ ಶ್ರೀ ವಿಲ್ಲಿ ಪುತ್ತೂರ್ ಆಂಡಾಳ್ ಹುಟ್ಟಿದ ಊರು. ಇವಳ ತಂದೆ ವಿಷ್ಣುಚಿತ್ತರು. ತಾಯಿ ತುಳಸೀದೇವಿ. ವಿಷ್ಣುಚಿತ್ತರಿಗೆ ಶ್ರೀ ಪೆರಿಯಾಳ್ವಾರ್ ಎಂದೂ ಪಟ್ಟರ್ ಪಿರ್ರಾ, ಭಟ್ಟನಾಥ ಎಂದೂ ಆಗಿನ ಜನ ಅವರನ್ನು ಗೌರವಿಸುತ್ತಿದ್ದರು. ಹನ್ನೆರಡು ಜನ ಆಳ್ವಾರರಲ್ಲಿ ಶ್ರೀ ಪೆರಿಯಾಳ್ವಾರ್ ಹಿರಿಯರು. 'ವಿಷ್ಣುಚಿತ್ತ' ಎಂದರೆ ವಿಷ್ಣುವನ್ನೇ, ಶ್ರೀ ವಿಲ್ಲಿ ಪುತ್ತೂರಿನಲ್ಲಿರುವ 'ವಟಪತ್ರಶಾಯಿ'ಯನ್ನು ತಮ್ಮ ಚಿತ್ತದಲ್ಲಿ ಭಕ್ತಿಯಿಂದ ಬಂಧಿಸಿದ್ದವರು ಎಂದರ್ಥ.

ಪೆರಿಯಾಳ್ವಾರರು ಬೆಳಗಿನ ಜಾವವೇ ಎದ್ದು, ತಾವೇ ಪೋಷಿಸಿಕೊಂಡು ಬರುತ್ತಿದ್ದ ತುಳಸಿಯ ವನಕ್ಕೆ ಹೋಗುವುದು; ಮೊಸಲಿಳಿಯುದ ಹೊಚ್ಚ ಹೊಸ ಹೂಗಳನ್ನು ತುಳಸಿಯನ್ನು ಬಿಡಿಸಿ ಮನೆಗೆ ತರುವುದು; ವೈವಿಧ್ಯಪೂರ್ಣವಾದ ಮಾಲೆಗಳನ್ನು ಕಟ್ಟಿ ವಟಪತ್ರಶಾಯಿಗೆ ತೆಗೆದುಕೊಂಡು ಹೋಗಿ ಅರ್ಪಿಸುವುದು—ಇದು ಅವರ ದಿನಚರಿ.

ಒಂದು ದಿನ, ಪೆರಿಯಾಳ್ವಾರರು ತೋಟಕ್ಕೆ ಹೋದಾಗ, ತುಳಸಿಗಿಡದ ಮೇಲೆ ದಿವ್ಯತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಹೆಣ್ಣುಮಗು ಮಲಗಿರುವುದನ್ನು ಕಂಡರು. ಆ ಮಗುವನ್ನು ಎತ್ತಿಕೊಂಡು ವಟಪತ್ರಶಾಯಿಯ ದೇವಸ್ಥಾನಕ್ಕೆ ಹೋಗಿ ದೇವನಡಿಗೆ ಅದನ್ನು ಸಮರ್ಪಿಸಿದರು. ಕೂಡಲೇ ದೇವವಾಣಿಯೂ " ಈ ಮಗುವಿಗೆ ಕೋದೈ (ಗೋದಾ) ಎಂದು ಹೆಸರಿಟ್ಟು ನಿಮ್ಮ ಮಗಳೆಂದೇ ಭಾವಿಸಿ ಸಲಹಿ " ಎಂದು ಹೇಳಲು ಅದರಂತೆ ಆಳ್ವಾರರು ' ಕೋದೈ ' ಎಂದೇ ನಾಮಕರಣಮಾಡಿ ಆ ಭಕ್ತಿಲತೆಯನ್ನು ಬೆಳೆಸುತ್ತಾ ಬಂದರು. ಗೋದೆಯು ಆಳ್ವಾರರಿಗೆ ಮಾತ್ರವಲ್ಲದೆ ಊರಿನ ಕಣ್ಮಣಿಯಂತೆ ಬೆಳೆದಳು.

' ಕೋದೈ ' ಎಂದರೆ ತಮಿಳಿನಲ್ಲಿ ಹೂಮಾಲೆ, ಪಾಮಾಲೆ, ಸುಂದರವಾದ ಹೆಣ್ಮಕ್ಕಳ ಮುಡಿ, ಎಂಬ ಹಲವಾರು ಅರ್ಥಗಳುಂಟು. ಈ ಎಲ್ಲಾ ಅರ್ಥಗಳು ಗೋದೆಗೆ ಅನ್ವಯಿಸುತ್ತವೆ. ಅವಳ ಕೇಶರಾಶಿ ಬಹುಸುಂದರವೂ ನೀಳವೂ ಆಗಿತ್ತು. ಅಲ್ಲದೆ ತನ್ನ ತಂದೆ ದೇವರಿಗೆಂದು ಕಟ್ಟಿದ ಹೂಮಾಲೆಯನ್ನು ಧರಿಸಿ ಅನಂತರ ಅವನಿಗೆ ಕೊಡುತ್ತಿದ್ದಳು. ಅದೂ ಅಲ್ಲದೆ ಹೂಮಾಲೆಯ ಜೊತೆಯಲ್ಲಿ ಪಾಮಾಲೆಯನ್ನು, ಅಂದರೆ ಹಾಡುಗಳ ಮಾಲೆಯನ್ನು ಹೃದಯಂಗಮವಾಗಿ ಹಾಡಿ ವಟಪತ್ರಶಾಯಿಗೆ ಅರ್ಪಿಸಿದಳು. ಹೀಗೆ ' ಕೋದೈ ' ಎಂಬ ಹೆಸರು ಅವಳಿಗೆ ಎಲ್ಲ ದೃಷ್ಟಿಯಿಂದಲೂ ಸಾರ್ಥಕವಾದ ಹೆಸರಾಯಿತು.

ಪೆರಿಯಾಳ್ವಾರರ ಮಗಳಾದ ಗೋದೆಗೆ ಭಗವದ್ಭಕ್ತಿ ರಕ್ತಗತವಾಗಿ ಬಂದಿತು. ಅವಳು ಬೆಳೆದ ಧಾರ್ಮಿಕ ವಾತಾವರಣವೂ ಅದಕ್ಕೆ ಪ್ರಭಾವವನ್ನು ಬೀರಿತು. ತಂದೆ ಮಾಡುವ ಭಗವತ್ಸಂಬಂಧವಾದ ಕೆಲಸ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದಳು. ತಂದೆ ಬೆಳೆಸಿದ ತೋಟದಲ್ಲಿರುವ ಗಿಡಗಳಿಗೆ ನೀರೆರೆಯುವುದು, ಹೂವು ಮತ್ತು ತುಳಸಿಯನ್ನು ಕಿತ್ತುಕೊಡುವುದು; ಕಸ ಕಡ್ಡಿ ಕಳೆಯನ್ನು ತೆಗೆದು ಸ್ವಚ್ಛಗೊಳಿಸುವುದು—ಇವೇ ಮೊದಲಾದ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತಿದ್ದಳು. ಉಳಿದ ವೇಳೆಯಲ್ಲಿ ರಾಮ, ಕೃಷ್ಣರ, ಭಗವದ್ಭಕ್ತರ ಕತೆಗಳನ್ನು ಕೇಳುವುದು. ರಾಮ ಕತೆಗಿಂತ ಕೃಷ್ಣಕತೆ ಎಂದರೆ ಗೋದೆಗೆ ಬಲು ಪ್ರೀತಿ. ಮಣ್ಣು ಮರಳ ಬೊಂಬೆಗಳನ್ನು ಇಟ್ಟುಕೊಂಡು ಆಟವಾಡುವುದು ಇವಳಿಗೆ ಹಿಡಿಸುತ್ತಿರಲಿಲ್ಲ, ಶ್ರೀಕೃಷ್ಣನ ಕೈಯಲ್ಲಿರುವ ಕೊಳಲು

ಚಕ್ರಗಳನ್ನು ಬರೆದು ಆಟವಾಡುತ್ತಿದ್ದಳು. ಒಮ್ಮೊಮ್ಮೆ ಸಣ್ಣದಾದ ಮರಳಿನಿಂದ ಮನೆಕಟ್ಟುವ ಆಟವಾಡುತ್ತಿದ್ದಳು. ಗೋದೆಯೂ ಅವಳ ಜೊತೆಯವರೂ ಮರಳಿನಲ್ಲಿ ಮನೆಕಟ್ಟಿ ಮುಗಿಸುತ್ತಿದ್ದತೆಯೇ ಶ್ರೀಕೃಷ್ಣನು ಬಂದು ಮನೆಗಳನ್ನು ಕೆಡಿಸುತ್ತಿದ್ದಂತೆಯೂ ಆಗ ಹೆಣ್ಮಕ್ಕಳೆಲ್ಲರೂ " ಏನೂ ಅರಿಯದ ಹಸುಕಂದಮ್ಮಗಳು ನಾವು, ನಮಗೆ ನೋವುಂಟುಮಾಡುವುದರಿಂದ ನಿನಗೇನು ಲಾಭ ? ನಮ್ಮ ಮನಸ್ಸಿಗೆ ನೋವುಂಟು ಮಾಡಬೇಡ " ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಿದ್ದರು. ತಾವು ಶ್ರಮಪಟ್ಟು ಕಟ್ಟಿದ ಮನೆಯನ್ನು ಕೆಡವಿದರೂ ಅವರಿಗೆ ಅವನ ಮೇಲೆ ಎಳ್ಳಷ್ಟು ಕೋಪವಿಲ್ಲ. ಗೋದೆಯು ಶ್ರಮದಿಂದ ಸಾಧನೆಯಿಂದ ಕಟ್ಟಿದ ಭಕ್ತಿಮಂದಿರವನ್ನು ನಿರ್ಮಿಸಿದಳೆಂದೂ ಆ ಮಂದಿರವನ್ನೇ ಭೇದಿಸಿಕೊಂಡು ಅವಳ ಆರಾಧ್ಯಮೂರ್ತಿ, ಶ್ರೀಕೃಷ್ಣನು, ಕಂಭವನ್ನು ಒಡೆದುಕೊಂಡು ಬಂದ ನರಸಿಂಹನಂತೆ, ದರ್ಶನವೀಯುತ್ತಾನೆಂಬದು ಧ್ವನಿತವಾಗುತ್ತದೆ.

ಹೀಗೆ ಗೋದೆಯು ಇನ್ನೂ ಕೇವಲ ಐದು ವರ್ಷದವಳಿದ್ದಾಗಲೇ ವಟಪತ್ರಶಾಯಿಯನ್ನೇ ಶ್ರೀ ಕೃಷ್ಣನೆಂದು ಭಾವಿಸಿ, ತಾನೇ ಗೋಪಿಕಾ ಸ್ತ್ರೀಯೆಂದು ಭಾವಿಸಿ, ತಾನು ವಾಸಿಸುವ ವಿಲ್ಲಿ ಪುತ್ತೂರನ್ನೇ ನಂದಗೋಕುಲವೆಂದು ಭಾವಿಸಿ ಆಟವಾಡುತ್ತಿದ್ದಳು. ಅವನನ್ನು ಕುರಿತು ಹಾಡುತ್ತಿದ್ದಳು, ಸ್ತುತಿಸುತ್ತಿದ್ದಳು. ಎಳೆಯ ವಯಸ್ಸಿನಲ್ಲಿ ಹಾಡಿದ ಗೋದೆಯ ಹಾಡುಗಳು 'ತಿರುಪ್ಪಾವೈ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. 'ತಿರುಪ್ಪಾವೈ' ಎಂದರೆ ಸಿರಿನೋಂಪಿ ಎಂದು ಅರ್ಥವುಂಟು. ಗೋದೆಯು ಕೃಷ್ಣ ಸಾಕ್ಷಾತ್ಕಾರಕ್ಕಾಗಿ ಈ ವ್ರತವನ್ನು ಆಚರಿಸಿದಳು. ಈ ವ್ರತವನ್ನು ಕನ್ಯೆಯರು ಸಾಮಾನ್ಯವಾಗಿ ಆಚರಿಸುತ್ತಾರೆ. ಈ ವ್ರತ ಒಂದು ರೀತಿಯಲ್ಲಿ ಗೌರೀ ವ್ರತವಿದ್ದಂತೆ. ಮದುವೆಯಾಗದ ಹೆಣ್ಮಕ್ಕಳು ಕಾತ್ಯಾಯಿನಿ ದೇವಿಯನ್ನು ಕುರಿತು ಮಾರ್ಗಶಿರ ಮಾಸದಲ್ಲಿ ಒಂದು ತಿಂಗಳ ಕಾಲ ಈ ವ್ರತವನ್ನು ಆಚರಿಸುತ್ತಾರೆ. ಸದ್ಗುಣಭರಿತರಾದ, ಭಕ್ತರಾದ ಪತಿ ದೊರಕಲಿ ಎಂಬುದು ಈ ವ್ರತದ ಉದ್ದೇಶ. 'ಕೇವಲ ಸ್ವಾರ್ಥ ಸಾಧನೆಯೇ ಮುಖ್ಯ ಗುರಿಯಾಗಿರದೆ ಜಗತ್ಕಲ್ಯಾಣ ದೃಷ್ಟಿಯೂ ಇದರ ಪರಮ ಉದ್ದೇಶವೆಂದೇ ಹೇಳಬೇಕು. ಜಗತ್ತಿನಲ್ಲಿ ಎಲ್ಲೆಲ್ಲೂ ಸುವೃಷ್ಟಿಯಾಗಬೇಕು. ಹಸುರಾದ ಪೈರು ಪಚ್ಚೆಗಳು, ದವಸ ಧಾನ್ಯಗಳು ಸಮೃದ್ಧವಾಗಿ ಬೆಳೆಯಬೇಕು. ಹಸುಗಳು ಕೊಡಗಟ್ಟಲೆ ಹಾಲನ್ನು ಕೊಡುವಂತಾಗಬೇಕು. ಹೀಗೆ ಜಗತ್ತಿಗೆ ಅಷ್ಟೈಶ್ವರ್ಯವು ಸಕಲ ಸುಖಸಂಪತ್ತು ಲಭಿಸಬೇಕೆಂಬುದೇ ಈ ಮಹಾ ವ್ರತದ ಉದ್ದೇಶ. ಈಗಲೂ ತಮಿಳು ನಾಡಿನಲ್ಲಿ ಹೆಣ್ಮಕ್ಕಳು ಈ ವ್ರತವನ್ನು ಮಾರ್ಗಶಿರ ಮಾಸದಲ್ಲಿ ಆಚರಿಸುತ್ತಾರೆ.

ಗೋದೆಯು ತಂದೆಯ ಮನೆಯ ಭಕ್ತನಾತಾವರಣದಲ್ಲಿ ಭಗವತ್ಸಂಬಂಧವಾದ ಆಟಗಳನ್ನು ಆಡುತ್ತಾ ಶುಕ್ಲ ಪಕ್ಷದ ಚಂದ್ರನಂತೆ ಬೆಳೆದು ದೊಡ್ಡವಳಾದಳು. ಅವಳು

ಬೆಳೆದಂತೆಲ್ಲಾ ಅವಳ ಭಕ್ತಿಯೂ ಬೆಳೆಯುತ್ತಾ ಬಂದಿತು. ಬಾಲ್ಯ ಕಳೆದು ಯೌವನದಲ್ಲಿ ಅಡಿಯಿಟ್ಟಂತೆ, ಬಾಲ್ಯದ ಭಕ್ತಿಭಾವವು ಪ್ರಣಯವಾಗಿ ಮಧುರ ಭಕ್ತಿಯಾಗಿ ಮಾರ್ಪಡುತ್ತದೆ. ಪುರುಷೋತ್ತಮನೇ ತನಗೆ ಪತಿಯೆಂದು ಮನಸ್ಸಿನಲ್ಲಿ ಸಂಕಲ್ಪಿಸಿದಳು. ಜೀವಾತ್ಮವೊಂದು ಪರಮಾತ್ಮನನ್ನು ಪತಿಯಾಗಿ ಪಡೆಯಬೇಕೆಂದು ಹಂಬಲಿಸಿದ ಮಾತ್ರಕ್ಕೆ ಪರಮಾತ್ಮನು ಒಲಿಯುವನೇ ? ಜೀವಾತ್ಮ, ಸಾಧನೆಯ ಮೂಲಕ ಅವನನ್ನು ಪಡೆಯಬೇಕು, ಭಕ್ತಿಯೂ ಮಾಡಬೇಕು. ಆಗ ಕೃಷ್ಣ ಒಗೊಡುತ್ತಾನೆ. ಈ ಸಂಕಲ್ಪ ಸಾಧನೆಗಾಗಿ ಗೋದೆಯೂ ಹಿಂದೆ ಉಲ್ಲೇಖಿಸಿದ ' ಪಾವೈ ' ವ್ರತವನ್ನು ಆಚರಿಸುವಳು. ಈ ವ್ರತಾಚರಣೆಗೆ ಮಾರ್ಗಶಿರಮಾಸ ಶ್ರೇಷ್ಠವಾದುದು. ಈ ವ್ರತವನ್ನಾಚರಿಸುವಾಗ ನೆಯ್ಯುಣ್ಣದೆ ಪಾಲುಣ್ಣದೆ ಒಳ್ಳೊಳ್ಳೆಯ ವಸ್ತ್ರ ಒಡವೆಗಳನ್ನು ಧರಿಸದೆ, ಮೆತ್ತನೆಯ ಹಾಸಿಗೆಯ ಮೇಲೆ ಮಲಗದೆ ಭೋಗೋಪಭೋಗಗಳನ್ನು ತ್ಯಜಿಸಬೇಕು. ನಿಷ್ಠೆಯಿಂದ ಆಚರಿಸಬೇಕು. ಬೆಳಗಿನ ಜಾವಕ್ಕೆ ಮಿಾಯಲು ಹೋಗಬೇಕು; ಇದು ನೇಮ. ಅಂತೆಯೇ ಒಂದು ತಿಂಗಳ ಕಾಲ ವ್ರತವನ್ನು ಆಚರಿಸಿದಳು. ಆದರೆ ಗೋದೆಯ ಆಸೆ ಈಡೇರಲಿಲ್ಲ. ಬಿಡಲು ಅವಳ ವೇದನೆ ಹೆಚ್ಚಾಯಿತು.

ದಿವ್ಯೋನ್ಮಾದದಿಂದ ಕೂಡಿದ ಶ್ರೀ ಗೋದೆಯು ಭಗವದ್ವಿರಹವನ್ನು ತಾಳಲಾರದೆ ಅಪಾರವಾದ ನೋವನ್ನು ಅನುಭವಿಸಿದಳು. ಈ ಸಂದರ್ಭದಲ್ಲಿ ಅವಳು ತನ್ನ ನಲ್ಲನಿಗಾಗಿ ಪಟ್ಟಪಾಡು, ಹೃದಯದ ಮಿಡಿತವು ಹಾಡಿನ ಹೊನಲಾಗಿ ಹರಿಯಿತು. ಇದೇ 'ನಾಚ್ಚಿಯಾರ್ ಕಿರುಮೊಳಿ ' ಅಥವಾ 'ನಾಯಕೀ ಗೀತೆ' ಎಂಬ ಹೆಸರಿನಿಂದ ತಮಿಳು ಸಾಹಿತ್ಯನಲ್ಲಿ ಪ್ರಸಿದ್ಧವಾಗಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. ಈ ಹಾಡುಗಳು ಅತ್ಯುತ್ತಮವಾದ ಆಧ್ಯಾತ್ಮಿಕ ಭಾವಗೀತೆಗಳು ಎಂದರೆ ಅತಿಶಯೋಕ್ತಿಯೆನಲ್ಲ ಹೃದಯ ದುಃಖದಿಂದ ತುಂಬಿದಾಗ ಕಣ್ಣೀರ ಹೊನಲಾ ಹರಿಯದೆ ಪ್ರಬುದ್ಧಾತ್ಮರಾದವರಿಗೆ ಮನದ ಮಾತಾಗಿ ಆರಾಧ್ಯ ದೈವವನ್ನು ಆ ದುಃಖದಿಂದ ಬಿಡಿಸೆಂದು ಕೇಳಿಕೆಕೊಳ್ಳುವ ಮೊರೆಯಾಗಿ ನಿಲ್ಲುತ್ತದೆ.

ಪುರುಷಪುರುಷೋತ್ತಮನ ಹುಚ್ಚು ಹಿಡಿದ ಶ್ರೀ ಗೋದೆಯು ನಿರ್ಮಲೋದಕದಲ್ಲಿ ಮಿಾಯುವಳು. ದಿವ್ಯ ವಸ್ತ್ರವನ್ನುಟ್ಟು ಶ್ರೀಗಂಧವನ್ನು ಲೇಪಿಸುವಳು. ಕೈ|ತುಂಬ ಬಳೆಗಳನ್ನು ತೊಟ್ಟು ಅವುಗಳನ್ನು ಕುಲುಕಿಸುವಳು; ಚೆಂದುಟಿಗಳನ್ನು ಸಿಂಗರಿಸುವಳು· ಒಡವೆಗಳನ್ನು ಧರಿಸುವಳು. ಹೀಗೆ ನವವಧುವಿನಂತೆ ಸಿಂಗರಿಸಿಕೊಂಡು ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನೋಡಿಕೊಂಡು 'ಸುಂದರಾಂಗನಾದ ಆ 'ವಟಪತ್ರಶಾಯಿ'ಗೆ ತಾನು ಅನುರೂಪಳಾಗುವೆನೇ' ಎಂದು ಸಂದೇಹ ಪಡುವಳು. ಆ ವೇಳೆಗೆ ವಟಪತ್ರಶಾಯಿಗೆಂದು ಕಟ್ಟಿದ ಹೂಮಾಲೆಯ ಕಡೆಗೆ ಅವಳ ಗಮನ ಹರಿಯುವುದು. ಅದನ್ನು ಕೊರಳಲ್ಲಿ ಧರಿಸಿ ಕನ್ನಡಿಯ ಮುಂದೆ ನಿಂತು ತನ್ನ ಪಕ್ಕದಲ್ಲಿ ಶ್ರೀ ಕೃಷ್ಣನೂ ಇರು

ನಂತೆ ಕ್ಷಣಕಾಲ ಭಾವಿಸುವಳು. ಅನಂತರ ಇದು ಕೇವಲ ಭಾವನೆ ಎಂದು ತಿಳಿದು ನಿರಾಶೆಯಿಂದ ತಾನು ಧರಿಸಿದ ಹೂಮಾಲೆಯನ್ನು ತೆಗೆದು ಮೊದಲಿನಂತೆಯೇ ಬುಟ್ಟಿಯಲ್ಲಿ ಇಡುವಳು, ಹೀಗೆ ಪ್ರತಿ ದಿನವೂ ಸಬರಿಯಂತೆ ತಾನು ಮುಡಿದು ಅನಂತರ ವಟಪತ್ರಶಾಯಿಗೆ ಅದನ್ನು ಅರ್ಪಿಸುತ್ತಿದ್ದಳು.

ಒಮ್ಮೆ ಪೆರಿಯಾಳ್ವಾರರು ಕೊಟ್ಟ ಹೂ ಮಾಲೆಯಲ್ಲಿ ಕೂದಲೊಂದು ಕಾಣಿಸಿತು. ಅರ್ಚಕರು ಆ ಹೂಮಾಲೆಗಳು ಪೂಜೆಗೆ ಯೋಗ್ಯವಲ್ಲವೆಂದು ನಿರಾಕರಿಸಿದರು. ಇದರಿಂದ ನೊಂದ ಆಳ್ವಾರರು ಇದನ್ನು ಪರೀಕ್ಷಿಸಬೇಕೆಂದು ನಿಶ್ಚಯಿಸಿ ಮಾರನೆಯ ದಿನ ಹೂಮಾಲೆಗಳನ್ನು ಕಟ್ಟಿ ಎಂದಿನಂತೆ ಬುಟ್ಟಿಯಲ್ಲಿಟ್ಟು ಏನೂ ಅರಿಯದವನಂತೆ ಹೊರಗೆ ಹೋಗುವುದಾಗಿ ತಿಳಿಸಿ ಅಲ್ಲಿಯೇ ಅಡಗಿ ಕುಳಿತರು. ಇದನ್ನರಿಯದ ಗೋದೆಯು ಹೂಮಾಲೆಯನ್ನು ಧರಿಸಿ ಕನ್ನಡಿಯ ಮುಂದೆ ನಿಂತಿರುವಾಗಲೇ ಆಳ್ವಾರರು ಬಂದು ಬಿಟ್ಟರು. ಮಗಳ ಈ ಕಾರ್ಯದಿಂದ ಕೋಪಗೊಂಡ ಆಳ್ವಾರರು ಅವಳಿಗೆ ಶಾಂತ ರೀತಿಯಲ್ಲೇ ಸಮಾಧಾನ ಮಾಡಿ, ಹೊಸ ಹಾರಗಳನ್ನು ಕಟ್ಟಿ ದೇವರಿಗೆ ಅರ್ಪಿಸಿದರು.

ಅಂದಿನ ರಾತ್ರಿ ಆಳ್ವಾರರ ಹಾಗೂ ದೇವಸ್ಥಾನದ ಅರ್ಚಕರ ಕನಸಿನಲ್ಲಿ ದೇವರು ಕಾಣಿಸಿಕೊಂಡು ಗೋದೆಯು ಮುಡಿದುಕೊಟ್ಟ ಮಾಲೆಯೇ ತನಗೆ ಪ್ರಿಯವೆಂದೂ ಅದಕ್ಕೆ ಒಂದು ಬಗೆಯ ಸುವಾಸನೆಯುಂಟಾಗುವುದೆಂದು, ಅವಳು ಮುಡಿದುಕೊಟ್ಟ ಹೂವನ್ನೆ ತನಗೆ ಪ್ರತಿದಿನವೂ ಅರ್ಪಿಸಬೇಕೆಂದೂ ತಿಳಿಸುವನು. ಅಷ್ಟೇ ಅಲ್ಲದೆ ಹೂಮಾಲೆಯನ್ನು ಮುಡಿದುಕೊಡುವುದಕ್ಕೆ ಪಾಮಾಲೆಯನ್ನು ಹಾಡುವುದಕ್ಕೆಂದೇ ಅವಳು ಅವತಾರವೆತ್ತಿರುವುದಾಗಿ ತಿಳಿಸಿ ಅಂತರ್ಧಾನ ಹೊಂದುವನು. ಅಂದಿನಿಂದ ಆಳ್ವಾರರು ತಮ್ಮ ಮಗಳು ನೀಳಾದೇವಿಯೋ ಶ್ರೀ ದೇವಿಯೋ ಭೂದೇವಿಯೋ ಆಗಿರಬೇಕೆಂದು ಸಂತಸಪಟ್ಟು ಅವಳನ್ನು 'ಆಂಡಾಳ್' ಎಂದು ಸಂಭೋದಿಸಿದರು. 'ಆಂಡಾಳ್' ಎಂದರೆ ವಿಷ್ಣುಭಕ್ತೆ ಎಂದರ್ಥ. ಅಲ್ಲದೆ ತನ್ನನ್ನೇ ಭಕ್ತಿಸಾಗರದಲ್ಲಿ ಮುಳುಗುವಂತೆ ಮಾಡಿದವಳು ಎಂದು ತನ್ನನ್ನೇ 'ಆಂಡವಳ್' ಅಂದರೆ ಆಳುವವಳು ಎಂದೂ ಅರ್ಥವುಂಟು. ಇಲ್ಲಿಂದ ಮುಂದೆ ಶ್ರೀಗೋದೆಯು 'ಆಂಡಾಳ್' ಎಂದು 'ಸೂಡಿಕೊಡುತ್ತ ನಾಚಿಯಾರ್' ಅಂದರೆ 'ಮುಡಿದು ಕೊಟ್ಟ ನಾಯಕಿ' ಎಂದು ಪ್ರಸಿದ್ಧಳಾಗಿದ್ದಾಳೆ. ಈ ಘಟನೆ ಅವಳ ಜೀವನದಲ್ಲಿ ಒಂದು ಪ್ರಮುಖವಾದ ಘಟ್ಟ.

ವಯಸ್ಸಿಗೆ ಬಂದ ಗೋದೆಯನ್ನು ಕಂಡಾಗಲೆಲ್ಲಾ ಆಳ್ವಾರರಿಗೆ ಅವಳ ಮದುವೆಯ ಚಿಂತೆಯಾಗುತ್ತಿತ್ತು. ಅಲ್ಲದೆ ಮಗಳಿಗೆ ವಯಸ್ಸಾದಂತೆ ಭಗವಂತನ ಮೇಲಿನ ಅವಳ ಹುಚ್ಚೂ ಅಧಿಕವಾಯಿತು ಈ ಹುಚ್ಚಿಗೆ ಮದುವೆಯೇ ಮದ್ದು ಎಂದು ತಿಳಿದು ಮಗಳಲ್ಲಿ ಪ್ರಸ್ತಾಪಿಸಿದರು ಗೋದಾದೇವಿಯು ತಾನು ಪುರುಷೋತ್ತಮನನ್ನೇ ವರಿಸುವು

ದಾಗಿಯೂ, "ಮಾನವನಿಗೆ" ಎಂಬ ಮಾತು ಬಂದರೆ ಪ್ರಾಣಾರ್ಪಣೆಗೂ ತಾನು ಸಿದ್ಧವಾಗಿರುವುದಾಗಿಯೂ ಧೈರ್ಯವಾಗಿ ತಂದೆಗೆ ತಿಳಿಸಿಬಿಟ್ಟಳು. ಮಗಳ ಮಾತಿನಿಂದ ವಿಷ್ಣುಭಕ್ತರಾದ ಆಳ್ವಾರರಿಗೆ ಸಂತಸವಾಯಿತೆಂಬುದೇನೋ ನಿಜ. ಆದರೂ ಹೊಸಚಿಂತೆಯೊಂದು ಅವರನ್ನು ಕಾಡಿತು, ಮಾನವಳಾದ ಗೋದೆಗೂ ದೇವರಿಗೂ ವಿವಾಹವೆಂತು ? ಎಂದು ಚಿಂತಿಸಿದರು. ಕೊನೆಗೆ ನೂರೆಂಟು ದಿವ್ಯಕ್ಷೇತ್ರಗಳಲ್ಲಿ ನೆಲೆಸಿರುವ ಶ್ರೀ ಹರಿಯ ರೂಪ ವೈಭವಗಳನ್ನು ವರ್ಣಿಸಿ ಇವರಲ್ಲಿ ಮಗಳು ಯಾರನ್ನು ಒಲಿದಿದ್ದಾಳೆಂಬುದನ್ನು ಕೇಳಿದರು. ಆಗ ಗೋದೆಯು ಶ್ರೀರಂಗದ ರಂಗನಾಥನನ್ನು ವರಿಸುವುದಾಗಿ ತಿಳಿಸಿದಳು.

ಶ್ರೀ ಆಂಡಾಳ್ ವಯಸ್ಕಳಾದಂತೆ ಅವಳ ಭಕ್ತಿಯೂ ಬೆಳೆಯುತ್ತಾ ಬಂದಿತು. ಅವಳು ತಾನೇ ಒಬ್ಬ ಗೋಪಿಕಾ ಸ್ತ್ರೀ ಎಂದು ಭಾವಿಸಿ, ಗೆಳತಿಯರನ್ನೇ ಗೋಪಿಕೆಯರೆಂದು ಭಾವಿಸುತ್ತಾಳೆ. ಅವರೊಡನೆ ಸ್ನಾನಾರ್ಥವಾಗಿ ನದಿಗೆ ಹೋದಂತೆ ಅಲ್ಲಿ ಶ್ರೀ ಕೃಷ್ಣನು ತಮ್ಮ ವಸ್ತ್ರಗಳನ್ನು ಬಚ್ಚಿಟಂತೆಯೂ ತಾನು, ಅವನನ್ನು ತಮ್ಮ ವಸ್ತ್ರಗಳನ್ನು ಹಿಂದಿರುಗಿಸಬೇಕೆಂದು ಬೇಡಿದಂತೆಯೂ ಭಾವಿಸುತ್ತಾಳೆ.

ಒಮ್ಮೊಮ್ಮೆ ನಿರಾಶಳಾಗಿ ವಿರಹತಾಪದಿಂದ ಬೆಂದು ಬೇಗುದಿಗೊಂಡು ಪುರುಷೋತ್ತಮನ ದರ್ಶನ ಲಾಭ ತನಗೆ ಇದೆಯೋ ಇಲ್ಲವೋ ಎಂಬ ಸಂದೇಹದಿಂದ 'ಕೂಡಲ್' ನಕ್ಷೆಯನ್ನು ಬರೆದು ಅದನ್ನೇ ಪ್ರಾರ್ಥಿಸುತ್ತಾಳೆ. ಹೀಗೆ ಪ್ರಾರ್ಥಿಸುವುದು ಸಾಧನೆಯ ಮಾರ್ಗದಲ್ಲಿ ಗಮನಾರ್ಹವಾದ ಒಂದು ಘಟ್ಟವೆಂದೇ ಹೇಳಬಹುದು.

ಮೊದಲೇ ವಿರಹವನ್ನು ಅನುಭವಿಸುತ್ತಿರುವಲ್ಲಿ ವರ್ಷಋತುವಿನ ಆಗಮನದಿಂದ ವಿರಹ ವೇದನೆ ಉಲ್ಬಣವಾಗುತ್ತದೆ. ನೋವನ್ನು ತಾಳಲಾರದೆ ಕೋಗಿಲೆಯನ್ನು

ಅನ್ಬು ಉಡೈಯಾರೈ ಪಿರಿವುರು ನೋಯ್ದು
ನೀಯುಂ ಅರಿದಿ ಕುಯಿಲೇ !
ಪೊನ್ ಪುರೈ ಮೇನಿ ಕುರುಳ್‌ಕೊಡಿಯುಡೈಯ
ಪುಣ್ಣಿಯನ್ನೈ ವರ ಕೂವಾಯ್ ||

'ನಲ್ಲನ ಅಗಲಿಕೆಯ ನೋವು ಎಂತಹ ಅಸಹನೀಯ ಎಂಬುದು ನಿನಗೂ ಗೊತ್ತಿಲ್ಲವೇ ? ಕೋಗಿಲೆ, ಚಿನ್ನದ ಕಾಂತಿಯುಳ್ಳ ಆ ಪುಣ್ಯಪುರುಷನನ್ನು ಕಂಡರೆ ಬರಹೇಳು ?' ಎಂದು ಪ್ರಾರ್ಥಿಸುತ್ತಾಳೆ. ಮಳೆಗಾಲದಲ್ಲಾದರೂ ಬಂದೇ ಬರುತ್ತಾನೆ ಎಂಬ ಭರವಸೆಯಿಂದ ಕಾದು ಕಾದು ಬೇಸತ್ತ ಆಂಡಾಳ್ ಕಡೆಗೆ ಮೋಡಗಳ ಮೂಲಕವೂ ಸಂದೇಶ ಕಳುಹಿಸುತ್ತಾಳೆ.

ಕುಳಿರ್ ಅರುವಿ ವೇಂಗಡತ್ತು ಎನ್
ಗೋವಿಂದನ್ ಗುಣಂಪಾಡಿ ।
ಅನಿಯತ್ ಮೇಘಂಗಾಟ್
ಆವಿಕಾತ್ತು ಇನುಪ್ಪೇನ್ ॥

' ಎಲೈ ಕರುಣಾಳುಗಳಾದ ಮೋಡಗಳೇ ! ಮಳೆಗಾಲದ ಚಳಿಗೆ ನಡುಗುತ್ತಾ ತಿರುಪತಿಯಲ್ಲಿರುವ ನನ್ನ ಗೋವಿಂದನ ಗುಣಗಳನ್ನು ಹಾಡುತ್ತಾ ನಾನು ಜೀವ ಹಿಡಿದಿದ್ದೇನೆ; ಅವನು ಬಾರದೆ ಹೋದರೆ ನಾನು ಜೀವಂತಳಾಗಿರುವುದು ಅಸಾಧ್ಯ. ಆದರಿಂದ ಅವನಿಗೆ ಸ್ತ್ರೀಹತ್ಯಾದೋಷವುಂಟಾಗುತ್ತದೆ. ಜಾಗ್ರತೆ ಬರ ಹೇಳಿ ' ಎಂದು ಮೊರೆಯಿಡುತ್ತಾಳೆ.

ಭಗವಂತನ ನಿರೀಕ್ಷಣೆಯಲ್ಲೇ ವರ್ಷಾಕಾಲವೂ ಮುಗಿದು ಹೋಯಿತು. ಮೋಡಗಳು ಮಳೆಯನ್ನು ಸುರಿಸಿ ಹೊರಟು ಹೋದುವು. ಆದರೆ ಅವಳ ಆರಾಧ್ಯ ದೈವ ಬರುವ ದರ್ಶನವೀಯುವ ಸೂಚನೆಗಳೇ ಕಂಡು ಬರಲಿಲ್ಲ–ಪ್ರಕೃತಿಯಲ್ಲಿ ಎಲ್ಲಿ ನೋಡಿದರೂ ಗಿಡಮರಗಳು ಹೂ ಹಣ್ಣು ಚಿಗುರುಗಳಿಂದ ಜಗ್ಗಿ ನಿಂತು ಪರಮಾತ್ಮನ ಅಮೋಘ ಸೃಷ್ಟಿ ಶಕ್ತಿಯನ್ನು ಸಾರುತ್ತಿದ್ದುವು; ನವಚೈತನ್ಯದಿಂದ ಮಯೂರಗಳು ನರ್ತಿಸಿದುವು; ದುಂಬಿಗಳು ಝೇಂಕರಿಸಿದುವು; ಕೋಗಿಲೆಗಳು ಇಂಪಾದ ಸ್ವರದಿಂದ ಗಾನಗೈದುವು. ಪ್ರಕೃತಿ ಸೌಂದರ್ಯದಲ್ಲಿ ಪುರುಷೋತ್ತಮನನ್ನೂ ವನ್ಯ ಪಕ್ಷಿಗಳ ಧ್ವನಿಯಲ್ಲಿ ಅವನ ಧ್ವನಿಯನ್ನೂ ಗುರುತಿಸಿ ಶ್ರೀಆಂಡಾಳ್ ಮತ್ತಷ್ಟು ದುಃಖಿತಳಾದಳು. ' ನನ್ನ ಹೃದಯದಲ್ಲೇ ಶಾಶ್ವತವಾಗಿ ನೆಲೆಸಿರುವ ಶ್ರೀಕೃಷ್ಣ ನನಗೆ ದರ್ಶನವೀಯದೆ, ತನ್ನಂತಿರುವ ಸುಂದರ ವಸ್ತುಗಳನ್ನು ತೋರಿಸಿ ತನ್ನನ್ನು ಕೊಲ್ಲಬೇಕೆಂದು ಸಂಕಲ್ಪಿಸಿದ್ದಾನೋ' ? ಎಂದು ಆಲೋಚಿಸುವಳು. ಕರುಣಾಳುವಾದ ಭಗವಂತನು ಭಕ್ತಪರಾಧೀನನಲ್ಲವೇ ? ಪರಮ ಭಕ್ತರಾದ ಆಳ್ವಾರರ ಭಕ್ತಿಪಾಶ ಬಂಧಿತನಾಗಿರುವುದರಿಂದ ಬರಲು ಸಾಧ್ಯವಿಲ್ಲ ಎಂದು ಸಮಾಧಾನ ಮಾಡಿಕೊಳ್ಳುವಳು. ತಾನಾದರೂ ಅವನಿರುವಲ್ಲಿಗೇ ಹೋಗೋಣವೆಂದರೆ ಅದೂ ಸಾಧ್ಯವಾಗುತ್ತಿಲ್ಲ. ವಿರಹದುಃಖದಿಂದ ಕಡುಬಡವಾಗಿ ಹೋಗಿದ್ದಾಳೆ. ಇದು ಬಗೆಹರಿಯುವುದೆಂತು ? ಅವನನ್ನು ಕಾಣುವವರೆಗೂ ಮನಸ್ಸಿಗೆ ನೆಮ್ಮದಿ ಇಲ್ಲ. ಹೋಗಲಿ ಭಗವದ್ ಸ್ಪರ್ಶವುಳ್ಳ ವಸ್ತುವನ್ನಾದರೂ ನೋಡುತ್ತಾ ಸ್ಪರ್ಶಿಸುತ್ತಾ ದುಃಖವನ್ನು ಮರೆಯಬಹುದು ಎಂದು ಆಲೋಚಿಸುವಳು. ಶ್ರೀಕೃಷ್ಣನ ಪಾಂಚಜನ್ಯವು ತನಗಿಂತ ಅದೃಷ್ಟಶಾಲಿ. ಅದು ಸದಾ ಕೃಷ್ಣನ ಅಧಾರಾಮೃತವನ್ನು ಪಾನಗೈಯುತ್ತಿರುತ್ತದೆ. ಎಂದು ಬಗೆಯುವಳು.

ಕರ್ಪೂರಂ ನಾರುಮೋ
ಕಮಲಿಪ್ಪೂ ನಾರುಮೋ ।

ತಿರುಪವಳ ಶೆಪ್ಪಾಯ್ ತಾನ್
ತಿತ್ತಿತ್ತಿರುಕ್ಕೊ ಮೋ ||

'ಮಾಧವನ ಸಿರಮೊಗದ ಕಂಪು ಕರ್ಪೂರದ ಕಂಪಿನಂತಿರುವುದೋ ? ಕಮಲದ ಹೂವಿನ ಕಂಪಿನಂತಿರುವುದೋ ; ಹೇಳು ಪಾಂಚಜನ್ಯವೇ ?' ಎಂದು ಮೊರೆಯಿಟ್ಟಳು.

ಹೀಗೆ ಶ್ರೀ ಆಂಡಾಳಿನ ಭಕ್ತಿಸಾಧನೆಯು ಹಂತ ಹಂತವಾಗಿ ಬೆಳೆದು ಅವಳ ಆತ್ಮ ಪರಮಾತ್ಮನಲ್ಲಿ ಐಕ್ಯವಾಗುವುದನ್ನು ಕಾಣುತ್ತೇವೆ. ಭಕ್ತಿಸಾಧನೆಯ ಕೊನೆಯ ಹಂತದಲ್ಲಿ ಭಕ್ತರ ಆರಾಧ್ಯ ದೈವವು ಕನಸಿನಲ್ಲಿ ಬೆಳ್ಳಿ ಮೂಡಿದಂತೆ ದರ್ಶನ ವೀಯುವುದು ಸಹಜವೇ. ಅಂತೆಯೇ ಆಂಡಾಳಿಗೂ ಅವಳ ಆರಾಧ್ಯ ದೈವ ಶಂಖ ಚಕ್ರ ಗದಾಧಾರಿಯಾಗಿ ಕಾಣಿಕೊಳ್ಳುತ್ತಾನೆ. ಪುರುಷೋತ್ತಮನು ಕನಸಿನಲ್ಲಿ ಬಂದು ಬಹು ವಿಜೃಂಭಣೆಯಿಂದ ತನ್ನ ಕೈಹಿಡಿದುದನ್ನು ತನ್ನ ಸಖಿಯರಿಗೆ ವರ್ಣಿಸುತ್ತಾಳೆ.

" ಕನಾ ಕಂಡೇನ್ ತೋಳಿ ! ನಾನ್ "
ಕನಸು ಕಂಡೆ, ಸಖಿಯೇ !

ಎಂದು ಪ್ರಾರಂಭಿಸಿ

ವಾರಣಂ ಆಯಿರಂ ಶೂಷವಲಂ ಶೆಯ್ದು
ನಾರಣಂ ನಂಬಿ ನಡಕ್ಕಿನ್ರಾನ್ ಎನ್ರು ಎದಿರ್
ಪೂರಣಂ ಪೊಕ್ಕುಡಂ ವೈತ್ತು ಪುರ ಮೊಗುಂ
ತೋರಣಂ ನಾಟ್ಟ ಕನಾ ಕಂಡೇನ್ ತೋಳೀ ನಾನ್ ||

ಸಾವಿರಾನೆ ಸುತ್ತುವರಿದು ನಾರಾಯಣನು ಊರ ಪ್ರದಕ್ಷಿಣೆ ಬರುವನೆಂದು ಎದುರುಗೊಳಲು ತುಂಬಿದ ಹೊಂಗೊಡಗಳನ್ನಿಟ್ಟು, ತೋರಣಗಂಬಗಳ ನೆಟ್ಟ ಕನಸು ಕಂಡೆನೆ, ಗೆಳತಿ !

ಎಂದು ಗೆಳತಿಗೆ ತಾನು ಕಂಡ ಕನಸನ್ನು ವರ್ಣಿಸುತ್ತಾಳೆ. ದೇವಗಣವೆಲ್ಲವೂ ನೆರೆದಿರಲು ಮಂಗಳವಾದ್ಯಗಳು ಮೊಳಗುತ್ತಿರಲು ಅಗ್ನಿಸಾಕ್ಷಿಯಾಗಿ, ಶಾಸ್ತ್ರರೀತ್ಯಾ ಶ್ರೀರಂಗದ ರಂಗನಾಥನು ತನ್ನ ಕೈಹಿಡಿದನೆಂದು ಗೆಳತಿಗೆ ಆನಂದದಿಂದ ವರ್ಣಿಸುತ್ತಾಳೆ. ಇಲ್ಲಿಗೆ ಆಂಡಾಳಿನ ಜೀವನದ ಹಂಬಲ ಈಡೇರಿದಂತೆಯೆ ಸಾಮಾನ್ಯ ಮಾನವ ಪ್ರೇಮ, ಪ್ರಾರ್ಥನೆ, ಮೊರೆ, ತಪಸ್ಸಿನ ಮೂಲಕ ದೈವೀ ಪ್ರೇಮವಾಗಿ ಮಾರ್ಪಟ್ಟಿರುವುದನ್ನು ಆಂಡಾಳಿನ ಜೀವನದಲ್ಲಿ ಕಾಣುತ್ತೇವೆ. ಎಲ್ಲ ಜೀವಾತ್ಮರೂ ಸತಿಯರು; ಭಗವಂತನೇ

ಪತಿ, ಅಂದರೆ ‘ ಶರಣ ಸತಿ ಲಿಂಗ ಪತಿ ’ ಈ ಮಧುರ ಮೈತ್ರಿ ಭಾವವು ಸುಂದರವಾಗಿ, ಮನೋಹರವಾಗಿ ಆಂಡಾಳಿನ ಜೀವನದಲ್ಲಿ ಮೈವೆತ್ತಿದೆ. ಸ್ತ್ರೀ ಸಹಜವಾದ ಆಸೆ ಆಕಾಂಕ್ಷೆಗಳು ಗೋದೆಯಲ್ಲಿಯೂ ಇದ್ದುವೆಂದೂ ಆದರೆ ಸಾಮಾನ್ಯ ಸ್ತ್ರೀಯಂತೆ ನಶ್ವರವಾದ ತಾತ್ವಿಕಸುಖಕ್ಕೆ ಆಸೆಪಡದೆ ಶಾಶ್ವತವಾದ ಸುಖವನ್ನು ಬಯಸಲಿಲ್ಲವೆಂದೂ ಪರಮಾತ್ಮನನ್ನೇ ತನ್ನ ಪತಿಯಾಗಿ ಸ್ವೀಕರಿಸಿ ತನ್ನ ಹಿರಿಮೆಯನ್ನು ಮೆರೆದಿದ್ದಾಳೆ. ‘ ನ ಸ್ತ್ರೀ ಸ್ವಾತಂತ್ರ ಮರ್ಹತಿ ’ ಎನ್ನುವ ಕಾಲದಲ್ಲೂ ‘ ಮಾನವನಿಗೆ ’ ತನ್ನನ್ನು ಕೊಡುವುದಾದರೆ ಜೀವಂತಳಾಗಿರುದಿಲ್ಲವೆಂದು ಧೈರ್ಯವಾಗಿ ತಂದೆಯೊಡನೆ ಹೇಳುತ್ತಾಳೆ. ಈ ಧೈರ್ಯ, ಧ್ಯೇಯ ಸಾಧನೆಗಾಗಿ ದೇಹ ಅರ್ಪಿಸಲೂ ಸಿದ್ಧವಾಗುವ ಅವಳ ಸಾಹಸಗಳು ಮೆಚ್ಚತಕ್ಕದ್ದೇ. ಶ್ರೀ ಆಂಡಾಳನ ಕೃತಿಗಳಾದ ತಿರುಪ್ಪಾವೈ ಮತ್ತು ನಾಚ್ಚಿಯಾರ್ ತಿರುಮೊಲುಗಳಂತು ತಮಿಳು ಸಾಹಿತ್ಯಾಕಾಶದಲ್ಲಿ ಧ್ರುವತಾರೆಗಳಂತೆ ರಾರಾಜಿಸುತ್ತಿವೆ. ಅವಳ ಜೀವನವೇ ಒಂದು ಅದ್ಭುತರಮ್ಯವಾದ ಕಾವ್ಯ; ಕೃತಿಯೇ ಜೀವನ. ಹೀಗೆ ನುಡಿನಡೆಗಳೊಂದಾಗಿ ಬಾಳಿದ ಆಂಡಾಳ್ ತಮಿಳು ಜನರ ಜೀವನದೊಡನೆ ಬೆರೆತು ಅವರಿಗೆ ಮಾರ್ಗದರ್ಶಕಳಾಗಿದ್ದಾಳೆ.

# ಮಹಾ ಆಚಾರ್ಯ ಮಣವಾಳ ಮಾಮುನಿ

## ಆಚಾರ್ಯ ಅಭಯಂಕರ

ವಿಶ್ವದಲ್ಲಿ ನಮ್ಮ ಕರ್ಣಾಟಕ ಅನೇಕ ಸಾಧು ಸಂತರ ಬೀಡು. ಅನೇಕ ಆಚಾರ್ಯರ ಶ್ರದ್ಧಾಕೇಂದ್ರ. ಇಲ್ಲಿನ ಕಣಕಣದಲ್ಲೂ ನಮ್ಮ ಸಂಸ್ಕೃತಿಯ ಸುಗಂಧ ಬೆರೆತು ನಿಂತಿದೆ. ನೂರಾರು ವರ್ಷಗಳ ಹಿಂದೆ ನಮ್ಮ ಆಚಾರ್ಯರು ಸಾರಿದ ತತ್ವಗಳು ಇನ್ನೂ ಇಲ್ಲಿ ಅಲೆ ಅಲೆಯಾಗಿ ಪ್ರವಹಿಸುತ್ತಿವೆ. ಶ್ರೀ ಭಗವದ್ರಾಮಾನುಜರು ಕರ್ಣಾಟಕ ದಿಂದಲೇ ತಮ್ಮ ಸಿದ್ಧಾಂತ ಪ್ರತಿಪಾದನೆಮಾಡಿ ತಮ್ಮ ಪವಿತ್ರ ಪಾದಧೂಳಿಯನ್ನು ಇಲ್ಲಿ ಬಿಟ್ಟು ಹೋದರು. ನಂತರ ಶ್ರೀ ರಾಮಾನುಜರ ಅಪರಾವತಾರವೂ ಶೇಷಾವ ತಾರವೂ ಎನಿಸಿದ್ದ ಶ್ರೀ ಮಣವಾಳಮಾಮುನಿಗಳ ಪವಿತ್ರ ಪಾದ ಸ್ಪರ್ಶವೂ ಜ್ಞಾನ ಸ್ಪರ್ಶವೂ ನಮ್ಮ ಕರ್ಣಾಟಕಕ್ಕೆ ಆಗಿದೆ. ಅವರು ತಮ್ಮ ಅಮೋಘ ಗಾಂಭೀರ್ಯಪೂರ್ಣ ಸರಳ ಶೈಲಿಯಿಂದ ಇಡೀ ರಾಮಾನುಜ ಸಿದ್ಧಾಂತವನ್ನು ಪುನರುತ್ಥಾನಗೊಳಿಸಿದ ಮಹಾ ಆಚಾರ್ಯರು. ಅವರು ಬೆಳಗಿಸಿದ ಜ್ಞಾನ ಜ್ಯೋತಿ ನಮಗಿಂದು ಜೀವನ ಜ್ಯೋತಿಯಾಗಿದೆ. ಅವರ ಆರುನೂರನೆಯ ಪುಣ್ಯ ತಿರುನಕ್ಷತ್ರದಂದು (3-11-70) ಅವರ ನೆನಪು ಮರುಕಳಿಸಿ ಅವರ ಅನುಗ್ರಹ ಜನತೆಯ ಶಿರಸ್ಸಿನಲ್ಲಿ ಬೀಳಲಿ ಎಂಬುದೇ ನಮ್ಮ ನಿವೇದನೆ.

ಶ್ರೀಮಣವಾಳ ಮಾಮುನಿಗಳು ಒಬ್ಬ ಅಪ್ರತಿಮ ಸಾತ್ವಿಕ ಮೂರ್ತಿ. ಸಾತ್ವಿಕತೆಗೆ ತಕ್ಕಂತೆ ಉನ್ನತ ಶುಭ್ರಶ್ವೇತಮೂರ್ತಿ. ಇವರು ತಮಿಳುನಾಡಿನ ಬಳಿ ಮಧುರೆಯ " ಶಿಕ್ಕಿಲ್‌ಕಿಡಾರಂ " ಎಂಬ ಊರಲ್ಲಿ ಅವತರಿಸಿದರು. ಇವರ ಜೀವಿತ ಕಾಲ ಕ್ರಿ.ಶ. 1370 ರಿಂದ 1444 ; ಆಚಾರ್ಯರಾದ ತಿರುವಾಯುಮೊಳಿಪ್ಪಿಳ್ಳೆ ಶಿಷ್ಯರಾದ ಇವರಿಗೆ ತಾವೇ ಬೆಳೆದ ಪಡವಲಕಾಯಿಪಲ್ಯ ತಿನ್ನಿಸಿ ಬೆಳೆಸಿದರು. ಹೀಗೆ ಗುರುವಿನ ಸಹಜ ಪ್ರೀತಿ ವಿಶ್ವಾಸಗಳಿಂದ ಸಕಲ ವಿದ್ಯಾ ಪಾರಾಂಗತರಾದ ಇವರು ತತ್ವಜ್ಞಾನದ ಹೃದಯಂಗಮ ನಿರೂಪಣೆ ಗಮನವಿರಿಸಿ ವಾದವಿವಾದ–ಸಂಶಯ– ಅತಿವಾದಗಳಿಗೆ ಎಡೆಯಿಲ್ಲದೆ ಇರುವುದಾಗಿ ಗುರುವಿಗೆ ಪ್ರತಿಜ್ಞೆ ಸಲ್ಲಿಸಿ ಅದನ್ನೇ ತಮ್ಮ

ಜೀವನವಲ್ಲಿ ತಂದರು ಮತ್ತು ಪರಸು ಗುರುಗಳಾದ ಪಿಳ್ಳೈಲೋಕಾಚಾರ್ಯರ "ಆಚಾರ್ಯಾಭಿಮಾನ ನಿಷ್ಠೆ" ಎಂಬ ತತ್ವಜ್ಞಾನ ರಹಸ್ಯವನ್ನು ಆಚರಿಸಿ ತೋರಿಸಿದರು. ಅದರ ಪರಿಣಾಮವಾಗಿ ಸರ್ವದಾ ಶ್ರೀರಾಮಾನುಜರನ್ನೇ ಧ್ಯಾನಿಸಿಕೊಂಡಿದ್ದು ಗುರು ಮಹಿಮೆಯನ್ನು ಜಗತ್ತಿಗೆ ಸಾರಿದರು.

ಭಗವದ್ರಾಮಾನುಜ ಸಿದ್ಧಾಂತ ಗುರುಪರಂಪರೆಯಲ್ಲಿ ಇವರು ಮುಖ್ಯರಾಗಿ ಶ್ರೀ ರಾಮಾನುಜರ ಅಪರಾವತಾರ ಎನಿಸಿದರು. ಕವಿತಾರ್ಕಿಕಸಿಂಹರಾದ ವೇದಾಂತಾ ಚಾರ್ಯರ ನಂತರ ವಿಶದವಾಕಶಿಖಾಮಣಿ, ಉಭಯ ವೇದಾಂತಾಚಾರ್ಯರೆನಿಸಿ ದಿವ್ಯ ಕ್ಷೇತ್ರಗಳ ಜೀರ್ಣೋದ್ಧಾರ ಮತ್ತು ಮುಖ್ಯವಾಗಿ ತಮಿಳು ವೇದಗಳ ಪ್ರವಚನ ಪ್ರಚಾರಗಳನ್ನು ಕೈಗೊಂಡರು ಮತ್ತು ಮೈಸೂರು ದೇಶದ ಮೇಲುಕೋಟೆಯ ಶ್ರೀ ಸಾನುದಾಸರೆಂಬ ಜನನ್ಯಾಚಾರ್ಯರಿಂದ ಅಪೂರ್ವವಾದ ಜ್ಞಾನರಹಸ್ಯವನ್ನು ಪಡೆದು ಆಚಾರ್ಯ ಹೃದಯ ಎಂಬ ದ್ರಾವಿಡ ಬ್ರಹ್ಮಸೂತ್ರಕ್ಕೆ ಭಾಷ್ಯಬರೆದರು. ತಿರುವಾಯ್ಮೊಳಿ ಗ್ರಂಥದ ಪ್ರಾಚೀನ ಪಂಚ ವ್ಯಾಖ್ಯಾನಗಳನ್ನೂ ಸಮನ್ವಯಿಸಿ ಶ್ರೀರಂಗನಾಥ ದೇವರ ಗೋಷ್ಠಿಯಲ್ಲಿ ಸರಳ ಸುಂದರ ಗಂಭೀರ ಶೈಲಿಯಿಂದ ಕಾಲಕ್ಷೇಪ ನಡೆಸಿದರು. ಆಗ ಶ್ರೀರಂಗನಾಥನು ಬಾಲಕನೊಬ್ಬನಲ್ಲಿ ಆವೇಶಿಸಿ ಆಚಾರ್ಯರ ತನಿಯನ್ ಪದ್ಯವನ್ನು ಹೇಳಿಸಿ ಅದನ್ನು ಸಕಲದಿವ್ಯ ಪ್ರಬಂಧಗಳ ಮೊದಲು ಪಠಿಸಬೇಕೆಂದು ಆಜ್ಞಾಪಿಸಿದುದು ಇವರ ಜೀವನದ ಮುಖ್ಯ ಘಟನೆ. ಆ ಪದ್ಯ ಹೀಗಿದೆ:—

ಶ್ರೀ ಶೈಲೇಶದಯಾಪಾತ್ರಂ ಧೀಭಕ್ತ್ಯಾದಿಗುಣಾರ್ಣವಂ

ಯತೀಂದ್ರಪ್ರವಣಂ ವಂದೇ ರಮ್ಯಜಾಮಾತರಂ ಮುನಿಂ

ಅಹೋಬಲಮಠದ ಮೂಲ ಪುರುಷರಾಗಿ ನಮ್ಮಾಳ್ವಾರವರ ಅವತಾರವೆನಿಸಿದ್ದ ಮೇಲುಕೋಟೆಯ ಆದಿವಣಶಠಕೋಪಸ್ವಾಮಿಗಳು ಇವರ ಸಹಾಧ್ಯಾಯಿ ಮಿತ್ರರು. ವಾನಮಾಮಲೆಜೀಯರ್, ತಿರುಪತಿ ಜೀಯರ್, ಎರುಂಬಿಅಪ್ಪಾ, ಕೋಯಿಲಣ್ಣನ್, ಪ್ರತಿವಾದಿಭಯಂಕರಂ ಅಣ್ಣನ್, ತಿರುನಾರಾಯಣಪುರಂ ತೋಳಪ್ಪರ್ ಮುಂತಾದವರು ಇವರ ಶಿಷ್ಯರು.

ಶ್ರೀ ರಾಮಾಯಣಭಾರತಗಳಿಗೆ ಇವರು ಅತಿ ಸರಳ ಸಂಸ್ಕೃತ ವ್ಯಾಖ್ಯಾನ ರಚಿಸಿದ್ದಾರೆ. ಇದಿನ್ನೂ ಮುದ್ರಣ ಕಂಡಿಲ್ಲ. ವಿವಿಧ ಗ್ರಂಥಗಳಲ್ಲಿ ಉದ್ಧರಿಸಿರುವ ಪ್ರಮಾಣ ವಚನಗಳಿಗೆ ಆಕರಗಳನ್ನು ತಿಳಿಸಿ ವಿವರಿಸಿ ಇವರು ಮಾಡಿರುವ ನವೀನ ರೀತಿಯ ಸಾಹಿತ್ಯ ಸೇವೆ ಇವರ ಪ್ರಮಾಣ ಸಂಗ್ರಹ ಗ್ರಂಥಗಳಿಂದ ತಿಳಿಯುತ್ತದೆ ಇವರ ಗೀತಾ ತಾತ್ಪರ್ಯ ದೀಪ, ಶ್ರೀ ಭಾಷ್ಯಾರ್ಥರತ್ನಟೀಕಾ, ಶ್ರೀ ವಚನ ಭೂಷಣತತ್ವ ತ್ರಯ–ಮುಮುಕ್ಷುಪ್ಪಡಿ ವ್ಯಾಖ್ಯಾನಗಳು ಶ್ರೀರಾಮಾನುಜ ಸಿದ್ಧಾಂತಕ್ಕೆ ಪ್ರಮಾಣ

ಗ್ರಂಥಗಳಾಗಿವೆ. ಉಪದೇಶ ರತ್ನಮಾಲೆಯು ಪ್ರಾಚೀನ ಗುರುಪರಂಪರೆಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ತಿರುವಾಯ್‌ಮೊಳಿನೂತ್ತಂದಾದಿಯು ತಿರುವಾಯ್‌ಮೊಳಿಯ ಕೈಗನ್ನಡಿಯಂತಿದೆ. ಅರ್ತಿಪ್ರಬಂಧವೂ ಯತಿರಾಜವಿಂಶತಿಯೂ ಇವರ ಹೃದಯದ ಸೌಂದರ್ಯ ಗಾಂಭೀರ್ಯಗಳನ್ನು ಎತ್ತಿ ತೋರಿಸುತ್ತವೆ. ಇದಲ್ಲದೆ ಇವರ ಗೋದಾಚತುಶ್ಶ್ಲೋಕೀ, ರಾಜಭೋಪಾಲಸ್ತವ, ಶ್ರೀಸ್ತವ, ಶ್ರೀಭಾಷ್ಯಕಾರಮಂಗಳ, ದಿವ್ಯದೇಶಮಂಗಳಾಷ್ಟಕ ಮುಂತಾದವೂ ಉಪಯುಕ್ತವಾಗಿವೆ.

ಅಖಿಲಜನ ಮೈತ್ರಿ ಇವರ ಪ್ರಧಾನ ಗುಣ. ಒಂದು ಸಲ ಇವರ ಕುಟೀರಕ್ಕೆ ಕೆಲವರ ಪ್ರೇರಣೆಯಿಂದ ಯಾವನೋ ದುಷ್ಟ ಬೆಂಕಿ ಹಚ್ಚಿದ. ಜೀವನಜ್ಞಾನದಿಂದ ತಪ್ಪಿಸಿಕೊಂಡು ಹೊರಬಂದ ಇವರು ಅಲ್ಲೇ ದೀವಿಗೆ ಹಿಡಿದು ನಿಂತಿದ್ದ ಅವನನ್ನು ಆಲಂಗಿಸಿ "ಅಯ್ಯ, ದೇವರಂತೆ ಬಂದು ನೀನು ನನ್ನ ಕುಟೀರ ಬಂಧನವನ್ನು ಬಿಡಿಸಿದೆ. ಇದಕ್ಕೆ ಪ್ರತ್ಯುಪಕಾರ ನಾನೇನು ಮಾಡಲಿ....ಎಂದರಂತೆ. ಅದರ ಫಲವಾಗಿ ಅವನೂ ಅವನ ಪ್ರೇರಕರೂ ಅವರ ಆ ಸ್ಪರ್ಶ ಮತ್ತು ವಾಣಿಯಿಂದ ಎಚ್ಚೆತ್ತು ಇವರಿಗೆ ನಮಸ್ಕರಿಸಿ ಶಿಷ್ಯರಾದರು.

ಸಜ್ಜನ ಸಮಾಜಕ್ಕೆ ಪ್ರತಿ ವ್ಯಕ್ತಿಯೂ ಅನುಕೂಲನಾಗಿರಬೇಕೆಂಬುದೇ ಇವರ ಮುಖ್ಯ ಉಪದೇಶ. ಉತ್ತರ ದೇಶದ ಶಿಷ್ಯನೊಬ್ಬ ತತ್ತ್ವವನ್ನೂ ಆಚರಣೆಯನ್ನೂ ಪ್ರಶ್ನಿಸಿ ಇವರಿಗೆ ಪತ್ರ ಬರೆದಿದ್ದ. ಅದಕ್ಕೆ ಇವರ ಉತ್ತರ :—

ವಿಷ್ಣುಭಕ್ತಾ ಗೃಹೇಯಸ್ಯ ಸ್ವತಂತ್ರಾಸ್ಸಂತಿ ಸರ್ವಥಾ ।
ಸ ಏವ ವೈಷ್ಣವಃ ಶ್ರೀಮಾನ್ ಮತಮೇತನ್ಮಹಾತ್ಮನಾಂ ॥

ಅಂದರೆ :—ವೈಷ್ಣವ ಎನಿಸಬೇಕಾದರೆ ಅವನ ಮನೆಯಲ್ಲಿ ಸಜ್ಜನ ಸಮಾಜಕ್ಕೆ ಸಕಲವಿಧ ಸ್ವಾತಂತ್ರ್ಯವೂ ಇರಬೇಕು. ಇದೇ ಮಹಾತ್ಮರ ಅಂತರಂಗ ಎಂದು. ಇದನ್ನು ಆಚರಿಸಿದ ಆ ಶಿಷ್ಯನಿಗೆ ಸಜ್ಜನ ಸಂಗದಿಂದ ತತ್ತ್ವ ಸದಾಚಾರಗಳ ಅರಿವಾಗಿ ಅವನು ಮುಂದೆ ಶ್ರೇಷ್ಠ ಸಜ್ಜನನಾದ. ಮತ್ತು ರಾಮಾನಂದ ಸಂಪ್ರದಾಯವನ್ನು ಮುನ್ನಡೆಸಿದ. ಹೀಗೆ ಶ್ರೀ ರಾಮಾನುಜ ಸಿದ್ಧಾಂತದಲ್ಲಿ ವ್ಯಕ್ತಿನಿಷ್ಠೆಗಿಂತ ಸಮಾಜ ನಿಷ್ಠೆ (ಗೋಷ್ಠೀಪ್ರಧಾನತೆ)ಯೇ ಮುಖ್ಯವೆಂದು ಸಾರಿತೋರಿದ್ದು ಇವರ ವಿಶೇಷಕಾರ್ಯ. ಇವರು ತಮ್ಮ ಶಿಷ್ಯನಾದ ಮಧುರೆಯ ಪಾಳೆಗಾರ ವಿಜಯನಗರದ ರಾಜನಿಗೆ ಎದಿರು ಬಿದ್ದಾಗ "ರಾಜ್ಯಗಳು ಕೇಂದ್ರದ ಅಧೀನದಲ್ಲಿರುವುದೇ ಸಮಗ್ರ ರಾಷ್ಟ್ರಕ್ಕೆ ಹಿತ" ಎಂದು ತಿಳಿಸಿ ಸರಿಪಡಿಸಿದ್ದು ಇವರ ರಾಷ್ಟ್ರೈಕ್ಯ ದೃಷ್ಟಿಗೆ ಪ್ರತೀಕವಾಗಿದೆ.

ಇವರ ಸರಳ ಸುಂದರ ಮಣಿಪ್ರವಾಳ ಭಾಷಾಶೈಲಿ, ಜನಹೃದಯವನ್ನು ಶುಚಿಗೊಳಿಸುವಂತಹ ಆತ್ಮಯೋಗ ಮತ್ತು ಸದ್ಗುಣಗಳು ಮಹರ್ಷಿ ಪತಂಜಲಿಯನ್ನು

ನೆನಪಿಗೆ ತರುವುವು. ಪಾಣಿನಿಯ ಶಬ್ದ ಸೂತ್ರಗಳಿಗೆ ಭಾಷ್ಯ ಬರೆದವರು ಪತಂಜಲಿ. ವ್ಯಾಸರ ಬ್ರಹ್ಮಸೂತ್ರಗಳಿಗೆ ಭಾಷ್ಯ ಬರೆದವರು ಶ್ರೀ ರಾಮಾನುಜರು. ಲೋಕಾಚಾರ್ಯರ ರಹಸ್ಯ ಸೂತ್ರಗಳಿಗೆ ಭಾಷ್ಯ ಬರೆದವರು ಮಣವಾಳಮಾಮುನಿಗಳು. ಈ ಮೂವರೂ ಆದಿಶೇಷಾವತಾರವೆಂದು ಜನರ ನಂಬಿಕೆ–ಅದರಂತೆ ಇವರ ದರ್ಶನ–ಸ್ಪರ್ಶನ–ಚಿಂತನ–ಪ್ರವಚನ–ಶ್ರವಣಗಳಿಂದ ಜನರು ವ್ಯಾಧಿ ದುರ್ಭಿಕ್ಷ, ದೌರ್ಭಾಗ್ಯಗಳನ್ನು ಕಳೆದು ಸ್ವಾಸ್ಥ್ಯ ಸುಭಿಕ್ಷ, ಸೌಭಾಗ್ಯಗಳನ್ನು ಪಡೆದು ಉಜ್ಜೀವಿಸಿದರು. ಮತ್ತು ನೆಳಲು ನೀಡಿದ ಉಪಕಾರಕ್ಕಾಗಿ ಹುಣಸೆ ಮರವೊಂದಕ್ಕೆ ಮೋಕ್ಷ ಸಾಮ್ರಾಜ್ಯವನ್ನು ಕರುಣಿಸಿ ಅದರ ಗುರುತಾಗಿ ಅದು ಮಾರನೇ ದಿನವೇ ಸಂಪೂರ್ಣ ಒಣಗಿಹೋದುದು ಇವರ ಜೀವನದ ಮಹಾಶ್ಚರ್ಯ.

ಇವರ ಶಿಷ್ಯ ಪರಂಪರೆಯು ಅಹಂಕಾರ ಮದಗಳಿಲ್ಲದೆ ಸಾರವಾದ ಸಾಧನ ಸಿದ್ಧಿಗಳಿಂದ ಅಖಿಲ ಜನಮೈತ್ರಿಯಿಂದ ಬೆಳಗಿದುದೇ ಇವರ ಹಿರಿಮೆ. ಪೇಲ್ನಾಡಿನ ತಿರುಮಲೆನಲ್ಲಾನ್ ಚಕ್ರವರ್ತಿಗಳು ಇವರ ಪಾದಸ್ಪರ್ಶದಿಂದ ಪರಮೈಕಾಂತಿಗಳಿಸಿದರು. ಇವರು ಬೆನ್ನುಫಣಿಯಿಂದ ಶ್ರೀರಂಗದಲ್ಲಿ ಪರಮಪದಿಸಿದಾಗ ಇವರ ದಿವ್ಯ ಮಂಗಳ ವಿಗ್ರಹ ಮೂರಲ್ಲೊಂದನ್ನು ಕೈಂಕರ್ಯಂತಿರುಮಲಯ್ಯಂಗಾರ್ಯರು ಮೇಲುಕೋಟೆಗೆ ಉತ್ಸವಮೂರ್ತಿಯಾಗಿ ಬಿಜ ಮಾಡಿಸಿದರು. ಆದಿವಣ ಶಠಕೋಪ ಸ್ವಾಮಿಗಳ ಆಜ್ಞೆಯಂತೆ ನಾಗಮಂಗಲದ ತಿಮ್ಮಣ್ಣದಣ್ಣಾಯಕರು ವೈದಿಕ ಸಾರ್ವಭೌಮರಾದ ತೋಳಪ್ಪರ ಮೂಲಕ ಮೇಲುಕೋಟೆಯ ತಮ್ಮ ರಾಮಾನುಜಕೂಟದಲ್ಲಿ ಇವರ ಮೂಲವಿಗ್ರಹ ಪ್ರತಿಷ್ಠೆ ಮಾಡಿಸಿದರು. ಇಂತಹ ಈ ಮಹಾತ್ಮರ ದಿವ್ಯ ವಿಗ್ರಹಗಳು ಶ್ರೀವೈಷ್ಣವರ ಪ್ರತಿ ಮುಖ್ಯ ದೇವಾಲಯಗಳಲ್ಲೂ ಪೂಜೆಗೊಳ್ಳುತ್ತಿವೆ. ಇವರ ಬಗ್ಗೆ ಈವರೆಗೆ ಸಂಸ್ಕೃತ–ತಮಿಳ್–ಹಿಂದೀ–ಕನ್ನಡ–ತೆಲುಗು–ಇಂಗ್ಲಿಷ್ ಭಾಷೆಗಳಲ್ಲಿ ಮಹಾಕಾವ್ಯಗಳೂ ಚಂಪೂ ನಾಟಕಗಳೂ–ಸ್ತೋತ್ರ ಗದ್ಯಗಳೂ ಸಂಗೀತ ಪ್ರಬಂಧಗಳೂ ಸುಮಾರು ನೂರಕ್ಕೂ ಹೆಚ್ಚಿವೆ. ಅವುಗಳಲ್ಲಿ ವರವರ ಮುನಿಚರಿತಂ, ಯತೀಂದ್ರಪ್ರವಣಪ್ರಭಾವ, ಭದ್ರದೀಪಚಂಪು, ವರವರಮುನಿಶತಕಂ, ದಿನಚರ್ಯಾ, ಪ್ರಪನ್ನಾಮೃತಂ ಮುಂತಾದವು ಆಧಾರಗ್ರಂಥಗಳು. ಜೀಯರ್ ಎಂದು ಪ್ರಸಿದ್ಧರಾದ ಇವರ ಆರನೆಯ ಶತಮಾನೋತ್ಸವವು ಭಾರತದ ಎಲ್ಲೆಡೆ ನಡೆಯುತ್ತಿರುವುದು ಸಂತೋಷದ ಸಂಗತಿ.

# ಆಹಾರ ಶುದ್ಧಿ

## ಅಯ್ಯರ್

ಆಚಾರ್ಯರ ಅಡಿದಾವರೆಗಳನ್ನು ಪಡೆದ ಪರಮ ಸಾತ್ವಿಕಜೀವಿ ಮಾನ್ಯ ಯಾಮುನಾಚಾರ್ಯರನ್ನು ನಾನು ನೋಡಿದ್ದು ಎಣಿಸಿದಂತೆ ಕೆಲವೇ ಬಾರಿ. ಆದರೂ ನನ್ನ ಜೀವನದ ಯಾತ್ರೆಯ ಅಂತರ್‌ಘಾಟಿಗೆ ಅವರ ಒಪ್ಪಿಗೆ ಹಾಗೂ ಆಶೀರ್ವಾದ ದೊರೆತುದರಿಂದ ನನಗೆ ಯಾವಾಗಲೂ ಅವರು ಬಲು ಸನಿಯ.

ಅವರೊಮ್ಮೆ ಮೇಲುಕೋಟೆ ಕಲ್ಯಾಣಿ ಸರಸ್ಸಿನ ಬಳಿ ನನ್ನನ್ನು ಕುರಿತು 'ನಿಮ್ಮಂತವರಿಗೆ ಊಟಕೊಡುವುದೇನೂ ಕಷ್ಟವಿಲ್ಲ. ಬನ್ನಿ-ಮನೆಗೆ.–ಮೈಸೂರಿಗೆ ನಿಮ್ಮ ರಾಗಿರೊಟ್ಟಿಯನ್ನೇ ಮಾಡಿಸಿಕೊಡುತ್ತೇನೆ' ಎಂದು ಪ್ರೇಮದಿಂದ ಬೆನ್ನು ತಡವಿ ನನ್ನ ಕಾರ್ಯ ಚಟುವಟಿಕೆಯ ಬಗ್ಗೆ ಕೇಳಿದರು.

೧೯೬೪ರ ಪಶ್ಚಿಮ ವಾಹಿನಿ ಸರ್ವೋದಯ ಮೇಳದಲ್ಲಿ ಅವರು ನೀಡಿದ ಪ್ರವಚನ.

ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂತ್ಯಜೇತ್
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್

ಈ ಶ್ಲೋಕದ ಬಗ್ಗೆ ಇದ್ದು, ಮಾನವ ಕ್ರಮಕ್ರಮವಾಗಿ ಏರಿ ಮುಕ್ತನಾಗ ಬೇಕಾಗಿರುವ ಹಂತಗಳನ್ನು ಹೃದಯಂಗಮವಾಗಿ ವರ್ಣಿಸಿದ್ದು ನನ್ನ ಜೀವನದಲ್ಲಿ ಅಚ್ಚಳಿಯದೆ ನಿಂತಿದೆ. ಮಾನಸಿಕವಾಗಿ ಅವರು ರಾಷ್ಟ್ರವನ್ನು ಮೀರಿ ಜಗತ್ತಿನ ನಾಗರಿಕ ರಾಗಿದ್ದು ಕೊಟ್ಟ ಕೊನೆಯ 'ಆತ್ಮ' ಪ್ರಾಪ್ತಿಗಾಗಿ–ನಿತ್ಯಕೈಂಕರ್ಯಕ್ಕಾಗಿ ಈ ಪೃಥ್ವಿ ಯನ್ನೇ ತ್ಯಜಿಸಿದರೆಂದು ಕಾಣುತ್ತದೆ.

ಇಂಥ ಮಹನೀಯರ ಸ್ಮೃತಿ ನಾವು ಮಾಡುವುದಕ್ಕಿಂತಲೂ ಅಂಥ ಆಚಾರ್ಯರ ಸದಭಿಮಾನಕ್ಕೆ ನಾವು ಪಾತ್ರರಾಗಿರುವುದೇ ಒಂದು ವಿಶೇಷ ಸಂಗತಿ. ದೇಹ

ಧಾರಿಯಾಗಿದ್ದು ಮಾನವ ನಿರ್ದಿಷ್ಟ ಕಾರ್ಯಗಳನ್ನು ಮಾತ್ರ ಮಾಡಬಲ್ಲ. ದೇಹ ನಿಗಮವಾಯಿತೆಂದರೆ ಆತನ ಕೆಲಸ ಅನಂತವಾಗಿ ವಿಪುಲವಾಗಿ ಅನುಭವಾಗುವುದು. ಯಾಮುನಾಚಾರ್ಯರ ಮೆಚ್ಚಿಗೆಗೆ ಪಾತ್ರವಾದ ಅನೇಕ ಚಿನ್ನ ಜೀವನದ ವಿಚಾರದಲ್ಲಿ ಒಂದನ್ನು ಈ ಪವಿತ್ರ ಸಂದರ್ಭಕ್ಕೆ ಎತ್ತಿಕೊಳ್ಳುತ್ತೇನೆ.

—ಅಯ್ಯರ್

## ಆಹಾರ ಶುದ್ಧಿ

ತಪಸ್ಸಿನಿಂದ ದೇಹಶುದ್ಧಿಯೂ ತನ್ಮೂಲಕ ಮನಶುದ್ಧಿಯೂ, ಬಳಿಕ ನಾನಾರೆಂಬ ಆತ್ಮಜ್ಞಾನವೂ ಪ್ರಾಪ್ತವಾಗುವುದು. ಈಗಿರುವ ಅಶುದ್ಧ ದೇಹದೊಡನೆಯೇ ನಾವೆಲ್ಲ ಸದ್‌ಗ್ರಂಥಗಳನ್ನು ಜೀರ್ಣಿಸಿಕೊಂಡು ಬಿಡುತ್ತೇವೆ ಎಂದರೆ ಆಗದ ಮಾತು. ವಾಕ್ಯ ಜನ್ಯ ವಾಕ್ಯಾರ್ಥಜ್ಞಾನ ಬರಬಹುದು. ಆದರೆ ರಾಮಾನುಜರು ಹೇಳುವಂತಹ 'ಪ್ರತ್ಯಕ್ಷ ಸಮಾನಾಕಾರ್ರ ಪ್ರೀತಿ ರೂಪಾಪನ್ನವಾದ ಜ್ಞಾನ ವಿಶೇಷವೆನಿಸುವ ಭಕ್ತಿ' ಬಾರದು. ಅದರ ಸಂಪಾದನೆಯೇ ನಮಗೀಗ ಅಭಿಪ್ರೇತ. ಅಂತೆಯೇ ಮಾನವನ ಯಾವೊಂದು ಕೆಲಸಕ್ಕೂ ಆಹಾರ ಶುದ್ಧಿ ಅಗತ್ಯ.

ನಿಜವಾದ ಅರ್ಥದಲ್ಲಿ ನೋಡಿದರೆ ಯುಕ್ತವಾದ ಕಾಯಶೋಷಣೆಯಿಂದಲೇ ಕಾಯಪೋಷಣೆಯಾಗುವುದು. ಈ ಶಾಸ್ತ್ರೀಯ ಕಾಯ ಶೋಷಣೆಯನ್ನೇ 'ತಪಸ್' ಎನ್ನುವುದು. ಸಾಮಾನ್ಯವಾಗಿ ಜನ ತಿಳಿಯದೆ, ದೇಹ ಪೋಷಣೆ ಮಾಡಿಕೊಳ್ಳ ಬೇಕೆನ್ನುವ ಉದ್ದೇಶವಿದ್ದರೂ ಭ್ರಾಂತಿಯಿಂದ ದೇಹ ಶೋಷಣೆಯನ್ನೇ ಇಂದು ಬೇಗ ಬೇಗ ಮಾಡಿಕೊಳ್ಳುತ್ತಿದಾರೆ. ಇದು ಆಳವಾದ ಅಭುಭವದ ಮಾತು.

'ಆಹಾರದಿಂದಲೇ ಶರೀರ ನಿಂತಿದೆ' ಎನ್ನುವ ಸಿದ್ಧಾನ್ತವೆ ಸರಿಯಾದುದಲ್ಲ. ಶರೀರ ನಿಂತಿರುವುದು ಶರೀರಿಯಾದ ಆತ್ಮನಿಂದ. ಆ ಆತ್ಮ ನಿಂತಿರುವುದೂ ಅದಕ್ಕೂ ಆತ್ಮನಾದ ಪರಮಾತ್ಮನಿಂದ. ಈ ದೊಡ್ಡ ಮಾತೆಲ್ಲಾ ಸರಿಯಾಗಿ ಅರ್ಥವಾಗಬೇಕಾದರೆ ತಪ್ಪಸ್ಸಿಲ್ಲದೆ ಆಗದು. ಶ್ರುತಿಗಳಲ್ಲಿ ಶಾಸ್ತ್ರಗಳಲ್ಲಿ ಒಂದೊಂದು ಮಾತು ಹೇಳಿ ಬಿಡುತ್ತಾರೆ. ಅದು ಅರ್ಥವಾಗಬೇಕಾದರೆ ನಮ್ಮ ಶರೀರವನ್ನು ಈಗಿನ ಹಾಗೆ 'ಮಲ ಕೂಪ'ವಾಗಿರಿಸಿಕೊಂಡಿದ್ದರೆ ಸಾಗದು. ಅನ್ನಮಯ ಕೋಶ ಶುದ್ಧವಾದರೆ ಪ್ರಾಣ ಕೋಶದ ಶುದ್ಧಿ. ಉಸಿರಾಟವೆಂಬುದು ಪ್ರಾಣಶಕ್ತಿಯ ಏಕದೇಶ ಮಾತ್ರ. ಆ ನಿರ್ಭಾವ ಮಾತ್ರ ಅದಕ್ಕೂ ಮೂಲವಾದ ಶಕ್ತಿಯೆಲ್ಲದರ ಸಂಕಲನವೇ ಪ್ರಾಣಶಕ್ತಿ. ಅದು ಹತೋಟಿಗೆ ಬಾರದೆ ಚಿತ್ತ ವಶವಾಗದು. ಚಿತ್ತ ದಕ್ಕಿದಾಗಲೇ ಜೀವಾತ್ಮ ದರ್ಶನ. ಆಮೇಲೆ ದೇವರ ಮಾತು.

**ರೋಗ ಎಂದರೇನು ?**

ಶರೀರವನ್ನು 'ನಿರಾಮಯ' ವಾಗಿಸಿಕೊಳ್ಳುವುದೇ ಆರೋಗ್ಯದ ಗುಟ್ಟು. 'ಆರೋಗ್ಯ' 'ನಿರಾಮಯ' ಈ ಶಬ್ದಗಳಲ್ಲೇ ಸೂಕ್ಷ್ಮಾರ್ಥ ತುಂಬಿದೆ. 'ಆಮ್ಲ' ಎಂದರೆ, ಯಾವುದು ನಾವು ತಿಂದುದರಲ್ಲಿ ಪಕ್ವವಾಗದೆ ಅಪಕ್ವಾವಸ್ಥೆಯಲ್ಲೇ ಇರುತ್ತದೋ ಅದು, ಅಜೀರ್ಣಾಂಶ. Mucus ಶ್ಲೇಷ್ಮ ಹೊಟ್ಟೆಯಲ್ಲೂ ಚಿಕ್ಕ ಹಾಗೂ ದೊಡ್ಡ ಕರುಳು ಗಳಲ್ಲೂ ತುಂಬಿಕೊಂಡಿರುತ್ತದೆ. ಅಂಥ ಆಮ್ಲ ಅಲ್ಲಲ್ಲೇ ಕೊಳೆತು ಊರ್ಧ್ವವಧೋ ಮುಖವಾಗಿ ನಾರುತ್ತಿರುತ್ತದೆ. ಆ ಗ್ಯಾಸ್ ಶರೀರದ ಆಯಾಯಾ ದುರ್ಬಲ ಸ್ಥಾನ ಗಳಲ್ಲಿ ಪ್ರತಿಕ್ರಿಯೆ ಹುಟ್ಟಿಸುವುದು. ಆಗ ನಮಗೆ ತಲೆನೋವು, ಎದೆನೋವು, ಸೊಂಟ ನೋವು, ಹೊಟ್ಟೇನೋವು, ಕಿವಿಯಲ್ಲಿ ಕೀವು ಮುಂತಾದ ಬಾಹ್ಯಲಕ್ಷಣಗಳು ಕಾಣಿಸಿ ಕೊಳ್ಳುತ್ತವೆ. ಅವನ್ನೇ 'ರೋಗ' ಎನ್ನುತ್ತೇವೆ. ನಾವು ಆಹಾರವನ್ನು ಮೇಲೆಮೇಲೆ ತೆಗೆದುಕೊಳ್ಳುತ್ತಲೇ ಇದ್ದರೆ ಈ ಹಳೆಯ ಕೊಳಚೆಯೊಡನೆ ಹೊಸ ಆಹಾರವೂ ಸೇರಿ, ತೊಳೆಯದ ಮಜ್ಜಿಗೆಪಾತ್ರೆಯಲ್ಲಿ ಒಳ್ಳೆಯ ಹೊಸ ಹಾಲು ಹಾಕಿದರೆ ಹೇಗೆ ಹುಳಿಯಾಗಿ ಕೆಟ್ಟುಹೋಗುವುದೋ ಅಂಥ ಪರಿಸ್ಥಿತಿಯೇ ನಮ್ಮೆಲ್ಲರಲ್ಲಾ ಪ್ರಾಯಶಃ ಈಗಿರುವುದು. ಈ ಆಮ್ಲವನ್ನೇ Corbonic ಆಸಿಡ್ ಎನ್ನುತ್ತಾರೆ. ಎಲ್ಲ ಖಾಯಿಲೆಗಳಿಗೂ ತಿಂದ ಪದಾರ್ಥ ಹುಳಿರೂಪತಾಳುವುದೇ ಕಾರಣ ಆಗಿದೆ.

**ಉಪವಾಸ ವಿಜ್ಞಾನ :**

ಈ ಹುಳಿ ಆಗದಂತೆ ಆಮ್ಲಕಟ್ಟದೆ ಇರುವ ಆಹಾರಗಳನ್ನೇ ನಾವು ತೆಗೆದು ಕೊಳ್ಳಬೇಕೆಂದಾಯಿತು. ಆದು ಸುಮ್ಮನೆ ಇದ್ದಕ್ಕಿದ್ದಂತೆ ಒಂದೆರಡು ದಿನಗಳಲ್ಲೇ 'ನಾನು ಆಹಾರ ಪರಿವರ್ತನೆ ಮಾಡಿಕೊಂಡು ಬಿಡುತ್ತೇನೆ; ಫಲ ಸೇವಿಸುತ್ತೇನೆ' ಎಂದರೂ ಸಾಧ್ಯವಿಲ್ಲ. ಮೊದಲು ಘಟಶೋಧನೆಯಾಗಬೇಕು. ಪಾತ್ರಶೋಧನೆ ಯಾದಮೇಲೆಯೇ ನಾವು ಈ ದೇಹಕ್ಕೆ ಶುದ್ಧಾಹಾರ ಹಾಕಬೇಕು. ಈಗಿನ ಅಲೋಪಥಿಕ್ ವೈದ್ಯಪದ್ಧತಿ ನಮಗೆಲ್ಲಾ ಒಂದು ಭ್ರಮೆ ಹುಟ್ಟಿಸಿದೆ. 'ಪೌಷ್ಟಿಕವಾದ ಆಹಾರದಿಂದಲೇ ಆರೋಗ್ಯ' ಎನ್ನುವುದೇ ಆ ಭ್ರಾಂತಿ! ಇರುವ ಕಶ್ಮಲವನ್ನು ತೊಳೆದು ಆಮೇಲೆ ಆಹಾರ ಕೊಡಿ ಎನ್ನುತ್ತದೆ ಆಯುರ್ವೇದ: ಲಂಘನಂ ಪರಮೌಷಧಂ. ಶರೀರದ ನಿರ್ಮಲೀಕರಣಕ್ರಿಯೆಯೇ 'ಉಪವಾಸ' ಎನ್ನುವುದು

ಈ ಉಪವಾಸ ಬರೀ ಹಠಯೋಗ ರೂಪವಾಗಿರಬಾರದು, ಯುಕ್ತವಾಗಿರಬೇಕು, ಅವರವರ ಯಥಾಶಕ್ತಿ ಇರಬೇಕು; ಜ್ಞಾನಪೂರ್ವಕವಾಗಿರಬೇಕು. ಅಂದರೆ ಪ್ರತಿ ವ್ಯಕ್ತಿಯೂ ತನ್ನ ಈಗಿನ ಪ್ರಾಣ ಹಾಗೂ ಇಂದ್ರಿಯ ಶಕ್ತಿಗಳನ್ನು ತಾನು ಹಿಂದೆ ಮಾಡಿರುವ ಅಯುಕ್ತಾಹಾರ ಮತ್ತು ಔಷಧಿಗಳ ಸೇವನೆ ಇವನ್ನೆಲ್ಲಾ ಅನುಲಕ್ಷಿಸಿಯೇ 'ಸುಖೋಪವಾಸ' ಮಾಡುವುದರಿಂದಲೇ ಆರಂಭಿಸಬೇಕು.

ಮಲಕೋಶ, ದೊಡ್ಡ ಕರುಳುಗಳನ್ನು 'ವಸ್ತಿ ಕ್ರಿಯೆ' [ಎನೀಮಾ]ಯಿಂದ ಶುದ್ಧಿ ಪಡಿಸಿಕೊಳ್ಳುತ್ತಾ ಆಮಜನಕವಲ್ಲದ ಸೊಪ್ಪು ತರಕಾರಿಗಳನ್ನೇ ತೆಗೆದುಕೊಳ್ಳುತ್ತಾ ಬರ ಬೇಕು. ಧಾನ್ಯಗಳಲ್ಲಿ ಯಾವುದರಲ್ಲಿ ಆಮವೇ ಇಲ್ಲವೋ ಅಥವಾ ಕಡಿಮೆ ಆಮ ಇದೆಯೋ ಅಂಥವುಗಳನ್ನೇ ಮಿತವಾಗಿ ಸೇವಿಸುತ್ತಬರಬೇಕು. ಬಹುಕಾಲದಿಂದ ಕಟ್ಟಿರುವ ಹಳೆಯ 'ಆಮ'ವನ್ನು ನಿಧಾನವಾಗಿ ಕಳೆಯುವುದು, ಹೊಸ 'ಮಂದ' ಸೇರ ದಂತೆ ಜಾಗ್ರತೆ ವಹಿಸಿ ಯುಕ್ತಾಹಾರಿಗಳಾಗುವುದು, ಇದೇ ಸಧ್ಯಕ್ಕೆ ಉಪವಾಸದ ವ್ಯಾವಹಾರಿಕಾರ್ಥ.

ರಾಗಿ ಗೋಧಿಗಳಲ್ಲಿ ಅಕ್ಕಿಗಿಂತ ಆಮಾಂಶ ಕಡಿಮೆ. ಶೇ ೧೯ ಅಂಶ ಆಮ ವಿರುವ ಹುಳಿರೂಪ ತಾಳುವ ಮಿರ್ಷ ಪಾಲಿಷ್ ಮಾಡಿಸಿದ ಅಕ್ಕಿಯ ಅನ್ನಕ್ಕಿಂತ ಕೈಯಲ್ಲಿ ಕುಟ್ಟಿದ ಅಕ್ಕಿಯ ಅನ್ನದಲ್ಲಿ ಶೇ ೩ ಅಂಶ ಮಾತ್ರ ಆಮ ಇರುತ್ತದೆ. ಪಡವಲ ಕಾಯಿ, ಹೀರೇಕಾಯಿ ಇನ್ನು ರೇಚಕಕಾರಿಗಳಾದ ಸೊಪ್ಪುಗಳು—ಏಕೆಂದರೆ ಮೆಂತ್ಯದ ಸೊಪ್ಪು, ಕೊತ್ತುಂಬರಿ ಸೊಪ್ಪು ಮಲಜಾರಿಸುವುದಿಲ್ಲ—ಇವುಗಳನ್ನು ಮೊಟ್ಟ ಮೊದಲು ಉಪವಾಸ ಮಾಡುವವರು ಉಪಯೋಗಿಸುತ್ತಾ ಬಂದರೆ ದೇಹಮಲ ಎಷ್ಟೋ ಕಳೆದು ದೇಹ ಪರಿಜ್ಞಾನ ಅವರವರಿಗೇ ಕುದುರುತ್ತದೆ. ಮೊದಮೊದಲು ಆಗಾಗ ಬಿಟ್ಟು ಒಂದೆರಡು ದಿನಗಳ ಈ ಸುಖೋಪವಾಸ ಪಳಗಿದ ಮೇಲೆ ಉಪವಾಸ ತದ್ ಜ್ಞ ರನ್ನು ಜತೆಗಿಟ್ಟುಕೊಂಡು ಒಂದು ವಾರದ; ಹೀಗೆ ೨-೩ ವರ್ಷ ಶರೀರ ಇನ್ನೂ ಶುದ್ಧ ವಾದಾಗ ೧ ತಿಂಗಳ ಉಪವಾಸವನ್ನು ಮಾಡಬಹುದು. ಹೀಗೆಯೇ ಅಲ್ಪಾಮ ವಸ್ತುಗಳನ್ನು ಉಪಯೋಗಿಸುತ್ತಲೇ ಇದ್ದು ಮಾಡಿದರೂ ಶರೀರ ಎಷ್ಟೋ ಸ್ವಚ್ಛವಾಗು ವುದು ಅನುಭವಕ್ಕೆ ಬರುತ್ತದೆ.

ಈ ಶರೀರ ಶೋಧಕ 'ಉಪವಾಸ ವಿಜ್ಞಾನವೇ' ವಿಪುಲವಾಗಿ ಜಗತ್ತಿನಲ್ಲಿ ಇಂದು ಬೆಳೆಯುತ್ತಿದೆ. ಜರ್ಮನಿ, ಇಂಗ್ಲೆಂಡ್, ಅಮೆರಿಕಾ ಮತ್ತು ಭಾರತ ಎಲ್ಲೆಲ್ಲೂ ಅದ ಕ್ಕಾಗಿಯೇ ಪ್ರಕೃತಿ ಚಿಕಿತ್ಸಾಶ್ರಮಗಳಾಗುತ್ತಿವೆ. ಗುಣಗ್ರಾಹಿಗಳಾದ ಡಾಕ್ಟರು ಗಳೆಲ್ಲಾ ಈ 'ಹಿತಮಿತಾಶನಂ, ತಪಸ್ಸಿನ' ಕಡೆ ತಿರುಗಿದ್ದಾರೆ. ಸತ್ಯಕ್ಕೆ ಎಂದೂ ಚ್ಯುತಿ ಯಿಲ್ಲ ಎಂಬ ಶ್ರದ್ಧೆ ದೃಢವಾಗುತ್ತಿದೆ.

ವೇದದಲ್ಲಿ ನೀರನ್ನೇ ಔಷಧವಾಗಿಸಿಕೊಳ್ಳುವ ಪ್ರಾರ್ಥನೆಯಿದೆ. 'ಅಪೋಯಾ ಚಾಮ ಭೇಷಜಮ್', ನೀರೊಂದೇ ನಿಜಕ್ಕೂ ಔಷಧಿ. ನೀರು ಔಷಧವಾಗಿಯೇ ತೀರು ತ್ತದೆ ಎಂಬ ನಿರೂಪಣೆಯಿದೆ. 'ಅಪೋವೈ ಭೇಷಜಮ್' 'ಭೇಷಜ ಮೇವಾಸ್ಮೈ ಕ ರೋತಿ'. ನಿಜವಾದ ಸುಖ ನೀರಿನಿಂದಲೇ. 'ಆಪೋಹಿಷ್ಠಾ ಮಯೋಭುವಃ'. ಹಾಗೆಯೇ ಮಣ್ಣೂ ಆರೋಗ್ಯಸಾಧನೆಯಲ್ಲಿ ಬಹು ಮುಖ್ಯ. 'ಮೃತ್ತಿಕೇ ಹನಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಮ್' ಕಿಬ್ಬೊಟ್ಟೆಯ ಮೇಲೆ ಮಣ್ಣಿನ ಪಟ್ಟಿಕೆಯನ್ನು

ಇಟ್ಟುಕೊಳ್ಳುವುದರಿಂದ ಅಥವಾ ಹೊಕ್ಕಳಿನವರಿವಿಗೂ ನೀರಿನ ತೊಟ್ಟಿಗಳಲ್ಲಿ ಸ್ವಲ್ಪ ಹೊತ್ತು ಇರುವ 'ಕಟಿಸ್ನಾನ'ದಿಂದ ಮಲಶುದ್ಧಿ ಆಗುವ ಅನುಭವ ಅನೇಕರಿಗೆ ಆಗುತ್ತಿದೆ. 'ಘೋರೇಷುಜವ್ಯಾಧಿಷು ವರ್ತಮಾನಾಃ ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತ ದುಃಖಾಸ್ಸುಖಿನೋ ಭವನ್ತಿ' 'ಅಚ್ಯುತಾನಂತ ಗೋವಿನ್ದ ನಾಮೋಚ್ಚಾರಣ ಭೇಷಜಾತ್ । ನಶ್ಯನ್ತಿ ಸಕಲಾರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥ 'ರೋಗಾರ್ತೋಮುಚ್ಯತೇ ರೋಗಾತ್' 'ಜರಾವ್ಯಾಧಿ ಭಯಂ ನೈವೋಪಜಾಯತೇ' ಈ ಆರ್ಷ ವಚನಗಳಿಗೆಲ್ಲಾ ಅನುಭವಿಕ ತಥ್ಯಾರ್ಥ ತಿಳಿದುಕೊಳ್ಳಬಹುದಾದ ಸಂದರ್ಭ ಸಿಕ್ಕಿದಂತಾಗಿದೆ.

ತಮಿಳುನಾಡಿನ ಸಂತ ಆಳ್ವಾರುಗಳಲ್ಲಿ ಒಬ್ಬರಾದ ಪೆರಿಯಾಳ್ವಾರ್ ಎಂಬುವರು ತಮ್ಮ ಶಾರೀರಕ ರೋಗಗಳನ್ನೆಲ್ಲಾ 'ಇನ್ನು ಹೊರಡಿ', ಇದು ಪ್ರಭುಮಂದಿರವಾಯಿತು, ನನ್ನ ಈಗಿನ ಶರೀರ ಹಿಂದಿನ ಶರೀರವಲ್ಲ. ಎನ್ನುವ ತಮ್ಮ ಅಪೂರ್ವವಾದ ಒಂದು ಅನುಭವವನ್ನು ಹೇಳಿದ್ದಾರೆ ಹತ್ತು ಹಾಡುಗಳಲ್ಲಿ.

ನೆಯ್‌ಕ್ಕಡತ್ತೈಪ್ಪತ್ತಿ ಏಱುಮೆಯುಂಬಹುಳ್ ಪೋಲ್ ನಿರ್ರೈಸ್ಸು ಎಂಗುಂ
ಕೈಕ್ಕೊಂಡು ನಿಱ್ಱ ನೋಯ್‌ಗಾಳ್ ಕಾಲಂಪೆರ ಉಯ್ಯಪ್ಪೋಮಿನ್
ಮೆಯ್‌ಕೊಂಡುವನುಪ್ರಹ್ರುಂದು ವೇದಪ್ಪಿರಾನಾರ್ ಕಿಡನಾರ್
ಪೈಕೊಂಡ ಪಾಂಬಣೈಯೊಡುಂ ಪಂಡನ್ಱು ಪಟ್ಟಿನಂ ಕಾಪ್ಪೇ !

ದೇವರ ದೇವಾಲಯುವಾದ ಈ ಮೈಯನ್ನು ಶುದ್ಧವಾಗಿಸಿದಾಗ ದೇವರು ತಾನೇ ತಾನಾಗಿ ಆಸೆಯಿಂದ ಬರುತ್ತಾನೆ. ದೈವಸಾನ್ನಿಧ್ಯದ ಅನುಭವ ಮೈಯಲ್ಲೆಲ್ಲಾ ಹತ್ತಿದಾಗ ರೋಗಗಳೆಂತು ಇದ್ದಾವು ? ನಿಸರ್ಗೋಪಚಾರವನ್ನು 'ರಾಮನಾಮೋಪಚಾರ' ಮುಂತಾದ ಪವಿತ್ರವಾದ ಹೆಸರುಗಳಿಂದ ಮಹಾತ್ಮಜಿಯವರು ಏಕೆ ಕರೆದರೆಂಬುದರ ಕಾರಣ ಈ ಆಳ್ವಾರ್ ಅನುಭವದಿಂದಲೂ ನಮಗೀಗ ತಿಳಿದಂತಾಯಿತು.

ಹಾಗೆಯೇ ಕುಲಶೇಖರರು ರಚಿಸಿರುವ ಮುಕುಂದ ಮಾಲಾ ಸ್ತೋತ್ರದ

'ಕಿಮೌಷಧೈಃ ಕ್ಲಿಶ್ಯಸಿ ಮೂಢ ದುರ್ಮತೇ ನಿರಾಮಯಂ ಕೃಷ್ಣರಸಾಯನಂ ಪಿಬ'. ಈ ಶ್ಲೋಕದ ವಾಸ್ತವ ವೈಜ್ಞಾನಿಕಾರ್ಥವೂ ನಮಗಾಗಹತ್ತಿದೆ. ನಾವೀಗ ಸೇವಿಸುವ ಔಷಧಿಗಳೆಲ್ಲಾ ರೋಗಗಳನ್ನು ತತ್ಕಾಲಕ್ಕೆ ಶಮನ ಮಾಡಿದಂತೆ ತೋರುವ ಉತ್ತೇಜಕ ಪದಾರ್ಥಗಳೇ ಹೊರತು ಅವುಗಳಿಂದ ರೋಗ ನಿರ್ಮೂಲವಾಗುವುದಿಲ್ಲ. ದೇಹದೊಳಗಿರುವ ವಿಷ ಪದಾರ್ಥಗಳು ಹೊರಕ್ಕೆ ಸಹಜವಾಗಿಯೇ ಬರುವ ಪ್ರಯತ್ನವೇ ರೋಗ. ಅದಕ್ಕೆ ಅವಕಾಶಕೊಟ್ಟು ನಾವು ಸಹಾಯ ಮಾಡಿದರೆ ನಮ್ಮ ಶರೀರದ ಶುದ್ಧಿಯಾಗುವುದು. ಔಷಧಿಗಳ ಸೇವನೆಯಿಂದರೆ ಈಗಾಗಲೇ ಮೈಯಲ್ಲಿ

ತುಂಬಿಕೊಂಡಿರುವ ವಿಷಗಳೊಂದಿಗೆ ಇನ್ನು ಒಂದು ಹೊಸ ವಿಷ ಸೇರಿಸಿದಂತೆ. ಔಷಧ ಸಿದ್ಧಾಂತವೇ ಅಂಥದು. ಪ್ರಕೃತಿ ಜೀವನ ವಿಧಾನದಲ್ಲೋ 'ವಿಷವನ್ನು ಹೊರಕ್ಕೆ ಕಳಿಸುವ ಪ್ರಕೃತಿಯ ಪ್ರಯತ್ನದಲ್ಲಿ ನಾವು ಸಹಕರಿಸೋಣ. ರೋಗಗಳ ಲಕ್ಷಣಗಳನ್ನು ನಗುಮುಖದಿಂದ ಸ್ವಾಗತಿಸಿ ಗಾಬರಿ ಪಡದಿರೋಣ !' ಎನ್ನುವ ವಾಸ್ತವಿಕತೆಯಿದೆ. ಇಲ್ಲಿ ಕುಲಶೇಖರರು ಔಷಧ ಪದ್ಧತಿಯುಲ್ಲಿನ ಕ್ಲೇಶ, ಮೌಢ್ಯ, ಮತ್ತು ಬುದ್ಧಿದೋಷ ಈ ಮೂರನ್ನು ಎತ್ತಿತೋರಿದ್ದಾರೆ.

ಜಪ ತಪ ಆದಿಗಳನ್ನು ಮಾಡುವಾಗ ಸರಿಯಾದ ದೇಹ ಶುದ್ಧಿ ಅಗತ್ಯ. ಪ್ರಾಣಾಯಾಮವನ್ನು ಸಕ್ರಮವಾಗಿ ಮಾಡುವುದರಿಂದ ನಮ್ಮ ಶರೀರದಲ್ಲಿ ವಾಯು ಸಂಚಾರ ಒಂದು ಸ್ತಿಮಿತಕ್ಕೆ ಬಂದು ದೇಹಮಲ ಕಡಿಮೆಯಾಗಿ ದೇಹಬಲ ಕುದುರುವುದು. ನಾವು ತಿಂದುದರ ಅಜೀರ್ಣಾಂಶ ಎಲ್ಲಿಯವರಿವಿಗೆ ರಕ್ತನಾಳಗಳಿಂದಲೂ ಕೊನೆಗೆ ನಮ್ಮ ರಕ್ತದಿಂದಲೂ ತೊಲಗುವುದಿಲ್ಲವೋ ಅಲ್ಲಿಯವರಿವಿಗೆ ನಮಗೆ ದೇಹಾರೋಗ್ಯ ಎನ್ನುವುದಿಲ್ಲ. ನಮ್ಮ ನರನಾಳಗಳಲ್ಲಿ ಈ ಆಮ ರೂಪಿ ಅಡ್ಡಿ ಆತಂಕಗಳು (Abstructions) ಈಗ ತುಂಬಿಕೊಂಡಿವೆ. ಆದುದರಿಂದ ಈಗಿನ ದೈಹಿಕ ಪರಿಸ್ಥಿತಿಯಲ್ಲೇ ಆಸನಸಿದ್ಧಿಯಾಗದುದರಿಂದ ಪ್ರಾಣಾಯಾಮಾದಿಗಳನ್ನು ಮಾಡುವುದು ತಪ್ಪಾಗುತ್ತದೆ. ಒಳಗೆ ಕಟ್ಟಿಕೊಂಡಿರುವ ಆಮವನ್ನು ಮೆಲ್ಲಮೆಲ್ಲನೆ ಕಳೆದು ರಕ್ತ ಶುದ್ಧಿ ಪರ್ಯಂತ ಯುಕ್ತಾಹಾರ ಅಥವಾ ಸುಖೋಪವಾಸ ವ್ರತಾಚರಣೆಯೇ ವೈಜ್ಞಾನಿಕ ಆರೋಗ್ಯ ಸಾಧನ. ಹಾಗೆ ಕೊಟ್ಟ ಕೊನೆಗೆ ಶರೀರದಲ್ಲಿ ಸ್ವಲ್ಪವೂ ಆಮಾಂಶವಿಲ್ಲದ ಪರಮ ಸ್ಥಿತಿ ಪ್ರಾಪ್ತವಾದಾಗ ಬರೀ ಗಾಳಿ, ನೀರು ಇವುಗಳಿಂದಲೇ ಈ ದೇಹ ಶಕ್ತಿಯಿಂದ ಕೂಡಿರುವುದು ಅಸಂಭವವೇನಲ್ಲ. 'ಕಲ್ಲಿದ್ದಲು ಸೌದೆಗಳಿಂದ ಹಾಗೂ ಎಣ್ಣೆಗಳಿಂದ ನಡೆಯುವ ಯಂತ್ರಗಳಂತೆ ನಮ್ಮ ದೇಹಯಂತ್ರವೂ ನಡೆಯುವುದು ಆಹಾರದಿಂದ, ಎನ್ನುವ 'ಪ್ರೊಟೀನ್ ವಿಟಮಿನ್ ಸಿದ್ಧಾಂತ' ಈಗ ಎಲ್ಲೆಲ್ಲೂ ಕೇಳಿ ಬರುತ್ತಿರುವುದು ಗತಾನುಗತಿಕ ಸಾಮಾನ್ಯ ಶರೀರ ದೃಷ್ಟಿಯ ವಿಚಾರಗಳೇ ಹೊರತು ಆಳವಾಗಿ ಇಳಿದು ನೋಡಿದಾಗ ನಮ್ಮ ಶರೀರ ವಿದ್ಯುಚ್ಛಕ್ತಿಯಿಂದ ನಡೆಯುವ ಯಂತ್ರದಂತೆ ಮೂಲಭೂತವಾದ ಒಂದು 'ಜೀವಶಕ್ತಿ'ಯಿಂದ ನಡೆಯುತ್ತಿದೆ. ಹಾಗೆ ಸಲೀಸಾಗಿ ಈ ದೇಹ ನಡೆಯದಿರಲು ಈಗ ಪ್ರತಿಬಂಧಕಗಳಿವೆ ; ಈ ಬಾಧಕಗಳನ್ನು ತೊಲಗಿಸಿ ಮೂಲಶಕ್ತಿಯನ್ನು ಪುನರುಜ್ಜೀವಿತಗೊಳಿಸುವುದೇ ವೈಜ್ಞಾನಿಕವಾದ ದೇಹಾರೋಗ್ಯದ ದಾರಿ. ಯಂತ್ರಗಳನ್ನು ಶುದ್ಧಿಮಾಡಬೇಕಾದಾಗಲೂ ಯಾವ ಕ್ರಮ ನಾವು ಅನುಸರಿಸುತ್ತೇವೆ ? ಅದರ ಆಹಾರವನ್ನು ಮೊದಲು ಬಂದ್ ಮಾಡುತ್ತೇವೆ ; ಆಮೇಲೆ ಎಲ್ಲಾ ಭಾಗಗಳನ್ನು ಶುಚಿಗೊಳಿಸುತ್ತೇವೆ. ನಮ್ಮ ಶರೀರ ಈಗಿನ ಸಾಮಾನ್ಯ ಸ್ಥಿತಿಯುಲ್ಲಿ ಒಂದು ಪರಂಪರಾಗತ ಅಭ್ಯಾಸಕ್ಕೆ ಮಾರುಹೋಗಿ ಆಹಾರದ ಇಚ್ಛೆಯನ್ನು ವ್ಯಕ್ತಪಡಿಸುವಂತೆ ತೋರುತ್ತದೆಯೇ ಹೊರತು ನಿಜಕ್ಕೂ ಹಾಗಿಲ್ಲ.

ಕೊನೆಯ ಆದರ್ಶ ನಿರಾಹಾರವೇ ಆದರೂ ಅದನ್ನು ಬಿಟ್ಟೇ ನಾವು ಮಾತಾಡೋಣ. ಆಗ ನೋಡಿದರೂ ಸೊಪ್ಪು ತರಕಾರಿ ಕಳಿತ ಹಣ್ಣು ಹಂಪಲುಗಳೇ ಮಾನವನ ಆದರ್ಶ ಆಹಾರ, ಸಹಜಾಹಾರ. ಅದೂ ಇದೂ ಈಗಿನ ಮಿಶ್ರಣವೆಲ್ಲಾ ಅಗತ್ಯವಿಲ್ಲ. ಹಸು ಹುಲ್ಲೊಂದನ್ನು ತಿಂದು, ನೀರೊಂದನ್ನು ಕುಡಿದು ನಮಗೆಲ್ಲಾ ಅಮೃತ ನೀಡುತ್ತದೆ. ಆಕಳಿಗೆ ನಾವಾರೂ ಹಾಲಿಗಾಗಿ ಹಾಲು ಕುಡಿಸುವುದಿಲ್ಲ. ನಮ್ಮ ಆಹಾರ ಒಳಕ್ಕೆ ಹೋದ ಮೇಲೆ ಅವುಗಳ ರಸಾಂತರೀಕರಣ ಪ್ರಕ್ರಿಯೆ (Metobolism) ಸರಿಯಾಗಿ ತಿಳಿದರೆ ಮೇಲೆ ಹೇಳಿದ ಶುದ್ಧಾಹಾರವೇ ಎಲ್ಲರ ಮನಸ್ಸಿಗೂ ಹಿಡಿಯುತ್ತದೆ. ನಾವು ಬದಲಾಯಿಸಿಕೊಳ್ಳಬೇಕಾಗಿರುವ ದೇಹಾರೋಗ್ಯಕ್ಕೆ ಪಕ್ವ ಫಲಗಳಲ್ಲಿರುವ ಶರ್ಕರಾಂಶವೇ ಮುಖ್ಯಾಧಾರ. ಯುಕ್ತಪಾಕದಿಂದ ಸೊಪ್ಪು ತರಕಾರಿಗಳಲ್ಲೂ ಆ ಫಲ ಶರ್ಕರಾಂಶ ಅಭಿವ್ಯಕ್ತವಾಗುತ್ತದೆ. ಹುಳಿಹಣ್ಣುಗಳನ್ನು ಕೆಂಡದ ಮೇಲಿಟ್ಟಾಗ ಸಿಹಿಯಾಗುವುದು ಎಲ್ಲರ ಅನುಭವಕ್ಕೂ ಬಂದ ವಿಚಾರ.

ಒಟ್ಟಿನಲ್ಲಿ ಜೀವ ಶಕ್ತಿಯೇ ದೇಹಧಾರಕ, ಆಹಾರವಲ್ಲ. ಅಯುಕ್ತ ಆಹಾರಗಳಿಂದಲೇ ಶರೀರದ ಒಳಗೆ ಅಲ್ಲಲ್ಲೇ ಆಮ ಬಾಧೆಗಳೂ, ಇಡೀ ರಕ್ತದಲ್ಲೇ ವಿಷಮಯತೆಯೂ ಸೇರಿಕೊಂಡಿವೆ. ಇವುಗಳನ್ನು ದೂರ ಮಾಡಿದಾಗ ತನಗೆ ತಾನೇ ಇರುವ ಜೀವಶಕ್ತಿ ಅಭಿವ್ಯಕ್ತವಾಗುವುದು. ಈಗ ಅದರ ಮೇಲೆ ಆಮದ ಪದರಗಳನ್ನು ಘರದೆಗಳಂತೆ ಹೊದ್ದಿಸಿಬಿಟ್ಟಂತಿದೆ. ಈ ಆಮಾವರಣಗಳನ್ನೆಲ್ಲಾ ಇಲ್ಲದಂತೆ ಶುಚಿಗೊಳಿಸಿದರೆ ಸಾಕು. ಮಾನವ ದೇಹ ಸಾರ್ಥಕ ! ಪ್ರಾಣಶಕ್ತಿಯೊಡನೆ ಕುಣಿ ಕುಣಿದಾಡುತ್ತಾ ಮೂಲಜೀವಶಕ್ತಿ ತನ್ನ ಅಪ್ರತಿಹತ ಪರಾಕ್ರಮ ತೋರಿಸುತ್ತದೆ. ದೇಹಯಂತ್ರವನ್ನು ಸಹಜವಾಗಿಯೇ ನಡೆಸಿಕೊಂಡು ಹೋಗುತ್ತದೆ. ನಮ್ಮಿಂದ ನಮ್ಮ ದೇಹಕ್ಕೆ ಹೊಸದಾಗಿ ಏನೂ ಬೇಕಿಲ್ಲ. 'ಪ್ರತಿಬಂಧಕಾಭಾವೇ ಕಾರ್ಯೋತ್ಪತ್ತಿಃ' ಪ್ರಪತ್ತಿ ಮಾರ್ಗದಲ್ಲೂ 'ಎಲೆ ಮಾನವಾ ! ,ನಿನ್ನದೇನೂ ಇಲ್ಲ. ದೇವರೇ ಸಿದ್ಧೋಪಾಯ. ಅವನು ಮಾಡುವ ಸಹಜ ರಕ್ಷಣೆಗೆ ಎದುರು ನಿಂತು ಅತ್ಯಂತ ಸ್ವಾತಂತ್ರ್ಯವಹಿಸಿ 'ದೇವರೇ ನೀನಲ್ಲೇ ಇರು' ಎಂಬ ಅಹಂಕಾರ ಅವಿನಯದಿಂದ ತಡೆಯದಿದ್ದರೆ ಸಾಕು. ಜೀವನ ಶ್ರೇಯಸ್ಸು ಸಿದ್ಧ' ಎನ್ನುವ ಸತ್‌ಸಿದ್ಧಾಂತಕ್ಕೆ ಅವಿರೋಧಿಯಾಗಿ ಹತ್ತಿರ ಹತ್ತಿರ ಬರುತ್ತದೆ ಈ ಉಪವಾಸ ವಿಜ್ಞಾನ.

ಇಷ್ಟೇಕೆ ಬರೆಯಬೇಕೆಂದರೆ, ಸಾಂಪ್ರದಾಯಿಕವಾದ ಉಪವಾಸಗಳನ್ನು ಜ್ಞಾನಪೂರ್ವಕ ಮಾಡಿದರೇನೇ ಅದು ತಪಸ್ ಆಗುವುದು ; 'ತಪ ಆಲೋಚನೆ' ಇಲ್ಲದಿದ್ದರೆ 'ಉಪವಾಸ' ಎಂದು ಕೇಳಿದರೇ ಜನ ಭಯಪಡುತ್ತಾರೆ. ಶಾಸ್ತ್ರೀಯ ಆಚಾರಗಳಿಗೆಲ್ಲಾ ಅಪಾಯದ ಕೆಟ್ಟ ಹೆಸರು ಬಂದಿರುವುದಕ್ಕೆ ಈ ಅಜ್ಞಾನವೇ ಕಾರಣ. 'ಹಿತಮಿತಾಶನಂ ತಪಃ' ಇದರ ಅರ್ಥ ನಮ್ಮ ಜೀವನದಲ್ಲಿ ಪ್ರಾಯೋಗಿಕವಾಗಿ ಸರಿಯಾಗಿ

ಆದಾಗಲೇ ನಾವು ಶಿಷ್ಟಾಚಾರದ ಪಾದಚ್ಛಾಯೆಯಲ್ಲಿ ಸುಖವಾಗಿ ತಪಸ್ವಿಗಳಾಗ ಬಹುದು; 'ತಪದಾಹೇ' ಎನ್ನುವ ಭೀತಿ ಬಿಡಬಹುದು. 'ವೈರಾಗ್ಯ'ವೂ ಒಂದು ಮಹಾರಸ ಎನ್ನುವುದು ಆಗಲೀಗ ಗೋಚರವಾಗುವುದು. 'ವೈರಾಗ್ಯರಾಗ ರಸಿಕೋಭವ ಭಕ್ತಿ ನಿಷ್ಠ :' ಈ ಭಾಗವತ ಶ್ಲೋಕಾರ್ಥ ಜೀವನದಲ್ಲಿ ಅರಳಿಬರುವುದು.

ದೇಹಕ್ಕೆ ಸ್ವಲ್ಪ ಸುಸ್ತು ಸಂಕಟ ಕಾಣಿಸಿಕೊಂಡರೂ ಸಹಿಸಿಕೊಳ್ಳುವ ಅಭ್ಯಾಸ ಇತ್ತೀಚೆಗಂತೂ ಸಮಾಜದಲ್ಲಿ ಬಹಳ ಕಡಿಮೆಯಾಗಿ ಬಿಟ್ಟಿದೆ. ಊಟ ಮಾಡಿದ ಮೇಲೆ ವಿದ್ಯಾಭ್ಯಾಸ ಪದ್ಧತಿ ಬಂದು ದಿನದ ಮೊಟ್ಟ ಮೊದಲ ಕೆಲಸ ಊಟ ಅಥವಾ ತಿಂಡಿ ಎನ್ನುವ ಭ್ರಾಂತಧಾರಣೆ ದೈಹಿಕ ಶ್ರಮ ಮಾಡದವರಲ್ಲೂ ಮೂಡಿಹೋಗಿದೆ. ಈ ಮಿಥ್ಯಾಧ್ಯಯನ ಪದ್ಧತಿ ಬರುವ ಮೊದಲು ಮಾಧ್ಯಾಹ್ನಿಕ ಉಪಾಸನೆಯಾದ ಮೇಲೇ, 'ಚತುರ್ಥ-ಕಾಲಪಾನ ಭಕ್ತಃ ಸ್ಯಾತ್' ಎಂಬ ಆರಣ್ಯಕೋಪನಿಷತ್ತಿನ ವಾಕ್ಯದಂತೆಯೋ ಅಥವಾ ಯಕ್ಷ ಪ್ರಶ್ನೆಗೆ ಧರ್ಮರಾಯ ಸುಖ ಜೀವನ ಇಂಥದೆಂದು ಹೇಳಿರುವ 'ಪಂಚ ಮೇವಹನಿಷಷ್ಠೇಣ ಶಾಕಂಪಚತಿಯೋನರಃ' ಎಂಬಂತೆ ಅಪರಾಹ್ನ ಕಾಲದಲ್ಲೋ ಆಹಾರ ತೆಗೆದುಕೊಳ್ಳುವ ಸದಾಚಾರ ಸಾಮಾಜಿಕವಾಗಿ ಇತ್ತು. ಆದರೆ ಆಹಾರವಿಲ್ಲ ದುದೇ ಸುಸ್ತು ಸಂಕಟಗಳಿಗೆ ಕಾರಣವೆಂಬ ಅಜ್ಞಾನವೂ ಅಸಂಯಮ ಜೀವನವೂ ಹೆಚ್ಚಿ ಹೋಗಿದೆ ಈ ಕಾಲದಲ್ಲಿ. ವಿಜ್ಞಾನ ಬೆಳೆಯುತ್ತಿರುವ ಈ ಕಾಲದಲ್ಲಿರುವ ನಾವು 'ಆಹಾರ ವಿಜ್ಞಾನ'ವನ್ನೂ ಬೆಳೆಯಿಸಬೇಕು. ಆಗ ತಿಳಿದೀತು. ನಾವು ಕುಡಿ ಯುತ್ತಿರುವ ಒಂದೊಂದು ಗುಟುಕು ಕಾಫಿ ಚಹಾ ಮುಂತಾದ ಅಪೇಯಪೇಯಗಳೂ, ಕೆಲ ಅವಸ್ಥೆಯಲ್ಲಿ ಹಾಲೂ ಕೂಡ–ಹಾಗೆಯೇ ನಾವೀಗ ತಿನ್ನುತ್ತಿರುವ ಒಂದೊಂದು ತುತ್ತೂ ನಮಗೇ ಕುತ್ತು! ಸುಸ್ತು ಸಂಕಟ ಎನ್ನುವುದು ದೇಹ ನೈರ್ಮಲ್ಯದ ಒಂದು ಪ್ರಕ್ರಿಯೆ. ಆ ಸಮಯದಲ್ಲಿ ಅವುಗಳನ್ನು ಸಹಿಸಿಕೊಂಡರೆ, ಬೇಡ ಶುದ್ಧವಾದ ನೀರನ್ನು ಕುಡಿದರೆ, ನಿಂಬೇ ಮುಂತಾದ ಸಕ್ಕರೆ ಸೇರಿಸದ ಪಾನಕ, ತರಕಾರಿ ಬೇಯಿಸಿದ ರಸ, ಎಳನೀರು ಮುಂತಾದ ಶೋಧಕ ಪಾನೀಯಗಳನ್ನು ಅಂಥ ಸಮಯದಲ್ಲಿ ಮಿತ ವಾಗಿ ಆತುರಪಡದೆ ನಿಧಾನವಾಗಿ ಸೇವಿಸಿದರೆ ನಮಗೇ ನಾವು ಒಳಿತು ಮಾಡಿ ಕೊಂಡಂತೆ. ಇಂದಿನ ವೈದ್ಯ ಪದ್ಧತಿ ಬಹುತೇಕ ಜನರಿಗೆ ತಿಂಡಿಪೋತತನವನ್ನು ಕಲಿಸಿ ಬಿಟ್ಟಂತಾಗಿದೆ. ಅದರ ದುರ್ಲಾಭ ಪಡೆದುಕೊಂಡು ಪಕ್ವಾಹಾರಗಳ ಮಾರಾಟ ಪದ್ಧತಿ ವಿಪುಲವಾಗಿ ಸಭ್ಯತೆಯ ಹೆಸರಿನಲ್ಲೇ ದಾಂಧಲೆ ಮಾಡುತ್ತಿದೆ! ಇಂಥ ಸನ್ನಿ ವೇಶದಲ್ಲಿ ಉಪವಾಸ ಮಾಡಿರೆಂದರೆ ಸಮಾಜ ಕೇಳುವುದಿಲ್ಲ. ಈ ದಿನಗಳಲ್ಲಿ ಒಳ್ಳೆ ಯದೇ ಕೆಟ್ಟುದಾಗಿಯೂ ಕೆಟ್ಟದೇ ಒಳ್ಳೆಯದಾಗಿಯೂ ತತ್‌ಕ್ಷಣ ಭಾಸವಾಗಲೂ ಅದೇ ಕಾರಣ. ಇದುದರಿಂದ ಯುಕ್ತಾಹಾರದ ಬಗ್ಗೆ ಸರಿಯಾದ ವಿದ್ಯೆ ಅಗತ್ಯ.

ಯೋಗಿಗಳ ನಿರಾಹಾರವನ್ನು ಬರೀ ಪವಾಡವೆಂದೇ ಈಗಲೂ ನಾವನೇಕರು ತಿಳಿದಂತಿದೆ. ನಮ್ಮಾಳ್ವಾರರು ೩೨ ವರ್ಷಗಳ ಕಾಲ ಏನೂ ತಿನ್ನದೆ ಕುಡಿಯದೆ,

ಇರಲು ಸಾಧ್ಯವೆ ? ನನ್ನ ಗುರುಗಳೊಬ್ಬರು ಒಮ್ಮೆ ತಮ್ಮ ಆಹಾರವಿಷಯಕವಾದ ಸಂದೇಹವನ್ನು ಹೀಗೆ ಹೊರಗೆಡವಿದ್ದರು. "ತಿನ್ನದಿದ್ದರೆ ಬಳಲಿಕೆ ಎನ್ನುತ್ತೇವೆ ತಿಂದರೆ ಶ್ರಮಹೋಯಿತು ಎನ್ನುತ್ತೇವೆ, ಅದೇನು ಅಷ್ಟು ಬೇಗ ನಾವು ಸೇವಿಸಿದ್ದು ದೇಹವನ್ನು ವ್ಯಾಪಿಸಿಬಿಡುತ್ತದೆಯೇ ?" ಇದಕ್ಕೆ ಉತ್ತರ ಪ್ರಕೃತಿ ಚಿಕಿತ್ಸೆಯಲ್ಲಿ ಸಿಗುತ್ತದೆ. ಈಗಿನ ಹಸಿವುಗಳೆಲ್ಲಾ ಕಳ್ಳ ಹಸಿವು. ತಿಂದೊಡನೆ ಹಸಿವು ಆರಿತೆಂದ ರೇನು ? ಊಟಕ್ಕೆ ಮುಂಚೆ ದೇಹ ತನ್ನ ಸಹಜ ಕರ್ತವ್ಯವಾದ ದೇಹನಿರ್ಮಲೀಕರಣದ ಕೆಲಸ ಮಾಡುತ್ತಿತ್ತು. ಅಲ್ಲಲ್ಲಿ ಕಟ್ಟಿರುವ ಆಮಾದಿದೋಷಗಳನ್ನು ಸಡಿಲಪಡಿಸಿ ಮುಂದೂಡುತ್ತಿತ್ತು. ನಾವು ಹೊಟ್ಟೆಗೆ ಒಂದು ತುತ್ತನ್ನು ಕಳಿಸಿದೆವೋ ಇಲ್ಲವೋ, ಆ ತನ್ನ ಹಿಂದಿನ ಸಫಾಯಿಕೆಲಸ ಬಿಟ್ಟು ಈ ಹೊಸ 'ಗ್ರಾಸಾತಿಥಿ'ಯನ್ನು ಸ್ವಾಗತಿಸಲು ಹೊಸ ಆಹಾರವನ್ನು ಜೀರ್ಣಮಾಡುವ ಕೆಲಸವನ್ನು ಕೈಗೆತ್ತಿಕೊಂಡಿತು. ಗುಡಿಸುತ್ತಿದ್ದ ಕೆಲಸ ಅಷ್ಟಕ್ಕೇ ನಿಂತಿತು. ಅದನ್ನೇ ನಾವು ಬಹಳ ಆರಾಮವಾಯಿತಪ್ಪಾ ! ಎಂದು ಭ್ರಮಿಸುತ್ತೇವೆ. ವ್ರತ ಉಪವಾಸ ಮುಂತಾದ ಸದಾಚಾರಗಳಿಂದ ಹೇಗೆ ಆಯಸ್ಸು ಅಭಿವೃದ್ಧಿಯಾಗುವುದು ? ಎನ್ನುವುದನ್ನು ಈ ಮೇಲೆ ಹೇಳಿದ ಮುಕ್ತಾಹಾರ ಪದ್ಧತಿಯಿಂದ ಸುಲಭವಾಗಿ ತಿಳಿಯಬಹುದು. ಆತುರಪಡದೆ, ನಿಧಾನವಾಗಿ ವೈಜ್ಞಾನಿಕವಾಗಿ 'ಉಪವಾಸ ಯೋಗ್ಯತಾ ಸಿದ್ಧಿ' ಮೊದಲು ಪಡೆದುಕೊಂಡು ಆಮೇಲೆ ಮಾಡುವ ದೀರ್ಘೋಪವಾಸ ಮಾಸೋಪವಾಸಗಳಿಂದ ತಮ್ಮ ವಯಸ್ಸು ಸಂಖ್ಯೆಯಲ್ಲಿ ಹಿಂದಕ್ಕೆ ಹೋಗುವ ಅನುಭವ ಅನೇಕರಿಗಾಗುತ್ತದೆ.

'ಆಹಾರ ವಿವೇಕ' 'ಆಹಾರಶುದ್ಧಿ' 'ಉಪವಾಸ ವಿಜ್ಞಾನ' ಇಲ್ಲದಿದ್ದರೆ ದೇಹ ಶುದ್ಧಿ ಬಾರದೆಂದಾಯಿತು. ದೇಹ ಶುದ್ಧಿಯಿಂದ ಮನಶ್ಶುದ್ಧಿ, ಬಳಿಕ ಆತ್ಮಸ್ಫುರಣ ಆಮೇಲೆ ಪರಮಾತ್ಮಜ್ಞಾನ. "ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ। ಏತದ್ ಯೋವೇತ್ತಿ ತಂಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ। ಕ್ಷೇತ್ರಜ್ಞಂಚಾಪಿಮಾಂ ವಿದ್ಧಿ" ಈ ಪೂರ್ವಾಪರ ಕ್ರಮವೂ ಗೀತಾಚಾರ್ಯನಿಗೆ ಅತ್ಯಂತ ವಿವಕ್ಷಿತ. ಆದುದರಿಂದಲೇ ಉಪನಿಷತ್ತುಗಳಲ್ಲಿ 'ಆಹಾರ ಶುದ್ಧೌ ಸತ್ವಶುದ್ಧಿಃ' ಮುಂತಾದ ಕ್ರಮಬದ್ಧ ಯೋಜನೆ ಹಾಕಿರುವುದು 'ಆಹಾರ' ಎಂಬೀ ಶಬ್ದಕ್ಕೆ ಶಂಕರಾಚಾರ್ಯರು ವ್ಯಾಪಕ ಅರ್ಥ ಮಾಡಿದ್ದರು. ರಾಮಾನುಜಾಚಾರ್ಯರು ವಿವೇಕಾದಿ ಸಪ್ತಕಗಳು ಉಪಾಸನೆಗೆ ಅಗತ್ಯವೆಂದು ಹೇಳುವ ಸಂದರ್ಭದಲ್ಲಿ ಜಾತಿ, ನಿಮಿತ್ತ ಮತ್ತು ಆಶ್ರಯ ಈ ತ್ರಿದೋಷ ದುಷ್ಟವಲ್ಲದ ಸಾತ್ವಿಕಾಹಾರವೇ ಸಾಧಕರು ಗಮನಿಸಬೇಕಾದುದೆಂದು ಒತ್ತಿ ಹೇಳಿದ್ದಾರೆ. ದೇಹ ಲಘುವಾಗಿದ್ದು, ಜ್ಞಾನ ಪ್ರಕಾಶ ಚೆನ್ನಾಗಿ ಆಗುತ್ತಿದ್ದು ಪ್ರೇಮ ಹೆಚ್ಚುತ್ತಿದ್ದರೆ, ಸಾತ್ವಿಕ ಗುಣವೇ ಹೊಮ್ಮುವಂತಾದರೆ ಅದು ಸಾತ್ವಿಕಾಹಾರವೆಂದು ಸಕಲ ಸತ್‌ಪುರುಷರೂ ಆಹಾರಶುದ್ಧಿಯ ವಿವೇಚನೆ ಮಾಡಿದ್ದಾರೆ. ಆಹಾರಶುದ್ಧಿ ಹಾಗೂ ಉಪವಾಸದಿಂದಲೇ ಬುದ್ಧ ಕ್ರಿಸ್ತ ಮುಂತಾದವರಿಗೂ ಕಾರುಣ್ಯದ ಹಾಗೂ ಪ್ರೇಮದ ಸಾಕ್ಷಾತ್ಕಾರ ಏರ್ಪಟ್ಟಿತೆಂದು ಸ್ಪಷ್ಟ ಉಲ್ಲೇಖವೇ ಇದೆ.

ನನ್ನ ಅಲ್ಪ ಉಪವಾಸಾನುಭವದಿಂದಲೂ ಆಗಾಗ ಏರ್ಪಟ್ಟ ಅನುಭವಗಳ ಬಗ್ಗೆ ಹಾಗೇ ಹೊರಟ ಕೆಲವು ಶ್ಲೋಕ ಹಾಗೂ ಗೀತಗಳಿಂದ ಈ ಲೇಖನ ಮುಗಿಸುತ್ತೇನೆ.

ಅಲ್ಪಾಹಾರಾದ್ ಭವತಿ ವಿರತಿರ್ಜಾಠರಾಣಾಂಕ್ರಿಯಾಣಾಮ್
ಅಲ್ಪಾಹಾರಾದ್ ಭವತಿ ಪಚನಂ ಪೂರ್ಣರೂಪಂ ಸುಖೇನ
ಅಲ್ಪಾಹಾರಾದ್ ಭವತಿ ಶಕನಾ ದೇಹಗಾ ಸ್ಫೂರ್ತಿ ಸಿದ್ಧಾS
ಸ್ಯಲ್ಪಾಹಾರಾದ್ ಭವತಿ ವಿಹಿತಾ ನಾಡಿಕಾ ಪಾಟಿತಾಧ್ವಾ ||

ಹಿತಾಶನಂ ಮಿತಾಶನಂ ಭವತಿ ಕುಕ್ಷಿಶೋಧನಮ್
ಹಿತಾಶನಂ ಮಿತಾಶನಂ ಭವತಿ ಚಾನ್ದ್ರಶೋಧನಮ್
ಹಿತಾಶನಂ ಮಿತಾಶನಂ ಭವತಿರಕ್ತಶೋಧನಮ್
ಹಿತಾಶನಂ ಮಿತಾಶನಂ ಭವತಿ ದೇಹಶೋಧನಮ್

ಹಿತಾಶನಂ ಮಿತಾಶನಂ ಭವತಿ ಧರ್ಮ ಚಿಂತನಮ್
ಹಿತಾಶನಂ ಮಿತಾಶನಂ ಭವತಿ ಧರ್ಮಬೋಧನಮ್
ಹಿತಾಶನಂ ಮಿತಾಶನಂ ಭವತಿ ಧರ್ಮ ಚಾರಣಮ್
ಹಿತಾಶನಂ ಮಿತಾಶನಂ ಭವತಿ ಧರ್ಮ ದರ್ಶನಂ

ಹಿತಾಶನಂ ಮಿತಾಶನಂ ಸರ್ವತಃ ಸುಪಾವನಮ್
ಹಿತಾಶನಂ ಮಿತಾಶನಂ ಭವತಿ ತಪಃ ಸಾಧನಮ್
ಹಿತಾಶನಂ ಮಿತಾಶನಂ ಸಕಲ ದುಃಖಮೋಚನಮ್
ಹಿತಾಶನಂ ಮಿತಾಶನಂ ಸುಖಂ ಸುಖಂ ಸುಖಂ ಸುಖಮ್.

---

# ಮನೋರೋಗಕ್ಕೆ ಮದ್ದು

ಡಾ|| ಡಿ. ಎಸ್. ಶಿವಪ್ಪ

ಮದ್ದುಗಳ ಸೇವನೆಯಿಂದ ಮನಸ್ಸಿನ ವ್ಯತ್ಯಾಸಗಳಾಗುವುದನ್ನು ಹುಟ್ಟಿನಿಂದಲೂ ಮಾನವ ಕಂಡುಕೊಂಡು ಆಸಕ್ತನಾಗಿದ್ದರೂ, ಮನೋರೋಗಗಳ ಚಿಕಿತ್ಸೆಯಲ್ಲಿ ಮದ್ದುಗಳಲ್ಲಿನ ಆಸಕ್ತಿ, ಪ್ರಯೋಗ, ಬಳಕೆ ಹೆಚ್ಚಿದ್ದು ಕಳೆದ ಮಹಾ ಯುದ್ಧದಿಂದ ಈಚೆಗೆ ಮಾತ್ರ. ಮನಶ್ಶಾಸ್ತ್ರದಲ್ಲಿ ಒಬ್ಬನ ಮನಸ್ಸಿನ ಬಿಡಿಪರೀಕ್ಷೆಗಾಗೂ (analysis), ವೈದ್ಯದಲ್ಲಿ ಸಾಮಾನ್ಯವಾಗೂ ರೋಗಿಗಳ ನಡೆವಳಿಕೆ, ಭಾವನೆಗಳನ್ನು ಬದಲಿಸಲು ಮದ್ದುಗಳು ಅಪಾರವಾಗಿ ಬಳಕೆಯಲ್ಲಿವೆ. ಎಷ್ಟೋ ವೇಳೆ ಬೇಡದಿದ್ದರೂ ಮದ್ದು ಕೊಡುವುದು ವಾಡಿಕೆಯಾಗಿಬಿಟ್ಟಿದೆ. ಬರಿದೇ ಕಚ್ಚಾಡುವ, ಹತೋಟಿಗೆ ಸಿಗದ ಮನೋರೋಗಿ, ಬಲು ಮಂಕು ಹಿಡಿದ ರೋಗಿಗಳಿಗೆ ತುರ್ತಾಗಿ ಮದ್ದು ಕೊಟ್ಟರೆ ಯಾರೂ ಬೇಡವೆನ್ನರು. ಆದರೆ, ಮನಸ್ಸಿಗೆ ತುಸು ಇರಸುಮುರಸಾಗಿರುವ ಸಾವಿರಾರು ರೋಗಿಗಳಿಗೆ ಮದ್ದುಗಳಿಗಿಂತಲೂ ಕರುಣೆ, ದಯೆಯಿಂದ ಕಾಣುವ ವೈದ್ಯ ಮುಖ್ಯವಾಗಿ ಬೇಕು. ರೋಗಿ ತನ್ನ ಕಷ್ಟ ತಾಪತ್ರಯಗಳನ್ನು ತೋಡಿಕೊಳ್ಳುವುದನ್ನೆಲ್ಲ ಕುಳಿತು ಸಮಾಧಾನದಿಂದ ಕೇಳಿ ತಿಳಿವ, ಚರ್ಚಿಸುವ ವೈದ್ಯನಿಗೆ ತಾಳ್ಮೆ ಇರಬೇಕು. ವೈದ್ಯ ಮಾಡುವ ಈ ಕೆಲಸಕ್ಕೆ ಬದಲಾಗಿ ಮದ್ದುಗಳು ಎಂದಿಗೂ ಬರಬಾರದು.

**ಮುನ್ನಡೆಯ ಸಾಧನೆಗಳು :** ಗಿಡ ಮರ ಮೂಲಿಕೆಗಳು, ಪ್ರಾಣಿ ಸಂಬಂಧ ವಸ್ತುಗಳಿಂದ ಬೇಕಿರುವ ಇಲ್ಲವೇ ಬೇಕಿರದ ಮನೋವ್ಯತ್ಯಾಸಗಳು ಆಗುವುದು ಪೂರ್ವ ಕಾಲದಿಂದಲೂ ಜನರಿಗೆ ಗೊತ್ತಿದೆ. ಒಬ್ಬನಲ್ಲಿ ಒಲವು ಹುಟ್ಟಿಸಲೋ ಕಂಡರಾಗದಂತೆ ಮಾಡಲೋ ಯಾವು ಯಾವುದೋ ಮದ್ದು, ಮೂಲಿಕೆ, ರಸಗಳನ್ನು ನಂಬಿ ಕೊಡುವುದು ವಾಡಿಕೆಯಲ್ಲಿತ್ತು. ಮಿದುಳಿನ ಮೇಲೆ ರಸಾಯನಿಕಗಳ ಪರಿಣಾಮ ಇರುವುದೆಂಬಂತೆ, ಜನರನ್ನೆಲ್ಲ ಪಿತ್ತದವ, ಗೆಲವಿಗ, ದುಮ್ಮಾನದವ, ಅಲಸಿಗ ಎಂದು ಹಿಪ್ಪೊಕ್ರೇಟಿಸ್ ವಿಂಗಡಿಸಿದ್ದ. ಮನಸ್ಸು ಇರುವುದು ಮಿದುಳಲ್ಲೇ ಎಂದು ಮೊಟ್ಟಮೊದಲು ಹಿಪ್ಪೊಕ್ರೇಟಿಸ್ ಹೇಳಿದ.

ವೈಗಂಟಿನ ರೋಗಗಳ ವಿಚಾರವಾಗಲಿ, ಅದರಲ್ಲೂ ಮನಸ್ಸಿಗೆ ಹತ್ತುವ ಬೇನೆಗಳ ಕಲ್ಪನೆಯಾಗಲಿ, ಏನೇನೂ ಖಚಿತವಾದ ತಿಳಿವಳಿಕೆ ಇಲ್ಲದಿದ್ದ, ಇಪ್ಪತ್ತನೆಯ ಶತಮಾನಕ್ಕೆ ಮುಂಚೆ ಬಹುವಾಗಿ ಮದ್ದುಗಳ ಬಳಕೆ ಇದ್ದದು ಬರಿ ರೋಗಿಯ ಮನಸ್ಸಿನ ತೃಪ್ತಿಗೆ ಮಾತ್ರ. ಮದ್ದಿನ ನಿಯಮದ ಪಟ್ಟಿ ಬಲು ಉದ್ದವಾಗೇ ಇರು ತ್ತಿತ್ತು. ಬಹುವಾಗಿ ಕೆಲಸಕ್ಕೆ ಬಾರದವೇ ತುಂಬಿರುತ್ತಿದ್ದುವು. ಇಷ್ಟಾದರೂ, ಮನ ಸ್ಸಿನ ಮೇಲೆ ಗಾಢ ಪರಿಣಾಮ ತೋರುತ್ತಿದ್ದ ಮದ್ದುಗಳೂ ಇದ್ದವು. ಅವೇ ಮದ್ಯ ಪಾನೀಯಗಳು, ಅಫೀಮು, ಗಾಂಜ. ರೋಗ ಚಿಕಿತ್ಸೆಯಲ್ಲೇ ಅಲ್ಲದೆ, ಬಾಳು ಸುಗಮವಾಗಲೂ ಕೊಡುತ್ತಿದ್ದರು, ಕೊಡುತ್ತಲೂ ಇರುವರು.

ಹತ್ತೊಂಬತ್ತನೆಯ ಶತಮಾನದಲ್ಲಿ, ರಸಾಯನಶಾಸ್ತ್ರದ ಅಗಾಧ ಬೆಳವಣಿಗೆ ಯಿಂದ, ಕೇಂದ್ರದ ನರದ ಮಂಡಲದ ಮೇಲೆ ಖಚಿತ ಪರಿಣಾಮ ತೋರುವ ಮದ್ದು ಗಳು ಕೈಗೆ ಬರುವಂತಾದವು. ನೈಟ್ರಸ್ ಆಕ್ಸೈಡು (ನಗಿಸುವ ಅನಿಲ), ಡೈಯೆತಿಲ್ ಈತರುಗಳು ಬಂದ ಮೇಲೆ ಅರಿವಳಿಕೆಶಾಸ್ತ್ರ (anaesthesiology) ಕಾಲಿ ಟ್ಟಿತು. ಮನೋವೈದ್ಯನಿಗೂ ಮನೋವಿಜ್ಞಾನಿಗೂ ಆಸಕ್ತಿಯಿರುವ ಕಂಗಾಣ್ಕೆ ಮತ್ತು ಎಚ್ಚರಗಳನ್ನು ಅಣಗಿಸುವ ಮದ್ದುಗಳವು. ಶಾಮಕಗಳು, ನಿದ್ದೆಕಾರಿಗಳಾಗಿ ಬಳಸುವ ಬಗೆ ಬಗೆಯ ಮದ್ದುಗಳೂ ಇದೇ ಶತಮಾನದಲ್ಲಿ ತಯಾರಾಗಿ ಬಂದವು ಇಷ್ಟಾದರೂ, 1945ರ ಸುಮಾರಿನ ತನಕ ರೋಗಿಯ ಮನಸ್ಸಿನ ಮೇಲೆ ಪರಿಣಾಮ ತೋರುವ ಮದ್ದುಗಳೇ ಗೊತ್ತಿರಲಿಲ್ಲ. ಕಳವಳ, ನಿದ್ದೆಗೇಡುಗಳ ಚಿಕಿತ್ಸೆಗಾಗಿ ಬ್ರೋಮೈಡುಗಳನ್ನೂ ಬಾರ್ಬಿಟುರೇಟುಗಳನ್ನೂ ಧಾರಾಳವಾಗಿ ಕೊಡುತ್ತಿದ್ದರೂ, ಮನೋರೋಗ ಚಿಕಿತ್ಸೆಯಲ್ಲಿ ಮದ್ದುಗಳು ತಲೆ ಹಾಕಿರಲಿಲ್ಲ. ಈ ಶತಮಾನದ ಮೊದಲಲ್ಲೇ ನರಬೇನೆಗಳ (neuroses) ಮನೋರೋಗ ಚಿಕಿತ್ಸೆಯ ಮೇಲೆ ಸಿಗ್ಮಂಡ್ ಫ್ರಾಯ್ಡನ ಪ್ರಭಾವ ಹೆಚ್ಚಿ, ಈಗಲೂ ಉಳಿದಿದೆ. ಒಬ್ಬನ ನಡತೆ, ಅಭ್ಯಾಸ ಗಳು, ನಡೆವಳಿಕೆಗಳನ್ನು ಸರಿಪಡಿಸುವ ಒಂದು ವಿಧಾನವಾಗಿ ರೋಗಿಗೂ ಚಿಕಿತ್ಸಕ ನಿಗೂ ನಡುವೆ ಮಾತುಗಳು ನಡೆವುದು ಮುಖ್ಯವೆಂದಾಯಿತು. ಒಬ್ಬನ ವ್ಯಕ್ತಿತ್ವದ ರಚನೆ, ಅವನ ವಿರೋಧ ಎದುರಿಸುವ ತಂತ್ರ ಇವುಗಳ ಒಳಹೊಕ್ಕು ನೋಡುವುದರಿಂದ ರೋಗಿಯ ಮನಸ್ಸಿನ ನಿಜಗೆಲಸ ಚೆನ್ನಾಗುವುದೆಂದು ಫ್ರಾಯ್ಡನೂ, ಅವನ ಹಿಂಬಾ ಲಕರೂ ತಿಳಿದರು.

ಇದೇ ಕಾಲದಲ್ಲಿ ಮನೋರೋಗ ಚಿಕಿತ್ಸಕರು ಮತಿವಿಕಲಿಗಳಿಗೆ (psychotics) ಚಿಕಿತ್ಸೆ ಮಾಡಲು ಒಪ್ಪಲಿಲ್ಲ. ಇದರಿಂದಲೇ ಈ ತಂಡದ ರೋಗಿಗಳಿಗೆ ಮೈಯ ರೋಗ ಚಿಕಿತ್ಸೆಗಳು ಹುಟ್ಟಿಕೊಂಡವು. ರೋಗಿಯೊಂದಿಗೆ ಮಾತಿಗಿಳಿಯದೆಯೇ ಮಾಡುವ ಈ ಚಿಕಿತ್ಸೆಯ ವಿಧಾನಗಳಲ್ಲಿ, ರೋಗಿಯನ್ನು ಬಲ ವಂತದಿಂದ ಒಂದೆಡೆ ಒಂಟಿಯಾಗಿ ಕೂಡಿ ಹಾಕುವುದು, ನೀರು ರೋಗ ಚಿಕಿತ್ಸೆ

(hydrotherapy), ಮುಖ್ಯವಾಗಿ ನೊಸಲಮುಂದಣ ರಗಟೆಕೊಯ್ಸೀಳಿಕೆ (prefrontal leucotomy) ತೆರನ ಮಿದುಳಿನ ಶಸ್ತ್ರಕ್ರಿಯೆ ಮಿದುಳಿನ ಚೋದನೆ, ಸೆಳವುಕಾರಕ (convulsive) ರೋಗ ಚಿಕಿತ್ಸೆಗಳೂ ಸೇರಿವೆ. ಮನೋರೋಗಗಳ ಚಿಕಿತ್ಸೆಗಳಲ್ಲಿ ಬಹು ಮಟ್ಟಿಗೆ ಮಿದುಳಿನ ಶಸ್ತ್ರ ಕ್ರಿಯೆಯ ಪೂರ್ತಿ ಬದಲಾಗಿ 1955ರಿಂದೀಚೆಗೆ ಮದ್ದುಗಳ ರೋಗ ಚಿಕಿತ್ಸೆಯೇ ಬಂದಿವೆ. ಅದೇ ಸೆಳವುಕಾರಕ ರೋಗ ಚಿಕಿತ್ಸೆ ಮಾತ್ರ ಈಗಲೂ ಬಳಕೆಯಲ್ಲಿದೆ. ಸರಿಯಾದವರಿಗೆ ಮಾಡುವುದಾದರೆ, ಪರಿಣಾಮಕಾರಿಯಾದ, ತೀರ ಹಳೆಯ ಕಾಲದ ಇನ್ಸುಲಿನ್ನಿನ ಸೊಕ್ಕೆ (shock) ರೋಗ ಚಿಕಿತ್ಸೆಯನ್ನು ಈಗಲೂ ಕೆಲವರು ಬಳಸುತ್ತಿರುವರು. ಪೆಂಟಲೀನ್ ಟೆಟ್ರಜಾಲ್ ಸೊಕ್ಕೆ ರೋಗಚಿಕಿತ್ಸೆಯನ್ನು ಕೆಲ ಕಾಲ ಬಳಸಿದರೂ, ಈಗ ಅಷ್ಟಾಗಿ ಚಾಲ್ತಿಯಲ್ಲಿಲ್ಲ. ನಡು ವಯಸ್ಸು ಕಳೆದವರ ಮಂಕುತನದ ಚಿಕಿತ್ಸೆಯಲ್ಲಿ ಈಗಲೂ ಹಲವು ವೇಳೆ ವಿದ್ಯುತ್ಸೆಳವಿಕರೋಗಚಿಕಿತ್ಸೆ (electro-convulsive therapy) ಪರಿಣಾಮಕಾರಿ. ಆದರೀಗ, ಮನೋರೋಗ ಚಿಕಿತ್ಸೆಯಲ್ಲಿ ಸೆಳವಿನ ರೋಗ ಚಿಕಿತ್ಸೆ, ಶಸ್ತ್ರ ಕ್ರಿಯೆಗಳ ಬದಲಾಗಿ ಮದ್ದುಗಳನ್ನು ನೀಡುವುದೇ ವಾಡಿಕೆ. ಏಕೆಂದರೆ ಇವು ಇನ್ನಷ್ಟು ಪರಿಣಾಮಕರ. ಅಲ್ಲದೆ, ರೋಗಿಗೆ ನೀಡಲು ಯಾವ ವಿಶೇಷ ಪರಿಕರಗಳಾಗಲಿ ತಂತ್ರಗಳ ತಿಳಿವಾಗಲಿ ಬೇಕಿಲ್ಲ. ಚಿಕಿತ್ಸೆ ಆದ ಮೇಲೆ ತಾಕು ತೊಡಕುಗಳೂ ಕಡಮೆ. ಖರ್ಚೂ ಕಡಮೆ. ಮಕ್ಕಳಿಗಾಗಲಿ ವಯಸ್ಸಾದವರಿಗಾಗಲಿ ಸುಲಭವಾಗಿ ಕೊಡಬಹುದು. ಮನೋರೋಗ ಚಿಕಿತ್ಸೆ ಆಗುತ್ತಿರುವಾಗಲೇ ಇದನ್ನೂ ಕೊಡಬಹುದು. ಎಲ್ಲಕ್ಕೂ ಮಿಗಿಲಾಗಿ ಸಾಧಾರಣವಾಗಿ ಈ ಚಿಕಿತ್ಸೆಯ ಪರಿಣಾಮಗಳು ಶಾಶ್ವತವಲ್ಲ.

**ರೋಗ ಕಾರಣಗಳು :** ಮನೋವೈದ್ಯದಲ್ಲಿ ಮದ್ದಿನ ಚಿಕಿತ್ಸೆ ಅಷ್ಟೇನೂ ನಿರ್ದಿಷ್ಟವಲ್ಲ. ಏಕೆಂದರೆ, ರೋಗ ಕಾರಣಗಳು ಇನ್ನೂ ಖಚಿತವಾಗಿ ಗೊತ್ತಿಲ್ಲ. ಕಳೆದ ಒಂದು ಶತಮಾನದಲ್ಲಿ, ಸಹಜ ನಡೆವಳಿಕೆಗೆ ಕಾರಣವಾಗುವ ಮಿದುಳಿನ ಭಾಗಗಳ ವಿಚಾರ ಕೂಡ ಎಲ್ಲೋ ತುಸು ಮಾತ್ರ ಗೊತ್ತಾಗುತ್ತಿದೆ. ಉಸಿರಾಟ, ವಾಂತಿ, ಹಸಿವು, ನೀರಡಿಕೆಗಳಂತಹ ಕೆಲವು ಬಹುಮಟ್ಟಿಗೆ ತೀರ ಮೂಲದ ನಿಜಗೆಲಸಗಳನ್ನು ಅಂಕೆಗೊಳಿಸುವ ಕೇಂದ್ರಗಳನ್ನೂ, ಕೆಲವು ಚಲನೆಗಳು, ಅರಿವುಗಳನ್ನು ಹತೋಟಿಯಲ್ಲಿಡುವ ಕೇಂದ್ರಗಳನ್ನೂ ಗುರುತಿಸಿದ್ದಾಗಿದೆ, ಅಷ್ಟೆ. ಮಿದುಳಿನ ಕೆಲವು ತಾವುಗಳನ್ನು ಚೋದಿಸುವುದರಿಂದ ನಡೆವಳಿಕೆಗೆ ನೆರವಾಗುವುದನ್ನೂ ಕುಂದಿಸುವುದನ್ನೂ ಮಾಡಿ ತೋರಿದೆ. ಇದರಿಂದ ಮಿದುಳಲ್ಲಿ ಮೆಚ್ಚಿಗೆ, ದಂಡನೆಗಳ ಕಲ್ಪನೆಯಿದೆ. ಮಿದುಳಿನ ಅಂಗೆಲಸದ (physiological) ತಿಳಿವಳಿಕೆ ಎಷ್ಟೇ ಅರೆಬರೆಯಾಗಿದ್ದರೂ, ನಡೆವಳಿಕೆಯ ವಿಚಾರಗಳನ್ನಾದರೂ ವಿಜ್ಞಾನಕ ರೀತಿಯಲ್ಲಿ ಪರಿಶೀಲಿಸಬಹುದು. ಮದ್ದುಗಳು, ಮಿದುಳು, ನಡೆವಳಿಕೆಗಳ ನಡುವಣ ಸಂಬಂಧಗಳನ್ನು ತಿಳಿಯಲು ಇದರಿಂದ ಎಷ್ಟೋ ಅನುಕೂಲ.

ಏನೇ ಆದರೂ, ಚೆನ್ನಾಗಿರುವವರು, ಮನೋರೋಗಿಗಳು ಇವರ ನಡುವಣ ನರ ಮಿದುಳುಗಳ ಕೆಲಸಗಳಲ್ಲಿನ ವ್ಯತ್ಯಾಸಗಳ ತಿಳಿವಳಿಕೆ ಏನೇನೂ ಸಾಲದು. ಅಂತಹ ವ್ಯತ್ಯಾಸಗಳು ಇವೆ ಎನ್ನುವಂತಿದ್ದರೂ ಅವು ಬಲೂ ಬಲು ಸ್ವಲ್ಪ. ಇದೇ ತೆರನಾಗಿ, ಮತಿವಿಕಲಿಗಳ ರಕ್ತ, ಮೂತ್ರ, ಮಿದುಳು, ಬೆನ್ನುಹುರಿಯ ದ್ರವಗಳಲ್ಲಿ ಒಂದಿಷ್ಟು ವ್ಯತ್ಯಾಸವಿರುವ ವರದಿಗಳು ಬೇಕಾದಷ್ಟಿದ್ದರೂ ಮತಿವಿಕಲಿಗಳು, ನರಬೇನೆಯವರ ಮಿದುಳುಗಳಲ್ಲಿನ ರಸಾಯನಿಕಗಳ ವ್ಯತ್ಯಾಸಗಳು ಏನೆಂದೂ ಗೊತ್ತಿಲ್ಲ. ಇಚ್ಛಿತ್ತ (schizophrenia), ಉನ್ಮತ್ತ ಮನಗುಂದಿಕ ಮನೋರೋಗಗಳಲ್ಲಿ ಅಂಗ ಗಳಲ್ಲಿನ ವ್ಯತ್ಯಾಸಗಳ ಪುರಾವೆಯಾಗಿ ರೋಗಿಗಳ ಜನಿಕದ (genetic) ವ್ಯತ್ಯಾಸ ಗಳು ಗೊತ್ತಾಗಿವೆ.

ಅಂತೂ ಮನೋರೋಗಗಳ ಕಾರಣಗಳೇ ಸರಿಯಾಗಿ ಗೊತ್ತಿಲ್ಲದ್ದರಿಂದ, ಮನೋವೈದ್ಯದಲ್ಲಿ ರೋಗಗಳ ಹೆಸರುಗಳು ಕೇವಲ ವರ್ಣನೆಗಳಾಗಿವೆಯೇ ಹೊರತು ಕಾರಣವನ್ನು ಕುರಿತವಲ್ಲ. ಬಹುಪಾಲು ಮನೋರೋಗಗಳ ನಿಜವಾದ ಕಾರಣಗಳ ಸುಳಿವೇ ಇನ್ನೂ ಸಿಕ್ಕಿಲ್ಲ.

ನರಬೇನೆಗಳ ಹುಟ್ಟನ್ನು ಅರಿತುಕೊಳ್ಳಲೂ, ಸಾಮಾನ್ಯವಾಗಿ ಅವಕ್ಕೆ ಮಾಡುವ ರೋಗ ಚಿಕಿತ್ಸೆಯನ್ನು ರೂಪಿಸಲು ಸಿಗ್ಮಂಡ್ ಫ್ರಾಯ್ಡ್ ಮತ್ತವನ ಹಿಂಬಾಲಕರ ಮನೋಬಿಡಿಪರೀಕ್ಷೆಯ ಕಲ್ಪನೆ ಬಹುವಾಗಿ ನೆರವಾಗಿದೆ. ಕೈಗೂಡದ ಬಯಕೆಗಳಿಗೂ (ಸಹಜ ಪ್ರವೃತ್ತಿಯಿಂದೇಳುವ ಹುಟ್ಟು ಗುಣಗಳು), ನಾನು ಎನ್ನುವುದರಿಂದ ಏಳುವ ದಮನ ಮಾಡುವ ಓಲುವೆಗಳಿಗೂ ಸರಿಬೀಳದ್ದರಿಂದ ಆಗುವ ಹೊಂದಾಣಿಕೆ ತಪ್ಪಿದ್ದ ರಿಂದ ನರಬೇನೆ ಆಗುವುದೆಂದಿದೆ. ಬಾಳಿನ ಮುಂದಿನ ಕಾಲದ ನರಬೇನೆಯ, ಮನೋ ಬೇನೆಯ, ನಡತೆಯ ಪ್ರತಿಕ್ರಿಯೆಗಳನ್ನು ರೂಪಿಸುವುದರಲ್ಲಿ ಎಳೆತನದ ಬೆಳೆವ ಕಾಲದ ತಿಕ್ಕಾಟಗಳು, ಮನಸ್ಸಿನ ಪೆಟ್ಟುಗಳ ಮನೋಬಿಡಿಪರೀಕ್ಷೆ ಒತ್ತಿ ಹೇಳುತ್ತದೆ. ಒತ್ತಿ ಹಿಡಿದಿರುವ ನೆನಪುಗಳನ್ನು ಮತ್ತೆ ಮೆಲುಕು ಹಾಕುತ್ತ, ಅವನ್ನು ಸರಿಯಾಗಿ ಪರೀಕ್ಷಿಸಿ ದರೆ, ರೋಗಿ ತನ್ನ ಬಾಳಿಗೆ ಹಸನಾಗಿ ಹೊಂದಿಕೊಳ್ಳಲು ಅನುವಾಗುವುದೆಂದು ಮನೋಬಿಡಿಪರೀಕ್ಷಕರ ನಂಬುಗೆ. ಇದರಿಂದಾಗಿ ಸರಾಗ ಭಾವನಾಸರಣಿ, ಮುಚ್ಚು ಮರೆಯಿಲ್ಲದ ನೆನವರಿಕೆಗಳ ತಂತ್ರ ಹುಟ್ಟಿತು.

ಕಂಡ ಹಾಗೇ, ರೋಗಿ ತನ್ನನ್ನು ತಾನರಿಯಲು ಮನೋರೋಗ ಚಿಕಿತ್ಸೆ ನೆರವಾಗುವಷ್ಟು ಮದ್ದುಗಳು ಮತ್ತಿತರ ಅಂಗಾಂಗ ಚಿಕಿತ್ಸೆಗಳು ನೆರವಾಗವು. ರೋಗಿ ತನ್ನನ್ನು ತಾನು ಅರಿಯಬೇಕೇ ಎನ್ನುವುದು ಇನ್ನೊಂದು ವಿವಾದದ ವಿಚಾರ. ಆದರೂ, ರೋಗಿಗೆ ಮನೋರೋಗ ಚಿಕಿತ್ಸೆ ಇನ್ನೂ ಚೆನ್ನಾಗಿ ಹಿಡಿವಂತೆ ಅವನ ಭಾವನೆಗಳ ಮಾನಸಿಕ ಸ್ಥಿತಿಯನ್ನು ಮದ್ದುಗಳು ಮಾರ್ಪಡಿಸಬಹುದು. ಉದ್ರೇಕವಾಗಿರುವ

ಉನ್ಮತ್ತ ರೋಗಿಯನ್ನು ಕ್ಲೋರ್‌ಪ್ರೊಮಜೀನಿಂದ ಸಾಕಷ್ಟು ತೆಪ್ಪನಿರಿಸಬಹುದು. ಕ್ಲೋರ್‌ಡೈಯಜಿಪಾಕ್ಸೈಡು ಕಳವಳದಿಂದ ತಳಮಳಗುಟ್ಟುವ ರೋಗಿಯನ್ನು ಸಮಾಧಾನಗೊಳಿಸಬಹುದು. ಮಂಕಾಗಿ ಮೂಲೆಯಲ್ಲಿ ಮುದುರಿಬಿದ್ದು ಮುಲುಕುವ ಮನೋರೋಗಿಯನ್ನು ಇಮಿಪ್ರಮೀನ್ ಎಚ್ಚರಿಸಿ ಹುರಿದುಂಬಿಸಬಹುದು. ಹೀಗೆ, ರೋಗ ಚಿಕಿತ್ಸಕನೊಂದಿಗೆ ಸಹಕರಿಸಲು ಹಿಂದೆ ರೋಗಿಗೆ ಆಗದಿದ್ದುದು ಈಗ ಮದ್ದುಗಳ ಬಳಕೆಯಿಂದ ಕೈಗೂಡಿದೆ.

ಮನೋರೋಗ ಇಂತಹದೆಂದು ಹೆಸರಿಟ್ಟ ಕೂಡಲೇ ಯಾವ ಮದ್ದಿನ ರೋಗ ಚಿಕಿತ್ಸೆ ನೀಡಬೇಕೆಂದು ಗೊತ್ತಾಗುವುದಿಲ್ಲ. ಮತಿವಿಕಲತೆ ಮೇಲಿಂದ ಮೇಲೆ ಕಾಡಿಸುವ ರೋಗಿಗೆ ವಿಪರೀತ ಕಳವಳ ಇರುವುದರಿಂದ, ಫೀನೊತಯಜೀನ್‌ಗಿಂತಲೂ ಮೆಪ್ರೊಬಮೇಟೋ ಕ್ಲೋರ್‌ಡೈಯಜಿಪಾಕ್ಸೈಡೋ ಚೆನ್ನಾಗಿ ಹಿಡಿಯಬಹುದು. ಮನೋರೋಗದ ಕೆರಳು ಹೆಚ್ಚಿದ್ದರೂ ಮಂಕಾಗಿರುವ ರೋಗಿಗೆ ಫಿನೋತಯಜೀನ್ ಸರಿಬೀಳುತ್ತದೆ. ಅಂತೂ, ಒಬ್ಬ ರೋಗಿಗೆ ಒಂದು ದಿನ ಯಾವ ಮದ್ದನ್ನು ಕೊಡಬೇಕು ಎನ್ನುವುದನ್ನು ಕಂಡುಕೊಳ್ಳಲು ಮನೋರೋಗಿಗಳ ಅನುಭವ ಸಾಕಷ್ಟಿರಲೇಬೇಕು.

ಮಾನಸಿಕ ರೋಗದ ಕಾರಣಗಳ ಕಲ್ಪನೆಗಳು, ಚಿಕಿತ್ಸೆಗಳ ವಿಚಾರವಾಗಿ ಬಿಡಿ ಪರೀಕ್ಷಕ ಪದ್ಧತಿ ಹೆಚ್ಚಿನ ಕೊಡುಗೆಯನ್ನು ನೀಡಿದ್ದರೂ, ಇದರ ಭಾವರೂಪಗಳನ್ನು ಅನೇಕರು ನಂಬರು. ಅಲ್ಲದೆ, ಮನೋಬಿಡಿಪರೀಕ್ಷೆಗೂ ಕಂಡ ಹಾಗೆ ಮಿತಿಗಳಿವೆ. ಉದಾಹರಣೆಗೆ, ಸುಮಾರು 17ದಶಲಕ್ಷ ಮಂದಿಗೆ ಯಾವುದಾದರೂ ಒಂದು ರೂಪದಲ್ಲಿ ಮನೋರೋಗ ಕಾಡುತ್ತಿರುವುದೆಂದು ಲೆಕ್ಕವಿದೆ. ಇವರೆಲ್ಲ ಬಹುಪಾಲು ಮಾನಸಿಕ ಆಸ್ಪತ್ರೆಗಳಲ್ಲಿ ಇರುವವರು ಇಷ್ಟೊಂದು ಮಂದಿಗೂ ಮನೋರೋಗ ಚಿಕಿತ್ಸೆ ದೊರಕಿಸುವುದಂತೂ ಆಗದ ಮಾತು. ವಿದ್ಯುತ್ತೆಸೆಳವಿನಂತಹ ಅಂಗಾಂಗ ಚಿಕಿತ್ಸೆಯಂತೂ ಇನ್ನೂ ದುಬಾರಿ ಖರ್ಚಿನದು; ಗುಣ, ಪರಿಣಾಮಗಳಂತೂ ಹೀಗೆ ಎನ್ನುವ ಹಾಗಿಲ್ಲ. ಆದ್ದರಿಂದ, ಒಬ್ಬನೇ ಒಬ್ಬ ಮನೋವೈದ್ಯ ನೂರಾರು ಸಾವಿರಾರು ರೋಗಿಗಳಿಗೆ ಒಂದೇ ಬಾರಿ ನೀಡಬಹುದಾದ ಸರಳ ಚಿಕಿತ್ಸಕ ನೆರವೆಂದರೆ ಮದ್ದಿನ ಚಿಕಿತ್ಸೆ ಒಂದೇ.

ಇಷ್ಟಾದರೂ, ಮಾನಸಿಕ ವ್ಯತ್ಯಾಸಗಳ ಚಿಕಿತ್ಸೆಯಲ್ಲಿ ಮದ್ದಿನ ಕೊಡುಗೆಗೂ ಕೆಲವು ಗೊತ್ತಾದ ಮಿತಿಗಳುಂಟು. ತಲೆಮಾರಿನ ಗುಣಗಳು, ಕುಟುಂಬದ ರೂಪು, ಒಬ್ಬನ ಸಮಾಜದ ಹಣಕಾಸಿನ ಸ್ಥಿತಿಯನ್ನು ಮದ್ದುಗಳು ನೇರವಾಗಿ ಬದಲಾಯಿಸಲಾರವು. ಆದರೆ, ತನ್ನ ಆವರಣದೊಂದಿಗಿನ ಪ್ರತಿಕ್ರಿಯೆಯನ್ನೂ, ಅವನ ಮತಿವಂತಿಕೆ, ಭಾವ ಉದ್ವೇಗಗಳನ್ನು ಮದ್ದುಗಳು ಮಾರ್ಪಡಿಸಬಲ್ಲವು. ಸದ್ಯದ ನಡೆವಳಿಕೆ ಆಗಿಂದಾಗ ಬರುತ್ತಿರುವ ಚೋದನೆಗಳಿಗೆ ತಕ್ಕನಾಗಿರುವುದು. ಅಂತೂ ಒಟ್ಟಿನಲ್ಲಿ,

ಮನಸ್ಸು ಕದಡಿ ಹೋಗಿರುವ ರೋಗಿಗಳಿಗೆ ಎಷ್ಟು ಕಡೆಗಳಿಂದ ನೆರವು ಬಂದರೂ ಸಾಕಾಗದು. ಆದರೆ, ಮದ್ದಿನ ವಿಚಾರ ಅಷ್ಟು ಸುಲಭವಲ್ಲ, ತುಂಬಾ ತೊಡಕಿನದು. ಮಿದುಳಿನ ಕೆಲಸದಲ್ಲಾಗಲೀ, ರಸಾಯನಿಕ ರಚನೆಯುಲ್ಲಾಗಲೀ, ಮಾನಸಿಕ ರೋಗಗಳ ನಿಜವಾದ ಕಾರಣ ಎನ್ನುವುದು ಸಿಕ್ಕಿಲ್ಲ. ಇದೇ ತೆರನಾಗಿ ಮಾನಸಿಕ ರೋಗದ ಚಿಕಿತ್ಸೆಯಲ್ಲಿ ಒಂದಿನಿತು ಗುಣ ತೋರುವ ಮದ್ದುಗಳ ವರ್ತನೆಯ ರೀತಿಯೂ ಅಷ್ಟೇ ಗೂಢ. ಹೀಗೆ, ಎಲ್ಲೆಲ್ಲೂ ಕಾಣುವ, ಬಲು ಕಟ್ಟುನಿಟ್ಟಿನ, ಕಾರಣ ಗೊತ್ತಿಲ್ಲದ, ಸಮಾಜದ ಹಣಕಾಸಿನ ರೋಗವನ್ನು, ಗೊತ್ತಿರದ ರೀತಿಯಲ್ಲಿ ವರ್ತಿಸುವ ತಂತ್ರದ ಲೆಕ್ಕವಿಲ್ಲದಷ್ಟು ಮದ್ದುಗಳಿಂದ ಚಿಕಿತ್ಸೆ ಮಾಡುವ ಮಹತ್ತರ ತೊಡಕನ್ನು ಎದುರಿಸ ಬೇಕಾಗಿದೆ. ಆದ್ದರಿಂದ, ರೋಗಿಗೆ ಕೊಟ್ಟು ನೋಡಲು ಎತ್ತಿಕೊಳ್ಳುವ ಮದ್ದುಗಳ ಆಯಿಕೆಗಾಗಿ ಮಾಡುವ ಪ್ರಯೋಗಗಳನ್ನೂ, ರೋಗಿಗೆ ಕೊಟ್ಟು ನೋಡುವ ಪರೀಕ್ಷೆ ಗಳನ್ನೂ ತಿಳಿಯಬೇಕು.

**ಮದ್ದಿನಿಂದ ಮನೋರೋಗ ಚಿಕಿತ್ಸೆ :** ಮಾನವನಲ್ಲಿ ತೋರುವ, ಮೂಲ ಗುಣಗಳನ್ನಾದರೂ ಹೊಂದಿರುವ, ಮಾನಸಿಕ ರೋಗಗಳನ್ನು ಪ್ರಾಣಿಗಳಲ್ಲಿ ಬರಿಸು ವುದು ಕೈಗೂಡದ್ದರಿಂದ ರೋಗಗಳ ಮೂಲವನ್ನೂ ಸರಿಯಾದ ಚಿಕಿತ್ಸೆಯನ್ನೂ ತಿಳಿ ವುದರಲ್ಲಿ ಅನೇಕ ತೊಡರುಗಳಿವೆ. ಮಾನವನಲ್ಲಿ, ಮನೋರೋಗಗಳಲ್ಲೂ ನರಬೇನೆ ಗಳಲ್ಲೂ ಇನ್ನೊಬ್ಬರೊಂದಿಗಿನ ರೋಗಿಯ ಸಂಬಂಧಗಳೂ ಭಾವ ತೋರುವ ಸೂಚನೆ ಗಳೂ ಕೆಟ್ಟಿರುತ್ತವೆ. ರೋಗಿ ಇನ್ನೊಬ್ಬರೊಂದಿಗೆ ಹೇಳಿಕೊಂಡಾಗ ಮಾತ್ರವೇ ಮನದ ಒಳಗುದಿ, ತಳಮಳ, ದುಗುಡಗಳು ಇನ್ನೊಬ್ಬರಿಗೆ ಗೊತ್ತಾಗುವುದು. ಮಾನವನಿ ಗಿಂತಲೂ ಕೀಳು ಮಟ್ಟದಲ್ಲಿರುವ ಪ್ರಾಣಿಗಳಲ್ಲಿನ ಸಮಾಜ ರಚನೆ, ಭಾವ ತೋರಿಕೆ ಗಳಂತೂ ತೀರ ಎಳಸಿನವು. ಮಾನವನ ಸಾಧನೆಗಳನ್ನು ಇವೊಂದಿಗೆ ಹೋಲಿಸಿದರೆ ಪರಮೋತ್ತಮ ಎನ್ನಿಸದಿರಲಾರವು. ಮಾನವನಲ್ಲಿರುವ, ಊಚಜೀವಿಗಳಲ್ಲಿ (primates) ಮೇಲು ಮಟ್ಟದಲ್ಲಿ ಇರುವನಕ್ಕೂ ಮೇಲಿನ ಮೇಟಿತನ (superiortiy) ಎಷ್ಟು ಮೇಲಿನದೆಂದರೆ, ಅವುಗಳ ಮನೋರೋಗ ಕಾರಣ ಗಳನ್ನು ಹೋಲಿಸುವುದೇ ಬಲು ಕಷ್ಟ.

ಇಷ್ಟಾದರೂ, ಪ್ರಾಣಿಗಳ ಮನೋರೋಗಶಾಸ್ತ್ರವನ್ನು ಅರಿಯಲೇಬೇಕೆನಿಸುವ ಕಾರಣಗಳೂ ಇವೆ. ಮೊದಲಾಗಿ, ಇನ್ನೂ ಆದಿಮೂಲ ರೂಪಗಳಿಂದ ವಿಕಾಸವಾಗಿ, ಸಾಮಾನ್ಯ ಮೂಲ ಪ್ರಾಣಿಗಳ ಮೂಲಕ ಇಂದಿನ ಬೇರೆ ಪ್ರಾಣಿವರ್ಗಗಳೊಂದಿಗೆ ಮಾನವ ಸಂಬಂಧಿಸಿರುವನೆಂದು ಡಾರ್ವಿನ್ ವಾದವಿದೆ. ಬೇರೆಬೇರೆ ವರ್ಗಗಳ ಅಂಗ ರಚನೆ, ನಿಜಗೆಲಸಗಳಲ್ಲಿ ಎಷ್ಟೋ ಬದಲಾವಣೆಗಳು ವಿಕಾಸದಿಂದ ಆಗಿದ್ದರೂ, ಸಾಮಾನ್ಯ ತಾಂತ್ರಿಕತೆಗಳೂ ಸರಿಹೋಲಿಕೆಗಳೂ (analogs) ಸಾಕಷ್ಟು ಇರುವುದ

ರಿಂದ ಕೆಲವು ಗೊತ್ತಾದ ಹೋಲಿಕೆಗಳನ್ನಾದರೂ ಮಾಡಬಹುದು. ಎರಡನೆಯದಾಗಿ, ಮಾನವನಲ್ಲಿ ಮಾಡಿನೋಡಲು ನೀತಿ, ನ್ಯಾಯ, ಧರ್ಮಗಳು ಅಡ್ಡಿಬರಬಹುದಾದ ಪ್ರಯೋಗಗಳನ್ನು ಪ್ರಾಣಿಗಳಲ್ಲಿ ಯೋಜಿಸಬಹುದು. ಉದಾಹರಣೆಗೆ, ಯಾವ ಒಂದು ಹೊಸ ಮದ್ದು ಬಂದರೂ ಮೊದಲು ಪ್ರಾಣಿಗಳಿಗೆ ಕೊಟ್ಟು ಏನಾಗುವುದೋ ನೋಡಲೇಬೇಕು. ಆದರೆ ಈ ಪ್ರಾಣಿ ವರ್ಗಗಳಲ್ಲಿನ ವ್ಯತ್ಯಾಸಗಳು ಅಪಾರ ಆಗದಿರಲಿ ಎಂದು ಆಶಿಸಬೇಕಷ್ಟೆ.

ಮಾನವನಲ್ಲಿ ಕಾಣುವ ಮನೋಬೇನೆ, ನರಬೇನೆಗಳಿಗೆ ಸಾಕಷ್ಟು ಸರಿಗಟ್ಟುವುದು ಯಾವುದೆಂದು ಹಲವಾರು ವರ್ಷಗಳಿಂದ ಚರ್ಚೆ ಆಗುತ್ತಲೇ ಇದೆ. ಆದಿಕಾಲದಿಂದಲೂ ಸಾಕಿದ ಪ್ರಾಣಿಗಳಲ್ಲೂ 'ಹುಚ್ಚು' ರೇಗುವುದು ಗೊತ್ತಿದೆ. ಆದರೆ ಮಾನವನ ಹುಚ್ಚಿನೊಂದಿಗೆ ಖಚಿತವಾಗಿ ಹೋಲಿಸಿಲ್ಲ. ಪಾವ್ಲಾವ್ ಮತ್ತವನ ಬೆಂಬಲಿಗರೂ ಪ್ರಾಣಿಗಳಲ್ಲಿ 'ಪ್ರಯೋಗದ ನರಬೇನೆ' ಬರಿಸಿದರು. ಈಗಲೂ ಪ್ರಾಣಿಗಳಲ್ಲಿ ಅಸಹಜ ನಡೆವಳಿಕೆ ಹುಟ್ಟಿಸಲು ಗೊತ್ತುಪಾಡಿನ (conditioning) ವಿಧಾನಗಳನ್ನು ಎಷ್ಟೋ ವೇಳೆ ಬಳಸುತ್ತಿರುವರು. ಅಷ್ಟಾದರೂ, ಪ್ರಾಣಿಗಳ ಅಸಹಜ ನಡೆವಳಿಕೆಗೂ ಮಾನವನ ಮನೋರೋಗ ವರ್ತನೆಗೂ ಸರಿಗಟ್ಟುವುದರಲ್ಲಿ ಪ್ರಯೋಗಪಟುಗಳು ಬಲು ಹುಷಾರಾಗಿರುವರು.

ಪ್ರಾಣಿಗಳ ನಡೆವಳಿಯ ತಿಳಿವಳಿಕೆಯಿಂದ ಮಾನವನ ಅಸಹಜ ನಡತೆಯಲ್ಲಿ ಮದ್ದುಗಳ ವರ್ತನೆಯ ವಿಧಾನದ ವಿಚಾರವಾಗಿ ಅಷ್ಟೇನೂ ಹೆಚ್ಚಿನ ವಿಷಯಗಳು ದೊರೆಯದಿದ್ದರೂ, ಅಂತಹ ಪರಿಶೀಲನೆಗಳಿಂದ ಮನೋಬೇನೆಗಳ ಚಿಕಿತ್ಸೆಗಾಗಿ ಮದ್ದುಗಳ ಆಯಿಕೆಗೆ ಅನುವಾಗಿದೆ. ಮನೋಬೇನೆಗಳ ಚಿಕಿತ್ಸೆಯಲ್ಲಿ ಮದ್ದುಗಳ ಸುಗುಣಗಳು, ಇನ್ನೇತಕ್ಕೋ ಕೊಟ್ಟ ಮದ್ದುಗಳಿಂದ ರೋಗಿಗಳಲ್ಲಿ ಇದ್ದಕ್ಕಿದ್ದ ಹಾಗೆ ಕಂಡುಬಂದುದನ್ನು ತಿಳಿದ ಮೇಲಂತೂ, ಮಾನವನ ರೋಗದ ಚಿಕಿತ್ಸೆಯಲ್ಲಿ ಮದ್ದುಗಳ ಬೆಲೆಯನ್ನು ತಿಳಿಯಲು ಒಂದು ಗೊತ್ತಾದ ಪ್ರಯೋಗ ವಿಧಾನ ಸರಿಯೆ ತಪ್ಪೇ ಎಂದು ನಿರ್ಧರಿಸುವುದೂ ಕಷ್ಟವೇ. ರಿಸರ್ಪೀನ್, ಕ್ಲೋರ್‌ಪ್ರೊಮಜೀನ್, ಇಪ್ರೊನಿಯಜಿಡ್, ಇಮಿಪ್ರಮಿನ್, ಮೆಪ್ರೊಬಮೇಟ್, ಲೈಸರ್ಜಿಕಾಮ್ಲ ಡೈಯೆತಿಲೇಮೈಡ್ (ಎಲ್ಲೆಸ್ಡಿ) ಈ ತೆರನ ಮದ್ದುಗಳೇ. ಆದರೆ ಮನೋವ್ಯೈದ್ಯದಲ್ಲಿ ಬಳಸುವಫೀನೊತಯಜೀನ್‌ಗಳೂ, ಹ್ಯಾಲೊಪೆರಿಡಾಲ್, ಕ್ಲೋರ್‌ಡೈಯಜಿಪಾಕ್ಸೈಡ್, ಟ್ರೈಪ್ರಜೀನ್ ಮತ್ತಿತರವನ್ನು ಪ್ರಾಣಿಗಳಿಗೆ ಕೊಟ್ಟು ನೋಡಿದ್ದರಿಂದ ಕಂಡುಕೊಂಡ ಮದ್ದುಗಳು. ಅಲ್ಲದೆ ರೋಗಚಿಕಿತ್ಸೆಯಲ್ಲಿ ಕೆಲಸಕ್ಕಾಗುವ ಒಂದು ಮದ್ದು ಗೊತ್ತಾಗಿಬಿಟ್ಟರೆ, ಪ್ರಾಣಿಗಳಲ್ಲಿ ಹೇಗೆ ವರ್ತಿಸುವುದೆಂದು ಕಂಡುಕೊಂಡು, ಅದೇ ತೆರನಾಗಿ ವರ್ತಿಸುವ ಹೊಸ ಮದ್ದುಗಳನ್ನು ಕೃತಕವಾಗಿ ತಯಾರಿಸಲೂಬಹುದು. ಈ ವಿಧಾನದಲ್ಲಿ ಬಲು

ಳ್ಳೆಯ ಮದ್ದನ್ನು ಕಂಡುಕೊಳ್ಳುವ ಅವಕಾಶ ತೀರ ಕಡಿಮೆ; ಆದರೂ ಮದ್ದುಗಳ ಬಲದ, ವಿಷದ ಗುಣಗಳನ್ನಾದರೂ ತಿಳಿಯಬಹುದು.

ಪ್ರಾಣಿಗಳ ನಡೆವಳಿಕೆಯನ್ನು ಮಾರ್ಪಡಿಸುವ ಸಾಧನಗಳಾಗಿ ಮದ್ದುಗಳನ್ನು ಬಳಸುವುದರಿಂದ ಬಂದ ಫಲಿತಾಂಶಗಳು ಮನೋವಿಜ್ಞಾನಿಗಳಿಗೂ ಅಂಗೆಲಸವಿಜ್ಞಾನಿಗಳಿಗೂ ಕುತೂಹಲಕರ. ಹುಮ್ಮಸ್ಸು, ಭಾವಾವೇಶ, ಕಲಿಕೆ, ನೆನಪು, ತಾರತಮ್ಯ ತೋರುವ ನಡೆವಳಿಕೆ, ಎಚ್ಚರಿಸುವ ತಾಂತ್ರಿಕತೆಗಳನ್ನು ಮದ್ದುಗಳು ಕುಂದಿಸಬಲ್ಲವು ಇಲ್ಲವೇ ಚೋದಿಸಬಲ್ಲವು. ಇಷ್ಟಾದರೂ, ಮನೋಔಷಧಶಾಸ್ತ್ರದಲ್ಲಿನ (Psycho-pharmacology) ಪ್ರಾಣಿಗಳ ಮೇಲಿನ ಅಗಾಧ ಪ್ರಯೋಗಗಳಲ್ಲಿ ಬಹು ಪಾಲು, ಅವು ಎಷ್ಟೇ ಮುಖ್ಯವಾಗಿರಲಿ ಮಾನವನ ನಡೆವಳಿಕೆಯ ತೊಡಕುಗಳ ಚಿಕಿತ್ಸೆಗಾಗಿ ಬಳಸುವುದರಲ್ಲಿ ನೆರವಾಗುವುದಂತೂ ಇಂದಿಗೂ ಅನುಮಾನವೇ. ಉದಾಹರಣೆಯಾಗಿ, ಪ್ರಾಣಿಗಳಲ್ಲೂ, (ಮಾನವನಲ್ಲಿ ಕೂಡ) ಆರಿಸಿದಂತೆ ಗೊತ್ತುಪಾಡಾಗಿ ತೊರೆವ ಮಾರುವರ್ತನೆ (conditioned avoidance response) ಯನ್ನು ಕ್ಲೋರ್‌ಪ್ರೊಮಜೀನ್ ಕುಂದಿಸುವುದಾದರೂ, ಮದ್ದಿನಿಂದಾದ ಸರಿಗೂಡದ ನಡೆವಳಿಕೆಗೂ ಮತಿವಿಕಲಿಗಳಲ್ಲಿ ಫೀನೋತಯಜೀನ್‌ನ ಅನುಕೂಲಕರ ಪರಿಣಾಮಗಳಿಗೂ ಇರುವ ಸಂಬಂಧ ಈಗಲೂ ಏನೆಂದು ಖಚಿತವಿಲ್ಲ. ಇನ್ನೊಂದೆಡೆಯಲ್ಲಿ, ಕೀಳುಮಟ್ಟದ ಪ್ರಾಣಿವರ್ಗಗಳ ಆಳವಾದ ಪರಿಶೀಲನೆಯಿಂದ ಬಹುಮಟ್ಟಿಗೆ ನಡೆವಳಿಕೆ ಹೀಗಾಗುವುದೆಂದು ಮುಂಚೆ ನುಡಿದು ಹತೋಟಿಗೊಳಿಸುವ ಸಂಬಂಧಗಳು ದೊರೆತಿವೆ. ಇಂದಿನ ಮನೋವೈದ್ಯವೂ ಪ್ರಯೋಗದ ರೋಗಿ ಮನಶ್ಶಾಸ್ತ್ರವೂ ಪ್ರಾಣಿಗಳಿಂದ ದೊರೆತ ಸೂತ್ರಗಳನ್ನು ಮಾನವನಿಗೆ ಅನ್ವಯಿಸುತ್ತವೆ. ಅದರಲ್ಲೂ ರಷ್ಯದಲ್ಲಿ, ಪ್ರಾಣಿಗಳಿಂದ ಪಡೆದ ಪಾವ್ಲಾವನ ಗೊತ್ತುಪಾಡಿನ ಸೂತ್ರಗಳನ್ನು ಮಾನವನ ಮನೋರೋಗಶಾಸ್ತ್ರಕ್ಕೆ ಅನ್ವಯಿಸಲು ಹೆಚ್ಚಿನ ಆಸಕ್ತಿ ಕಾಣುತ್ತಿದೆ. ಮಾನವನ ಅಸಹಜ ಮನಶ್ಶಾಸ್ತ್ರಕ್ಕೆ ಗೊತ್ತುಪಾಡಿನ ಸೂತ್ರಗಳನ್ನು ಅನ್ವಯಿಸುವ ಯತ್ನ ಎಷ್ಟೇ ಆಸೆಗೊಳಿಸುವಂತಿದ್ದರೂ ಮನೋವೈದ್ಯರು ಎಲ್ಲರೂ ಒಪ್ಪಿಕೊಂಡಿಲ್ಲ. ಮಾನವನ ಮನೋರೋಗಕ್ಕೂ ಪ್ರಾಣಿಗಳಲ್ಲಿ ಪ್ರಯೋಗದಿಂದ ಮಾರ್ಪಡಿಸಿದ ನಡೆವಳಿಕೆಗೂ ಇರುವ ಸರಿಹೋಲಿಕೆಗಳನ್ನು ಕಾಣುವ ಸಾಧನವನ್ನು ಮದ್ದುಗಳು ಒದಗಿಸಿವೆ- ಇದರ ಉದಾಹರಣೆಯಾಗಿ, ಪ್ರಾಣಿಗಳಲ್ಲಿ ‘ ನರಬೇನೆಗಳನ್ನು ’ ಆಗಿಸುವ ವಿಧಾನವಾಗಿ ಪಾವ್ಲಾವ್ ಮೊದಲು ಸೂಚಿಸಿದ ಪ್ರಯೋಗದ ತಿಕ್ಕಾಟ, ಕಳವಳದ ಚಿಕಿತ್ಸೆಯಲ್ಲಿ ಬಳಸುವ ಮದ್ದುಗಳಿಗೆ ಜಗ್ಗುತ್ತದೆ. ಬಹುಪಾಲು ಮತಿವಿಕಲತೆರೋಧಕ ಮದ್ದುಗಳಿಂದ ಗೊತ್ತುಪಾಡಾಗಿ ತೊರೆವ ಮಾರುವರ್ತನೆಗಳನ್ನು ಕುಂದಿಸಬಹುದು. ಹೀಗಿದ್ದರೂ, ಪ್ರಾಣಿಯ ನಡವಳಿಕೆಯನ್ನು ಮಾನವನದರ ತಾಕುತೊಡಕುಗಳೊಂದಿಗೆ ಹೋಲಿಸುವುದು ಬಲು

ಕಷ್ಟ. ಏಕೆಂದರೆ, ಮಾನವನ ನಡನಳಿಕೆಯ ಸರಿಯಾದ, ನಂಬುವಂತೆ ಪ್ರಮಾಣಿಸ ಬಹುದಾದ ಅಳತೆಗಳೇ ಸಿಗುವುದು ಕಷ್ಟ.

**ಮದ್ದಿನಿಂದ ರೋಗಿಗೆ ನೆರವು :** ಮನೋವೈದ್ಯದಲ್ಲಿ ರೋಗ ಚಿಕಿತ್ಸೆಯ ತೋಲನವೇ ಬಲು ಕಷ್ಟವಾದ ತೊಡಕುಗಳಲ್ಲಿ ಒಂದು. ಚಿಕಿತ್ಸೆ ಮನಸ್ಸಿನದಾಗಲಿ ಭೌತಿಕವಾಗಲಿ, ರಸಾಯನಿಕವಾಗಲಿ ಇದು ನಿಜ. ಚಿಕಿತ್ಸೆ ಆದ ಮೇಲೆ ರೋಗಿಗೆ ಗುಣ ಕಂಡಿತೇ, ಗುಣವಾದುದಕ್ಕೆ ಚಿಕಿತ್ಸೆಯೇ ಕಾರಣವೇ ಈ ಪ್ರಶ್ನೆಗಳಿಗೆ ಅಂತೂ ಹೇಗಾದರೂ ಉತ್ತರ ಕೊಡಬೇಕು. ರೋಗ ತಂತಾನಾಗೇ ಇಳಿದುದನ್ನೂ, ರೋಗ, ಚಿಕಿತ್ಸೆ ಮಾಡಿಸಿಕೊಳ್ಳುವ ರೋಗಿಯಾಗಲಿ ಮಾಡುವನಾಗಲಿ ಪ್ರಶ್ನೆಯಲ್ಲಿರುವ ವಿಶಿಷ್ಟ ಚಿಕಿತ್ಸೆಯಲ್ಲದೆ ಹೇಗೋ ಬೇರೆ ಅಂಶಗಳ ಪರಿಣಾಮಕ್ಕೆ ಈಡಾಗುವುದನ್ನೂ ತಪ್ಪಿಸಲು ಎಚ್ಚರದಿಂದಿರಬೇಕು. ಮನೋರೋಗ ಚಿಕಿತ್ಸೆಯಲ್ಲಿನ ಪರಿಣಾಮಗಳ ಬೆಲೆ ಕಟ್ಟುವ ಮಾನದಂಡಗಳು ಚಿಕಿತ್ಸಕರ, ರೋಗಿಗಳ ಮನಸ್ಸಿಗೆ ಸಹಜವಾಗಿ ತೋಚಿದ ಹಾಗಿರಬಹುದು. ಇಲ್ಲವೇ ರೋಗಿಗಳ ನಡೆವಳಿಕೆ ಮಾರ್ಪಾಡಿನ ಗೊತ್ತಾದ ಅಳತೆ ಮಾಡುವಂತಿರಬಹುದು.

ರೋಗಿಗಳ ದೊಡ್ಡ ತಂಡಗಳಲ್ಲಿ ನಡೆವಳಿಕೆಯ ಏರುಪೇರುಗಳ ರೋಗಗಳನ್ನು ಅಳೆಯಲು ವಾಸ್ತವಿಕ ತಂತ್ರಗಳ ಹುಟ್ಟಿಗೆ ದಶಕದ ಹಿಂದೆ ಬೆಳೆದು ಬಂದ ರೋಗಿಗಳ ಮನೌಷಧಶಾಸ್ತ್ರದಿಂದ ಬಲು ಒತ್ತಾಸೆ ಸಿಕ್ಕಿತು. ಉಳಿದೆಲ್ಲ ರೋಗಚಿಕಿತ್ಸೆಗಳೊಂದಿಗೆ ಹೋಲಿಸಿದರೆ, ಮದ್ದುಗಳು ಕರಾರುವಾಕ್ಕಾಗಿ ಅಳೆಯಬಲ್ಲ, ಗೊತ್ತಾದ ಪ್ರಮಾಣಗಳಲ್ಲಿ ರೋಗಿಗೆ ಕೊಡಬಲ್ಲ ವಸ್ತುಗಳು. ಆದರೆ ಮನೋರೋಗಚಿಕಿತ್ಸೆ ಸೊಕ್ಕೆ (shock) ರೋಗಚಿಕಿತ್ಸೆ, ಶಸ್ತ್ರಕ್ರಿಯೆಗಳನ್ನು ಹೀಗೆ ಖಚಿತವಾಗಿ ಅಳೆವಂತಿಲ್ಲ. ಹಾಗಾದರೂ, ಆಸ್ಪತ್ರೆ ರೋಗಿಗಳ ಮನೋರೋಗದ ಆಳವನ್ನು ಅಳೆವ ವ್ಯಕ್ತಿತ್ವದ ಮಟ್ಟಮಾನನ ಅಳೆಪಟ್ಟಿಗಳು ಅಮೆರಿಕದ ಮಿನ್ನಿಸೋಟದಲ್ಲಿ ತಯಾರಾಗಿವೆ. ಮದ್ದುಗಳ ಸೇವನೆ ಆದ ಮೇಲೆ ಮನಗುಂದುವಿಕೆಯನ್ನು ಅಳೆವ ವಿಧಾನಗಳಿವೆ.

ಮನೋರೋಗಗಳ ಚಿಕಿತ್ಸೆಗೆ ಮದ್ದುಗಳು ದೊರೆತಾಗಿನಿಂದ ವಿಜ್ಞಾನ ರೀತಿಯ ವಿಧಾನಗಳನ್ನೂ, ಸರಿನೋಡಲು ಹೊಂದಿಕೆಯ ಪ್ರಮಾಣಗಳನ್ನೂ ಪ್ರಯೋಗಕರ್ತರು ಬಳಸುವಂತಾಗುತ್ತಿದೆ. ಒಂದೇ ತೆರನ ಮಟ್ಟದ ರೋಗವಿರುವ ತಂಡಗಳಿಗೆ ಬೇರೆ ಬೇರೆ ಮದ್ದುಗಳನ್ನೋ, ಬೇರಾವ ಗುಣವೂ ತೋರದೆ ಕೇವಲ ರೋಗಿಗೆ ಮದ್ದು ಸೇವಿಸಿದೆನೆಂಬ ಸಮಾಧಾನ ಕೊಡುವ, ತಣಿಕೆಗಳನ್ನೋ (placebos) ಕೊಟ್ಟು ನೋಡುವರು. ಹೀಗೆ ಎಲ್ಲರಿಗೂ ಎಲ್ಲ ಮದ್ದುಗಳನ್ನು ನೀಡುವಂತೆ ಬೇರೆ ಬೇರೆ ತಂಡಗಳಿಗೆ ಅದಲುಬದಲು ಮಾಡುವುದುಂಟು. ಇವರೊಂದಿಗೆ ಹೋಲಿಸಲೂ, ಮನೋರೋಗ ತಂತಾನಾಗಿ ಶಮನವಾಗುವುದನ್ನೂ ಲೆಕ್ಕಕ್ಕೆ ತರಲೂ ಕೆಲವು ರೋಗಿಗಳಿಗೆ ಇವಾವ

ಮದ್ದುಗಳನ್ನೂ ಕೊಡದೆ ಎಂದಿನಂತೆ ಇಟ್ಟಿರಬೇಕು. ಆದರೆ ಹೀಗೆ ಮದ್ದುಕೊಡದೆ ಇಡಬಹುದಾದ ರೋಗಿಗಳು ಸಿಗುವುದೇ ಕಷ್ಟ.

ಪ್ರಯೋಗಗಳಲ್ಲಿ ಒಂದು ಮದ್ದನ್ನು ಕೊಟ್ಟರೆ ಏನಾಗಬಹುದೆಂದು ಮೊದಲೇ ಆಸೆ, ಭಾವನೆಗಳನ್ನು ಅದೇ ಬೇಕಾಗೋ ಇಲ್ಲದೆಯೋ ಇಟ್ಟುಕೊಂಡಿರುವ ಪ್ರಯೋಗಕರ್ತ ರಿಂದ ರೋಗಿಗಳಿಂದ ನಿಜಸಂಗತಿ ಹೊರಬೀಳಲಾರದು. ಬಹಳ ಮಟ್ಟಿಗೆ, ವಶೀಕರಣ ನಿದ್ದೆಯಲ್ಲಿ (hypnosis) ಇದ್ದ ಹಾಗೆ ಇದನ್ನು ಇನ್ನೊಬ್ಬರು ನೀಡುವ ಭಾವಸೂಚನೆ ಇಲ್ಲವೇ ತಂತಾನೇ ಮಾಡಿಕೊಳ್ಳುವ ಭಾವಸೂಚನೆ ಎನ್ನಬಹುದು. ಸಾಮಾನ್ಯ ವಾಗಿ ತಣಿಕದ ಮರುವರ್ತನೆ ಎನ್ನುವುದನ್ನು ಮೊದಲೇ ಕಲ್ಪಿಸಿಕೊಂಡ ಭಾವನೆಯು ಇಲ್ಲವೇ ಯಾವುದೋ ಒಂದು ಮಾತ್ರೆಯನ್ನೋ ಚುಚ್ಚುಮದ್ದನ್ನೋ ಸೇವಿಸಿದರೆ ಹೀಗೀಗೇ ಆಗುವುದೆಂಬ ಇನ್ನೊಬ್ಬರ ಸೂಚನೆಯ ಪರಿಣಾಮ ಎನ್ನಬಹುದು. ಕೆಲವು ಮಂದಿಗೆ ಇಂತಹ ಸೂಚನೆಗಳನ್ನು ಕೊಟ್ಟರೆ ಬಲು ಬೇಗನೆ ಹಿಡಿವುದೆಂಬ ಅಭಿಪ್ರಾ ಯವೂ ಇದೆ. ಮದ್ದಿನ ಪರಿಣಾಮ ರೋಗಿಗೆ ಕೊಡುವ ಸೂಚನೆಗಳಿಂದಲೂ ಹೆಚ್ಚು ಕಡಮೆ ಆಗುವುದು ಎನ್ನುವುದರಲ್ಲಿ ಅನುಮಾನವೇ ಇಲ್ಲ. ಹೀಗೆ, ಅದಕ್ಕೆ ತಕ್ಕ ಭಾವಚೋದಕ ಸೂಚನೆಗಳನ್ನು ಕೊಟ್ಟದ್ದೇ ಆದರೆ, ಕೆಲವರನ್ನು ಆಂಫಿಟಮೀನ್ ಶಮನಗೊಳಿಸಿ ಮಂಕಾಗಿಸಬಹುದು, ಇನ್ನು ಹಲವರನ್ನು ಬಾರ್ಬಿಟುರೇಟುಗಳು ಎಚ್ಚ ರಿಸಿ ಚೋದಿಸಬಹುದು. ಒಳ್ಳೆಯದೇ ಆಗುವುದೆಂಬ ಹೇರಾಸೆ ಉಳ್ಳವರಿಗೆ ಕೆಲವು ಮದ್ದುಗಳಿಂದ, ಅಷ್ಟೇ ಏನು ಕೆಲಸಕ್ಕೆ ಬಾರದ ಮದ್ದುಕೊಟ್ಟರೂ, ಆಶಿಸಿದ ಪರಿಣಾ ಮವೇ ಕಾಣಬಹುದು. ಇಂತಹ ಆಸೆ ಕಲ್ಪನೆಯ ಪರಿಣಾಮವನ್ನು ಮದ್ದಿನ ನಿಜ ವಾದ ಫಲವನ್ನು ಕಂಡುಕೊಳ್ಳುವಾಗ ಇಕ್ಕಣ್ಣು ಕಟ್ಟು (double blind) ವಿಧಾನ ಗಳು ಎಲ್ಲೆಲ್ಲೂ ಬಳಕೆಯಲ್ಲಿವೆ. ಈ ವಿಧಾನದಲ್ಲಿ ರೋಗಿಗಾಗಲಿ, ವೈದ್ಯನಿಗಾಗಲಿ, ಯಾವ ಮದ್ದು ಇರುವುದೆಂದು ಗೊತ್ತಿರದು. ಎಲ್ಲ ಮುಗಿವ ತನಕ, ಪ್ರಯೋಗದಲ್ಲಿ ಸೇರಿಲ್ಲದ ಒಬ್ಬನಿಗೆ ಮಾತ್ರ ತಿಳಿದಿರುತ್ತದೆ. ಆದರೆ, ಅನೇಕ ವೇಳೆ, ತಲೆನೋವು, ವಾಂತಿ, ಮಲಮೂತ್ರ ಕಳೆತ ಮತ್ತಿತರ ಬಲವಾದ ಅಡ್ಡ ಪರಿಣಾಮಗಳನ್ನು ತೋರು ವುದರ ಮೂಲಕ ಮದ್ದುಗಳ ಗುರುತು, ಪತ್ತೆ ಗೊತ್ತಾಗಿಬಿಡಬಹುದು. ಇವೇ ಅಡ್ಡ ಪರಿಣಾಮಗಳನ್ನು ತೋರುವ ತಣಿಕಗಳನ್ನು ಕೊಟ್ಟರೆ ಈ ಅನಾನುಕೂಲವನ್ನು ಹೋಗಲಾಡಿಸಬಹುದು.

## ಮನೌಷಧ ಶಾಸ್ತ್ರದಲ್ಲಿ ಕ್ರಾಂತಿ

ಮಾನವನ ಮನದ ಎಲ್ಲ ತರದ ಚೋದನೆ, ಉದ್ವೇಗಗಳನ್ನು ಅದುಮಿಡುವಂತೆ ಮದ್ದುಗಳನ್ನು ಚೆಲ್ಲಿ ಹಂಚುವುದು ಸರಿಯೇ ಎಂದು ಇಂದಿನ ಸಮಾಜದ ಆಗುಹೋಗು ಗಳನ್ನು ಚಿಂತಿಸುವ ಹಲವರು ಕೇಳುತ್ತಿರುವರು. ತಾವು ತಾಪತ್ರಯಗಳನ್ನು ಎದುರಿಸು

ವುದರಲ್ಲಿ ಉತ್ಸಾಹ, ಹುಮ್ಮಸ್ಸು, ಕೆಚ್ಚುಗಳನ್ನು ನಂದಿಸಿದ ಹಾಗಾಗವೇ ಎನ್ನುವರು. ಇಲ್ಲಿನ ತನಕ ಎಂತಹವನರೂ ಎದುರಿಸಲೇಬೇಕಾಗಿದ್ದ ಅಳಲು, ಕಷ್ಟಕಾರ್ಪಣ್ಯ ನಿರಾಸೆಗಳನ್ನು ಎದುರಿಸಲಾರದಾದ ಜನರ ಗತಿ ಮುಂದೆ ಏನಾಗಬಹುದೆಂದು ಕೇಳುವವರಿದ್ದಾರೆ. ತಾಪತ್ರಯಗಳೇ ಇಲ್ಲವಾಗಿಸುವಂತೆ ಕೋರುವ ಬೇಡಿಕೆಗಳಿಂದ, ಕಷ್ಟನಷ್ಟ, ನೋವು ನರಳಿಕೆಗಳನ್ನು ಎದುರಿಸುವ ಬಲವೇ ಕುಗ್ಗಿಸಿದಂತಾಗದೆ? ಉದ್ವೇಗ ಶಮನಕ್ಕಾಗಿ ಇಂತಹ ಮದ್ದುಗಳನ್ನು ತಮ್ಮ ಹೆತ್ತವರೇ ಸೇವಿಸುತ್ತಿರುವಾಗ ಹೆರಾಯ್ನ್, ಆಂಫಿಟಮೀನ್, ಎಲ್ಲೆಸ್ಡಿಗಳ ಸೇವನೆಯನ್ನು ಖಂಡಿಸಿ, ಇವನ್ನು ಸೇವಿಸುವವರನ್ನು ಕಾಯಿದೆಗಳಿಗೆ ಗುರಿಪಡಿಸುವುದನ್ನು ನೋಡುತ್ತಿರುವ ಇಂದಿನ ಯುವಕರು ಅವರನ್ನು ಮೋಸಗಾರರು ಎನ್ನದಿರುವರೆ ?

ಇವೆಲ್ಲ ಟೀಕೆಗಳಿಗೂ ಸರಿಯಾದ ಉತ್ತರಗಳನ್ನು ಇನ್ನೂ ಯಾರೂ ಕೊಡಲಾರರು. ತೀರ ಮಂಕು ಬಡಿದ ರೋಗಿಗಳು ಆತ್ಮಹತ್ಯೆ ಮಾಡಿಕೊಳ್ಳುವರು. ಇಲ್ಲವಾದರೆ, ಏನಾದರೂ ತೀರ್ಮಾನಿಸುವ, ಹೊಸ ಯೋಜನೆ ಕಲ್ಪನೆಗಳನ್ನು ನೀಡುವುದರಲ್ಲಿ ಕೈಲಾಗದವರಾಗುತ್ತಾರೆ. ತೀರ ಮಂಕು ಬಡಿದ ಯಾವನೇ ಆಗಲಿ ಒಂದು ಪುಸ್ತಕ ಬರೆಯಲಾರ, ವಿಜ್ಞಾನಕ ಯೋಜನೆ ನೀಡಲಾರ, ಕೊನೆಗೆ ತನ್ನ ವಿಚಾರಗಳನ್ನೇ ಬಗೆ ಹರಿಸಲಾರ. ಆದರೆ ಮದ್ದುಗಳ ಚಿಕಿತ್ಸೆ ಇಂತಹವರಲ್ಲಿ ಅನೇಕರಿಗೆ ನೆರವಾಗುತ್ತದೆ. ಎಲ್ಲೋ ಕೊಂಚವಾಗಿ ಮನಸ್ಸು ಕುಂದಿದ್ದರೆ, ತುಸು ಕಾಲದ್ದಾಗಿದ್ದರೆ, ಜವಾಬ್ದಾರಿ ವೈದ್ಯ ಮದ್ದಿಗಿಂತಲೂ ಮನೋಚಿಕಿತ್ಸೆಯನ್ನೇ ನೀಡುತ್ತಾನೆ. ಕೊಂಚವೇ ಕಳವಳ ಇದ್ದಲ್ಲಿ ಇಕ್ಕಟ್ಟಿನ ಸಂದರ್ಭ ಒದಗಿದರೆ, ಅವರ ಕೆಲಸ ಚುರುಕಾಗುವುದಾದರೂ, ಅದೇ ವಿಪರೀತವಾಗಿದ್ದಲ್ಲಿ ಎಡವಟ್ಟಾಗುತ್ತದೆ. ಇತ್ತೀಚಿನ ಒಂದು ಸಮೀಕ್ಷೆಯಂತೆ, ಎಳೆತನದಲ್ಲಿ ಕಳವಳ ನರಬೇನೆ, ಮಂಕುತನದ ಕಾಯಿಲೆಗಳಿದ್ದರೆ, ವಯಸ್ಸಾದಂತೆಲ್ಲ ಮದ್ಯಪಾನ, ನಿದ್ದೆ ಮಾತ್ರೆಗಳ (ಬಾರ್ಬಿಟುರೇಟುಗಳ) ದುಶ್ಚಾಳಿ ಹತ್ತಿಕೊಳ್ಳುತ್ತವೆ. ಈ ಕಾಯಿಲೆಯ ಮೊಳಕೆಯಲ್ಲೇ ಇನ್ನೂ ಒಳ್ಳೆಯ ಸರಿಯಾದ ಮದ್ದುಗಳ ಚಿಕಿತ್ಸೆಯಿಂದ ಇದನ್ನು ತಡೆಯಬಹುದು. ಕಳವಳವನ್ನು ತಗ್ಗಿಸಲು ಹೊಸದಾಗಿ ಬಂದಿರುವ ಮದ್ದುಗಳು ಬಾರ್ಬಿಟುರೇಟುಗಳಂತೆ ಚಾಳಿ ಹತ್ತಿಸವು. ಅಲ್ಲದೆ ಮನೋಚಿಕಿತ್ಸೆಗಾಗಿ ಕೊಡುವ ಮದ್ದುಗಳಿಂದ ರೋಗಿಯ ಚಚ್ಚರ, ಚಟುವಟಿಕೆಗಳು ಹೆಚ್ಚುತ್ತವೇ ಹೊರತು ಇಳಿಯವು. ಮನೋರೋಗಗಳು, ತನ್ನಿಕೆಯ ವಿಚಿತ್ರಗಳು, ಹೊಂದಾವಣೆಯ ಕೊಂಕುಗಳೂ ಜನ ಸಾಮಾನ್ಯರಲ್ಲಿ ಎಷ್ಟು ಅಪಾರವಾಗಿರುವುದೆಂದು ಬಹು ಮಂದಿ ವೈದ್ಯರ ಅರಿವಿಗೆ ಬಂದುದು ಮನೌಷಧ ಶಾಸ್ತ್ರಕ (ಸೈಕೊ ಫಾರ್ಮಕಾಲಾಜಿಕಲ್) ಕ್ರಾಂತಿಯ ಮುಖ್ಯ ಪರಿಣಾಮಗಳಲ್ಲಿ ಒಂದು. ತಿಕ್ಕಲಾಗಿ ವರ್ತಿಸುವವನನ್ನೂ ಇದ್ದಕ್ಕಿದ್ದ ಹಾಗೆ ಹುಚ್ಚೇಗುವವನನ್ನೂ ಯಾವ ಸಮಾಜವೂ ಸರಿಗಾಣುವುದಿಲ್ಲ. ಈ ವರ್ತನೆಯಲ್ಲಿ ಕೊಂಚವಾದರೂ ಸಡಿಲವಾಗಿದ್ದರೆ, ಅಂಥದ

ರೋಗಿಗಳನ್ನು ವೈದ್ಯರು ಇನ್ನು ಕರುಣೆ, ತಿಳಿವಳಿಕೆ, ಅರಿವುಗಳಿಂದ ಕಂಡರೆ, ಈ ಮನೋರೋಗ ಚಿಕಿತ್ಸೆಯಿಂದ ಅನುಕೂಲಗಳನ್ನು ಪಡೆದು, ಅವರು ಹುಚ್ಚರೆಲ್ಲ ಕೇವಲ ಮನೋರೋಗಿಗಳು ಎನಿಸಿಕೊಂಡಿರುವುದೇ ಕಾರಣ.

ಇಷ್ಟಾದರೂ, ಎರಡು ದಶಕಗಳ ಹಿಂದೆ, ಮದ್ದೇ ಇಲ್ಲವೆಂದಿದ್ದ ಕೆಲವು ಉದ್ವೇಗದ ಕಾಯಿಲೆಗಳಿಗೆ ವೈದ್ಯಚಿಕಿತ್ಸೆ ಈಗ ದೊರೆವುದನ್ನು ಮನಗಂಡ ಕೆಲವರು ಕುಟುಂಬ ವೈದ್ಯರೂ ಜನಸಾಮಾನ್ಯರೂ ತನ್ನಿಕೆಯ ಏಳುಬೀಳುಗಳು, ಕೆರಳಿಕೆ, ಹುಚ್ಚೇಗು ಆತ್ಮಹತ್ಯೆ ಮನೋಭಾವ, ಅಮಲೇರಿಕೆ, ಅಪರಾಧ ಇವನ್ನೆಲ್ಲ ಅನೀತಿಯೆಂದು ಭಾವಿಸದೆ ನ್ಯಾಯವಿಮರ್ಶಕ ದಿಟ್ಟಿಯಿಂದ ಕಾಣುತ್ತಿರುವರು. ಹೆತ್ತವರ ಜಗಳ, ಬಡತನ, ದಿಕ್ಕಿಲ್ಲದಿಕೆ, ಹೆತ್ತವರಿಂದ ಅಗಲಿಕೆ, ಇವಕ್ಕೆ ಬೆಳೆವ ವಯಸ್ಸಿನಲ್ಲಿ ಸಿಕ್ಕಿ ಬೀಳುವುದೂ ಮನೋರೋಗಕ್ಕೆ ಕಾರಣವಾಗಬಹುದೆಂದು ಕೇವಲ ಮನೋರೋಗ ಚಿಕಿತ್ಸಕರೇ ಅಲ್ಲದೆ ಹಲವು ಶಾಖೆಗಳ ವೈದ್ಯರೂ ಚೆನ್ನಾಗಿ ಅರಿತುಕೊಳ್ಳುತ್ತಿದ್ದಾರೆ. ಇಂತಹ ತಾಪತ್ರಯಗಳೂ ತಮ್ಮ ರೋಗಿಗಳ ಆರೈಕೆಯಲ್ಲಿ ಮುಖ್ಯ ಭಾಗವೆಂದು ಕುಟುಂಬದ ವೈದ್ಯರೂ ಒಪ್ಪಿಕೊಳ್ಳುತ್ತಿರುವರು. ಮನಸ್ಸಿಗೆ ಹತ್ತಿದ ಕಾಯಿಲೆಯ ಚಿಕಿತ್ಸಕ ವೈದ್ಯರ ತಲೆ ತಿನ್ನುತ್ತಿರುವ ಹಲವಾರು ಸಮಸ್ಯೆಗಳು ಜನಸಾಮಾನ್ಯರ ತಿಳಿವಳಿಕೆಗೂ ಬರುತ್ತಿವೆ. ಈ ವಿಚಾರದಲ್ಲಿ ಜನರಲ್ಲಿ ನಡೆಯುತ್ತಿರುವ ಆರೋಗ್ಯ ಪ್ರಚಾರ ಕೆಲವೇಳೆ ವಿಪರೀತ ಎನಿಸಿದರೂ ಜನರು ಅವುಗಳಿಂದ ಎಷ್ಟೋ ಚೆನ್ನಾಗಿ ಎಚ್ಚತ್ತುಕೊಳ್ಳುತ್ತಿರುವುದಂತೂ ಖಂಡಿತ.

ಒಟ್ಟಿನಲ್ಲಿ, ಮನೌಷಧಶಾಸ್ತ್ರಕ ಕ್ರಾಂತಿಯ ನೇರವಲ್ಲದ, ಎದುರು ನೋಡದಿದ್ದ ಪರಿಣಾಮಗಳಂತೂ ಬಲು ಮುಖ್ಯವಾದವು. ಮನೋರೋಗ ಚಿಕಿತ್ಸೆಗಾಗಿ ಬಂದಿರುವ ಮದ್ದುಗಳ ಮುನ್ನಡೆಯಿಂದಾಗಿ ಎಷ್ಟೋ ಬಗೆಯ ಮನೋರೋಗಗಳು ವೈದ್ಯರ ಆರೈಕೆ, ಪಾಲನೆಗಳಿಗೆ ಒಳಗಾಗಿ ಹತೋಟಿಗೆ ಸಿಕ್ಕಿವೆ, ಸಿಗುತ್ತಿವೆ. ಮನೋರೋಗದ ಆಸ್ಪತ್ರೆ ಚಿಕಿತ್ಸಾಲಯಗಳಿಗೆ ರೋಗಿಗಳು ಹೆಚ್ಚೆಚ್ಚಾಗಿ ನುಗ್ಗುತ್ತಿರುವುದಕ್ಕೂ ಬಹುಮಟ್ಟಿಗೆ ಇದೇ ಕಾರಣ. ಇವರಲ್ಲಿ ಕೆಲವರಿಗಂತೂ ಮದ್ದುಗಳು ಅಪಾರ ನೆರವು ನೀಡಿವೆ, ಉಳಿದವರಿಗೆ ಅಷ್ಟು ನೆರವು ದಕ್ಕಿಲ್ಲ. ಆದರೆ ಅನೇಕ ವೈದ್ಯ ಶಾಖೆಗಳಲ್ಲಿ ಎಲ್ಲೆಲ್ಲೂ ತಲೆಹಾಕುತ್ತಿದ್ದರೂ ಇಲ್ಲಿನ ತನಕ ಯಾರೂ ಅಷ್ಟಾಗಿ ಲೆಕ್ಕಕ್ಕೆ ತೆಗೆದುಕೊಳ್ಳದಿದ್ದ ಮನೋರೋಗಗಳಿಂದ ನರಳುತ್ತಿದ್ದ ಜನತಂಡಗಳನ್ನು ಈಗ ವೈದ್ಯರು ಗಮನಿಸುತ್ತಿರುವುದೇ ಒಂದು ದೊಡ್ಡ ವಿಷಯ. ಎಷ್ಟೋ ಮಂದಿಗೆ ಬರೀ ಮದ್ದುಗಳನ್ನು ಕೊಟ್ಟರೆ ಸಾಕಾಗದು. ಅವರ ಮನೋರೋಗ ಲಕ್ಷಣಗಳು ಕೇವಲ ಮೇಲೆ ತೇಲುವ ನೊರೆ ಇದ ಹಾಗೆ. ಆದರೆ, ಅದರ ಆಳತಳದಲ್ಲಿರುವ ಸಿಕ್ಕು ತೊಡಕುಗಳಂತೂ ತೀರ ಗಹನ. ಇವುಗಳ ಪರಿಹಾರಕ್ಕಾಗಿ ವೈದ್ಯಶಾಸ್ತ್ರದ ಎಲ್ಲ ಶಾಖೆಗಳವರೂ ಬಲು ದುಡಿಯಬೇಕು. ಲಕ್ಷಣಗಳನ್ನಾದರೂ ಪೂರ್ತಿಯಾಗಿ ಚೆನ್ನಾಗಿ ಅಣಗಿಸುವಂತಹ ಮದ್ದುಗಳನ್ನು ಮೊದಲು ಕಂಡುಕೊಳ್ಳಬೇಕು.



# ದಾಸರ ದಿವ್ಯಾನುಭವ

**ಜಿ. ವರದರಾಜರಾವ್.**

ಹರಿದಾಸರು ರಚಿಸಿರುವ ಒಂದೊಂದು ಕೃತಿಯೂ ಅವರ ಆಧ್ಯಾತ್ಮಿಕ ಸಾಧನೆಯ ಒಂದೊಂದು ಮೆಟ್ಟಲು ಎನ್ನಬಹುದು. ಅವರ ಜೀವನಾನುಭವವೇ ಹಾಡಾಗಿ ಹೊರ ಹೊಮ್ಮುವುದರಿಂದ ಅವುಗಳು ಅವರ ಆತ್ಮಗೀತಗಳು ಎಂಬ ಖ್ಯಾತಿಗೂ ಪಾತ್ರವಾಗಿವೆ. ಪ್ರತಿಯೊಬ್ಬ ಹರಿದಾಸರ ಜೀವನದಲ್ಲಿಯೂ ಎರಡು ಪ್ರಧಾನ ವಿಭಾಗಗಳು ವೇದ್ಯವಾಗುತ್ತವೆ. ಮೊದಲನೆಯದಾಗಿ ಅವರು ಎಲ್ಲರಂತೆಯೇ ಐಹಿಕದ ಆಸೆ ಆಕಾಂಕ್ಷೆಗಳಿಗೆ ಸಿಕ್ಕಿಬಿದ್ದು ಯಾವುದೋ ಒಂದು ಅಮೃತ ಘಳಿಗೆಯಲ್ಲಿ ತಮ್ಮ ತಪ್ಪನ್ನು ಅರಿತು, ಜಾಗೃತಗೊಂಡು, ಆ ಬಳಿಕ ಪರಮಾತ್ಮನ ಅನುಗ್ರಹಕ್ಕಾಗಿ ಅನುಸಂಧಾನ ಕೈಗೊಳ್ಳುವ ವಿವಿಧ ಪರಿಗಳು ತುಂಬ ಮನೋಹರವಾಗಿರುತ್ತವೆ. ಅವರ ಎದೆಯಾಳದಲ್ಲಿನ ಒಳತೋಟಿ, ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಸಂತತವೂ ನಡೆಸುವ ಅವರ ಸಾಧನೆ, ಆಸೆ ನಿರಾಸೆಗಳ ಉಬ್ಬರವಿಳಿತಗಳು, ಪಶ್ಚಾತ್ತಾಪ ಪರಂಪರೆ, ಕಟ್ಟಕಡೆಗೆ ಪರಮಾತ್ಮನಲ್ಲಿ ಶರಣಾಗತಿ ಇವೇ ಮೊದಲಾದ ಹಲವಾರು ಅನುಭವ ತರಂಗಗಳನ್ನು ದಾಸರ ಕೀರ್ತನೆಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ತಮ್ಮ ಇಷ್ಟದೇವತೆ ಮನಸ್ಸಿನಲ್ಲಿ ಮೈದೋರಿ, ಕನಸಿನಲ್ಲಿ ಸುಳಿದು, ಕಡೆಗೆ ಕಣ್ಣೆದುರು ಕಂಡುಬರಲು ಅವರಿಗೆ ಆಗುವ ಆನಂದ ಹೇಳತೀರದು. ಈ ದಿವ್ಯಾನುಭವವನ್ನು ಹರಿದಾಸ ಸಾಹಿತ್ಯದಲ್ಲಿ ಅಪರೋಕ್ಷಾನುಭವವೆಂದು ಪಾರಿಭಾಷಿಕವಾಗಿ ಕರೆದಿರುವುದುಂಟು. ಯಾವ ಒಂದು ಅನುಭವವು ಇತರರ ಪಾಲಿಗೆ ಪರೋಕ್ಷ ಮಾತ್ರವೋ ಅದು ದಿವ್ಯಜ್ಞಾನಿಗಳೂ, ಪರಮ ಭಕ್ತರೂ ಆದ ಹರಿದಾಸರಿಗೆ ಪ್ರತ್ಯಕ್ಷ ಸಿದ್ಧವಾದುದರಿಂದ ಇದಕ್ಕೆ ಅಪರೋಕ್ಷಾನುಭವವೆಂಬ ಹೆಸರು ಒಪ್ಪುವಂತಿದೆ. ಈ ಹಂತವನ್ನು ತಲುಪಿದ ಮೇಲೆ ಪ್ರತಿಯೊಬ್ಬ ಹರಿದಾಸನ ಜೀವನದಲ್ಲಿ ಎರಡನೆಯ ಪ್ರಕರಣ ಪ್ರಾರಂಭವಾದಂತೆಯೇ ಸರಿ. ವಾಸ್ತವವಾಗಿ ಈ ವಿಭಾಗವೇ ಅವರ ಬಾಳಿನ ತಿರುಳು. ಈ ಅಪರೋಕ್ಷಾನುಭವವಾದರೋ ಅವರ್ಣನೀಯ. ಆದರೆ ದೈವಾನುಗ್ರಹದಿಂದ ನಮ್ಮ ಹರಿದಾಸರಲ್ಲಿ ಕೆಲವರು ಈ ಅಪರಿಮಿತವಾದ ಆನಂದವನ್ನು ಬಹಳ ಮನೋಜ್ಞವಾಗಿ ಚಿತ್ರಿಸಿರುತ್ತಾರೆ.

ಕೆಲವು ಕೀರ್ತನೆಗಳ ಮೂಲಕ ಈ ಸುಖದ ಸ್ವರೂಪವೇನು ಎನ್ನುವುದನ್ನು ಪರಿಭಾವಿಸಲು ಸಾಧ್ಯ.

ಶ್ರೀ ವ್ಯಾಸರಾಯರು ಶ್ರೀಕೃಷ್ಣನ ಅವಿಚ್ಛಿನ್ನ ಭಕ್ತರಷ್ಟೆ. ಆತನ ದರ್ಶನ ಲಾಭಕ್ಕಾಗಿ ಅವರ ಮನಸ್ಸು ಹಗಲಿರುಳೂ ಪರಿತಪಿಸುತ್ತದೆ. ಆ ಮುದ್ದು ಕೃಷ್ಣನನ್ನು ಪರಿಪರಿಯಾಗಿ ಭಾವಿಸಿಕೊಂಡು ಅವನಿಗಾಗಿ ಹಲಬುತ್ತಾರೆ. 'ಬಾರಯ್ಯ ಎನ್ನ ಮನಮಂದಿರಕೆ ಬೇರೊಂದು ಯೋಚನೆ ಮಾಡದೆ ಸಿರಿಪತಿ' ಎಂದು ಕೇಳಿಕೊಳ್ಳುತ್ತಾರೆ. ತಮ್ಮ ಚಿತ್ತದಲ್ಲಿ ಆತನ ಚಿತ್ರ ಅಚ್ಚೊತ್ತಿದಂತಾಗಲು 'ಎಂದೆಂದೆನ್ನ ಮನದಿಂದ ಅಗಲದಿರೋ ನಂದನಂದನನೆ ಆನಂದ ಮೂರುತಿಯೆ' ಎಂದು ವಿಜ್ಞಾಪಿಸಿಕೊಳ್ಳುತ್ತಾರೆ. ಆ ಪರಮಾತ್ಮನ ಸಾನ್ನಿಧ್ಯ ಲಭಿಸಲು ಅವರಿಗಾಗುವ ಸಂತೋಷ ಮೇರೆ ಮೀರಿದುದು. 'ರಂಗಯ್ಯ ಮನೆಗೆ ಬಂದರೆ ಅಂತರಂಗದಿ ಗುಡಿಕಟ್ಟಿ ಕುಣಿವೆ ನಾ' ಎಂದು ಸಾರಿ ಹೇಳುತ್ತಾರೆ.. ಅಂತರಂಗಕ್ಕೆ ರಂಗನ ಆಗಮನವೆಂದರೆ ಅದು ಸಾಮಾನ್ಯವೇ? ಆತನಿಗಾಗಿ 'ಗುಡಿಕಟ್ಟಿ ಕುಣಿವೆ ನಾ' ಎಂಬ ಮಾತು ಬರಿಯ ಬಣ್ಣನೆಯಲ್ಲ. ಎಂಥವರಿಗಾದರೂ ಅದು ಪುಳಕವನ್ನುಂಟುಮಾಡುವಂತಹುದು. ಆ ರೋಮಾಂಚನದಲ್ಲಿ ಕುಣಿತ ಮಣಿತಗಳು ಸಹಜವಾದ ಕ್ರಿಯೆಗಳು. ಆತನನ್ನು ಸನಿಹದಲ್ಲಿ ಕಾಣುವ ದಾಸರ ಒಳಗಣ್ಣಿಗೆ ಆತನ ಒಂದೊಂದು ಅವಯವದ ಸೊಬಗೂ ಸ್ಪಷ್ಟವಾಗಿ ತೋರಿಬರುವುದು. ಅಂತರ್ವಾಣಿಯು ಸುರುದನಿ ಮಾತಿನ ಮೂಲಕ ಮಿಂಚಿ ಬೆಳಗಲಾರಂಭಿಸುವುದು. 'ಎಳೆ ತುಳಸಿ ವನಮಾಲೆಯು, ರಂಗಗೆಳೆ ನೀಲದ ಮೈಯ ಥಾಳವು, ಹೊಳೆವ ಪೋಗಳಲೊಪ್ಪೆ ಚೆಲುವನು ನಮ್ಮ ನಿಲಯಕ್ಕೆ ಬಂದ ಭಾಗ್ಯವ ನೋಡ' ಎಂದು ಮಹಿಮನ ಆಗಮನವನ್ನು ಬಾಯಿತುಂಬ ಕೊಂಡಾಡುವರು. ಅವನ ಸಂಪರ್ಕದಿಂದ ಪ್ರಕೃತಿಯ ವ್ಯಾಪಾರಗಳೆಲ್ಲವೂ ಅದ್ಭುತವಾಗಿ ಪರಿವರ್ತಿಸುವುವು. ಎಲ್ಲಿ ನೋಡಿದರೂ ಅಲ್ಲಿ ಚೈತನ್ಯ, ಶಾಂತಿ, ಕಾಂತಿ, ಸಹನೆ, ಸಮಾಧಾನಗಳು ನೆಲಸುವುವು. ಈ ಒಂದೊಂದು ಗುಣಕ್ಕೂ ಒಂದೊಂದು ಅಮೋಘವಾದ ಚಿತ್ರವನ್ನೇ ದಾಸರು ನಮ್ಮ ಮುಂದೆ ಇಟ್ಟಿರುವರು.

> ಬಾಡಿದ ಮಾವು ಪಲ್ಲವಿಸಿತು, ಹರಿ
> ನೋಡಲು ಜಗವು ಭುಲ್ಲವಿಸಿತು
> ಕೂಡಿದ ಮನದ ತಾಪಗಳೆಲ್ಲ ಎತ್ತ
> ಲೋಡಿತೊ ಹರಿ ಬಂದ ಭರದಿಂದ ನೋಡ.

ಸಮಸ್ತ ಸೃಷ್ಟಿಯೇ ಸಂತಸದ ಕಡಲಲ್ಲಿ ಮುಳುಗಿದಂತಾಯಿತು. ಕೋಪತಾಪಗಳು ದೂರ ಸರಿದವು. ಅಷ್ಟೇ ಅಲ್ಲ; ತೀಕ್ಷ್ಣತೆ ಹಾಗೂ ಕ್ರೂರತೆಗಳೂ ಸಹ ತಮ್ಮ ದುರ್ಗುಣವನ್ನು ಕಳೆದುಕೊಂಡುವೋ ಎಂಬಂತೆ 'ಬಿಸಿಲು ಬೆಳದಿಂಗಳಾ

ಯಿತು, ವಿಷ ಹೋಗಿ ಅಮೃತವಾಯಿತು, ತಾಮಸ ಹೋಗಿ ಜ್ಞಾನೋದಯವಾಯಿತು.' ಇನ್ನೂ ಒಂದು ಹೆಜ್ಜೆ ಮುಂದುವರಿದು ಶ್ರೀ ವ್ಯಾಸರಾಯರು 'ಹಾವು ನ್ಯಾವಳವಾಯಿತು, ಅಲ್ಲಿ ದಾವಾನಳ ತಂಪಾಯಿತು, ಬೇವು ಸಕ್ಕರೆ ಆಯಿತು' ಎಂದು ಆಶ್ಚರ್ಯದ ಸೌಧವನ್ನೇ ಕಟ್ಟಿ ಮೆರೆಯುವರು. ಈ ರೀತಿ ಕೇಳುವವರೂ ಚಕಿತರಾಗುವಂತೆ ಅನುಭವವನ್ನು ವ್ಯಕ್ತಪಡಿಸಬೇಕಾದರೆ ಅವರ ದಿವ್ಯಾನುಭವದ ಹಿರಿಮೆಯೇನು ಎನ್ನುವುದನ್ನು ನಾವು ಊಹಿಸಿಕೊಳ್ಳಬಹುದು. ಅದು ಅವರ ಪಾಲಿಗೆ ಸತ್ಯಸ್ಯ ಸತ್ಯ. ಏಕೆಂದರೆ, ಇನ್ನೊಂದು ಸಂದರ್ಭದಲ್ಲಿ 'ಸೇರಿದೆನು ಸೇರಿದೆನು ಜಗದೀಶನ,' ಎಂದು ಹೇಳ ತೊಡಗಿ, ತಮ್ಮ ಸಮಸ್ತ ಅವಯವಗಳೂ ಆತನ ದೇದೀಪ್ಯಮಾನವಾದ ದರ್ಶನದಿಂದ ಕೃತಾರ್ಥವಾಗುವುದೆಂದು ತಿಳಿಸಿ 'ಸಿರಿ ಕೃಷ್ಣರಾಯನ್ನ ಮನಮಂದಿರದಿ ಕಂಡೆ' ಎಂದು ದೃಢಪಡಿಸುವರು.

ಶ್ರೀ ವ್ಯಾಸರಾಯರ ಶಿಷ್ಯವರೇಣ್ಯರಾದ ವಾದಿರಾಜರು ಮತ್ತು ಪುರಂದರದಾಸರ ಅಪರೋಕ್ಷಾನುಭವವಾದರೂ ಇದಕ್ಕೆ ಹೊರತಲ್ಲ. ವಾದಿರಾಜರು 'ಕಂಡೆ ಕಂಡೆ ಕೃಷ್ಣ ನಿನ್ನಯ ದಿವ್ಯ ಮಂಗಳಮೂರ್ತಿಯ ಕಂಡು ಬದುಕಿದೆ ಇಂದು ನಾನು ಕರುಣಿಸೊ ಎನ್ನೊಡೆಯನೆ' ಎಂದು ಪ್ರೇಮಭರಿತರಾಗಿ ಹಾಡಿರುತ್ತಾರೆ. ಸಾಕ್ಷಾತ್ ಕೃಷ್ಣಮೂರ್ತಿಯೇ ಅವರ ಎದುರುಬಂದು ನಿಂತಿರಲು ಆತನ ಸೊಬಗೆಲ್ಲವನ್ನೂ ಸೂರೆಗೊಳ್ಳುವಂತೆ ಚಿತ್ರಿಸಿರುತ್ತಾರೆ. ಈ ಮಹದಾನಂದದಿಂದ ಅವರು 'ಇನ್ನು ಎನ್ನ ಬಂಧ ತೀರಿತು, ಇನ್ನು ಕ್ಲೇಶವು ಹೋಯಿತು, ಇನ್ನು ಅನ್ಯರ ಭಜಿಸಲ್ಯಾಕೆ ಮನ್ನಿಸೋ ಹಯವದನನೆ' ಎಂದು ತಮ್ಮ ಬದುಕಿನ ಸಾರ್ಥಕ್ಯವನ್ನು ಘೋಷಿಸುವರು. ಭಕ್ತರಿಗೆ ಇದೇ ನಿಜವಾದ ಬದುಕು. ಆದ್ದರಿಂದಲೇ ಪಲ್ಲವಿಯಲ್ಲಿ ದಾಸರು 'ಕಂಡು ಬದುಕಿದೆ ಇಂದು ನಾನು' ಎಂದು ಸ್ಪಷ್ಟಪಡಿಸುವರು. ವಾದಿರಾಜರ ಈ ದಿವ್ಯಾನುಭವಕ್ಕೆ ಇನ್ನೊಂದು ಮುಖವೂ ಉಂಟು. ಅವರು ಹಯವದನನ ಉಪಾಸಕರಾದುದರಿಂದ ಅವರಿಗೆ ಪರಮಾತ್ಮನು ಆ ರೂಪದಲ್ಲಿಯೇ ಕಾಣಿಸಿಕೊಂಡಂತೆಯೂ ವ್ಯಕ್ತವಾಗುತ್ತದೆ. ಆ ಅಸಾಮಾನ್ಯ ಅಶ್ವದ ಚಿತ್ರ ಇಂತು ಸಾಗುತ್ತದೆ.

ಕುದುರೆ ಬಂದಿದೆ ಚೆಲ್ವ ಕುದುರೆ ಬಂದಿದೆ
ವಾದಿರಾಜಗೊಲಿದು ಬಂದು ಸ್ವಾದಿಪುರದಲ್ಲಿ ನಿಂದ
ಮುಂಗಾಲು ಕೆದರಿ ಕುಣಿವ ಕುದುರೆ
ಹಿಂಗಾಲಲಸುರರ ಒದೆವ ಕುದುರೆ

ರಂಗನೆಂದರೆ ಸಲಹೊ ಕುದುರೆ
ತುಂಗ ಹಯವದನ್ನ ಕುದುರೆ

ಹಲ್ಲಣದೊಳಗೆ ನಿಲ್ಲದು ಕುದುರೆ
ಬೆಲ್ಲ ಕಡಲೆ ಮೆಲ್ವ ಕುದುರೆ
ಪುಲ್ಲಭವನಿಗೋಡಿದ ಕುದುರೆ
ಚೆಲ್ವ ಹಯವದನ್ನ ಕುದುರೆ

ಸುತ್ತುಮುತ್ತಲಾಡುವ ಕುದುರೆ
ಮತ್ತ ವಾದಿಯ ಗೆಲ್ವ ಕುದುರೆ
ಶತ್ರುಗಳೆಲ್ಲರ ಬಡಿವ ಕುದುರೆ
ತಪ್ಪ ಹಯವದನ್ನ ಕುದುರೆ

ಮೂರೇ ಮೂರು ನುಡಿಗಳಲ್ಲಿ ಈ ಅಸದೃಶವಾದ ಕುದುರೆಯ ಅಲೌಕಿಕ ಲಕ್ಷಣಗಳನ್ನೆಲ್ಲ ಅಡಗಿಸಿಟ್ಟಿರುವರು. ಅದು ಹುರುಳಿಯನ್ನು ತಿಂದು ಬೆಳೆವ ಕುದುರೆಯಲ್ಲ; ಬೆಲ್ಲ ಕಡಲೆಗಳನ್ನು ಮಾತ್ರವೇ ಸವಿನೋಡಿದ ಕುದುರೆ. ಅದರ ಮಹತ್ವವೆಂದರೆ, ಅಸುರರ ಸಂಹಾರ, ಮತ್ತು ವಾದಿಗಳ ಗರ್ವಭಂಗ. ಅದಕ್ಕೆ ಹಲ್ಲಣದ ನಿರ್ಬಂಧವಿಲ್ಲ. ರಂಗನ ಹೆಸರು ಹೇಳಿದವರನ್ನು ತಪ್ಪದೆ ಸಲಹುವುದು. ತಪ್ಪನ್ನೂ ಅದು ಬಲ್ಲುದು. ಈ ಅನುಭವ ವಾದಿರಾಜರಿಗೇ ವಿಶಿಷ್ಟವಾದುದು.

ಪುರಂದರದಾಸರಂತೂ ಈ ಅಲೌಕಿಕವಾದ ಅನುಭವವನ್ನು ಎಷ್ಟುಬಾರಿ, ಎಷ್ಟು ತೆರನಾಗಿ ಪಡೆದರೋ ಏನೊ! ಹಲವಾರು ಕೀರ್ತನೆಗಳಲ್ಲಿ ಈ ಭಾವ ಪೂರ್ಣವಾದ ಸನ್ನಿವೇಶವನ್ನು ಮುಕ್ತಮನಸ್ಸಿನಿಂದ ಚಿತ್ರಿಸಿರುತ್ತಾರೆ. 'ಕಂಡೆ ನಾ ಕನಸಿನಲಿ ಗೋವಿಂದನ' ಎಂದು ಒಮ್ಮೆ ಆ ಸುಂದರ ಸ್ವಪ್ನವನ್ನು ಸ್ಮರಿಸಿಕೊಂಡು ಗೋಪಾಲ ಕೃಷ್ಣನ ದಿವ್ಯಮೂರ್ತಿಯನ್ನು ಆಮೂಲಾಗ್ರವಾಗಿ ವರ್ಣಿಸುವರು. ಆತನು ನೆರವೇರಿಸಿದ ಕಾಳಿಂಗ ಮರ್ದನ, ಉಟ್ಟ ಉಡುಗೆ, ತೊಟ್ಟ ತೊಡುಗೆ, ಶಂಖ, ಚಕ್ರ ಆಯುಧಗಳ ವೈಭವ, ಕಂಡಷ್ಟೂ ಮತ್ತೆ ಮತ್ತೆ ಕಾಣಬೇಕೆಂಬ ಹಂಬಲ. ಇದೇ ಮೊದಲಾದ ಭಾವ ತರಂಗಗಳು ಅವರ ಹೃದಯವನ್ನು ಮಿಡಿಯಲು, 'ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ಎಂಬ ಕೃತಕೃತ್ಯತೆಯಲ್ಲಿ, ಬಂದು ಕೀರ್ತನೆ ಕೊನೆಗೊಳ್ಳುತ್ತದೆ. 'ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದಂತಿದೆ' ಎಂಬ ಅವರ ಆತ್ಮ ವಿಶ್ವಾಸ, ಕೆಚ್ಚುಗಳು ತಲೆ ದೋರುತ್ತವೆ. ಇಂಥ ದಿವ್ಯಾನುಭವವೆಂದರೆ ದಾಸರಿಗೆ ಹೊಸದಾದ ಜನ್ಮ ಲಭಿಸಿದಂತೆ. ಆದ್ದರಿಂದ ದೈವ ಸಾಕ್ಷಾತ್ಕಾರವಾಗಲು 'ಬದುಕಿದೆನು ಬದುಕಿದೆನು ಭವ ಹಿಂಗಿತು' ಎಂದು ಹಿಗ್ಗುವರು. ಈ ವಾಕ್ಯವನ್ನು ಮೆಲುಕು ಹಾಕಿದಷ್ಟು ರುಚಿ ಹೆಚ್ಚುವುದು. ಒಂದು ಕಡೆ ಪರಮಾತ್ಮನ ಪಾದದೊಲುಮೆ ಮಾತ್ರದಿಂದಲೇ ಅವರು ಹೊಸ ಬದುಕನ್ನು ಪಡೆದರೆ, ಮತ್ತೊಂದು ಕಡೆ ಅವರ ಪೂರ್ವವಾಸನೆಗಳೆಲ್ಲ ತೊಲಗಿ, ಆ ವ್ಯರ್ಥವಾದ ಜನ್ಮವೇ ಇಂಗಿ ಹೋದಂತೆ ಅನುಭವವಾಗುವುದು. ಮೇಲು

ನೋಟಕ್ಕೆ ಈ ಪಂಕ್ತಿ ವಿರೋಧಾಭಾಸದಂತೆ ಕಂಡರೂ ಒಳ ಹೊಕ್ಕು ನೋಡಿದಾಗ ಅಪೂರ್ವವಾದ ಅನುಭವದ ಬೆಳಕು ತಾನೇ ತಾನಾಗಿ ಬೆಳಗುವುದನ್ನು ಮನಗಾಣ ಬಹುದು. ಹೊಸಬದುಕಿನ ಈ ಸೌಭಾಗ್ಯವಾದರೂ ಏನು? ಹರಿದಾಸರು ಅವರ ಬಂಧುಗಳಾದರು. ಹರಿಭಕ್ತಿ ದೃಢವಾಗಿ, ನಾಲಿಗೆಯಲ್ಲಿ ಹರಿನಾಮ ನಲಿದಾಡತೊಡ ಗಿತು. ದಾಸರು ಮುಕ್ತಿಮಾರ್ಗಕ್ಕೆ ಅರ್ಹರೆನ್ನಿಸಿದರು. ಹಿಂದಿನ ಸಂತತಿ ಉದ್ಧಾರ ವಾದುದಲ್ಲದೆ ಅವರ ಜನ್ಮ ಎಂದೆಂದಿಗೂ ಸಾರ್ಥಕವಾಯಿತು. ಈ ನಿಲುವನ್ನು ತಲು ಪಿದ ಮೇಲೆ 'ಪುರಂದರವಿಠಲನೆಂಬ ಪರದೈವ ಬಂದೆನ್ನ ಹೃದಯದಲಿ ನೆಲೆಯಾಗೆ ನಿಂತ' ಎಂದು ಅವರು ಹೇಳುವುದು ಸತ್ಯವೇ ಸರಿ. ಪುರಂದರದಾಸರ ಈ ದರ್ಶನಾನು ಭವ ಚಿರಸ್ಮರಣೀಯವಾದುದು. ಅಚ್ಯುತನ ನಾಮದ ಹುಚ್ಚು ಹಿಡಿದ ಅವರು, ಈ ಅಪರೋಕ್ಷಾನುಭವದ ತುತ್ತ ತುದಿಯನ್ನೇರಿ ಅವರ ಮಹಿಮಾತಿಶಯಗಳನ್ನು ಜಗ ತ್ತಿಗೇ ಕೇಳುವಂತೆ ಸಾರಿ ಹೇಳಿರುತ್ತಾರೆ.

ಪುರಂದರದಾಸರನ್ನು ಸ್ವಪ್ನದಲ್ಲಿ ಕಂಡು, ಅವರ ಕಿಂಕರನೆಂಬ ಕಂಕಣ ತೊಟ್ಟ ವಿಜಯ ದಾಸರು ತಮಗಾದ ಈ ಆನಂದವನ್ನು ಹೇಳುವ ವೈಖರಿಯೇ ಬೇರೆ; ವೈಭವವೇ ಬೇರೆ. 'ಆನಂದ ಆನಂದ ಮತ್ತೆ ಪರಮಾನಂದ ಆನಂದಕಂದನೊಲಿಯೆ ಏನಂದಪ್ಪ ವೇದ ವೃಂದ' ಎಂದು ಹಿಗ್ಗುವ ದಾಸರಿಗೆ ದಿವ್ಯಾನುಭವವಾಗಲು ಅವರು ಆಡುವ ನುಡಿಗಳು ಆಣಿಮುತ್ತುಗಳಂತಿವೆ. ಶ್ರೀವ್ಯಾಸ ರಾಯರು 'ರಂಗಯ್ಯ ಮನೆಗೆ ಬಂದರೆ ಅಂತ ರಂಗದಿ ಗುಡಿಕಟ್ಟಿ ಕುಣಿವೆನಾ' ಎಂದ ಬಿನ್ನೈಸಿದಂತೆ, ವಿಜಯದಾಸರು 'ಅಂತರಂಗದ ಕದವು ತೆರೆಯಿತೆಂದು, ಎಂತು ಪುಣ್ಯದ ಫಲವು ಪ್ರಾಪ್ತಿ ದೊರಕಿತೊ ಎನಗೆ' ಎಂದು ತನ್ಮಯರಾಗುವರು. ಅವರಿಗೆ ಬೀಗಮುದ್ರೆ ಹಾಕಿಲು, ಅವರ ಹೃದಯ ಮಂದಿರದಲ್ಲಿ ನಾನಾ ದುರುಳರು ಅಡಗಿಕೊಂಡು ಅವರನ್ನು ಅಜ್ಞಾನಕ್ಕೆ ಗುರಿಮಾಡಿದ್ದರು. ಈಗ ಲಾದರೋ ಅವರೆಲ್ಲರೂಪಲಾಯನ ಸೂತ್ರವನ್ನು ಹಿಡಿದರು ಭಕ್ತಿ ಕಕ್ಕಡವನ್ನು ಹೊತ್ತಿ ಸಿಕೊಂಡು ಒಳಗೆ ಹೋಗುವುದೇ ತಡ ಅವರಿಗೆ ಅಪೂರ್ವವಾದ ದೃಶ್ಯತೋರಿತು. ಎತ್ತ ತಿರುಗಿದರೂ ಅತ್ತ ಶೃಂಗಾರ ಸದನ ತಾನೇ ತಾನಾಗಿ ವಿರಾಜಿಸುತ್ತಿದೆ. ಅದು ವಿಷ್ಣುವಿನ ನೆಲೆಯೆನ್ನಿಸಿ ದೇವದೂತರು ಅತ್ತ ಇತ್ತ ಕಾವಲು ಕಾಯುತ್ತಿರುವರು. ಸಚ್ಚಿದಾ ನಂದವದನಾದ ಸ್ವಾಮಿ, ಭೂದೇವಿ ಶ್ರೀದೇವಿಯರ ಆಲಿಂಗನದಿಂದ ಆನಂದ ಪಡುತ್ತ, ಕಮಲಜಾದಿಗಳಿಂದ ಹೊಗಳಿಸಿಕೊಳ್ಳುತ್ತ ಹೃದಯ ಕಮಲದಲ್ಲಿ ಸ್ಥಿರವಾಗಿ ತೋರಿಬರುತಾನೆ. ಇಂಥ ಸಾಕ್ಷಾತ್ಕಾರದಿಂದ ವಿಜಯದಾಸರ ಬದುಕು ಸಾರ್ಥಕ ವಾಯಿತು. ''ವೈಕುಂಠವೆಂಬುದು ಅಲ್ಲೆ ಬರಿದೆ, ಲೌಕೀಕ ತೊರೆದರೆ ಇಪ್ಪೋದು ಇಲ್ಲೆ'' ಎಂದು ಘಂಟಾಘೋಷವಾಗಿ ಹೇಳಿದ ದಾಸರು, ತಮ್ಮ ಅಂತರಂಗದಲ್ಲಿಯೇ ಪರಮಾತ್ಮನ ಓಡ್ಡೋಲಗವನ್ನು ಕಾಣುವ ಈ ಮೋಲ್ಮೆ ತುಂಬ ಗಹನವಾದುದೇ ಸರಿ.

ಹರಿದಾಸರ ಜೀವನದಲ್ಲಿ ಈ ಅಮೃತ ಘಳಿಗೆಗೆ ಸಮಾನವಾದ ಸೌಭಾಗ್ಯ ಬೇರೊಂದಿಲ್ಲ. ಅವರ ಅಂತರಂಗದ ತುಮುಲವನ್ನು ಕಂಡುಕೇಳಿದ ಮೇಲೆ ಈ ಸಿದ್ಧಿಯ ನೆಲೆಯನ್ನು ನೋಡಿದಾಗ ಮಾನವನ ಬದುಕಿನ ರಹಸ್ಯವೇ ನಮಗೆ ಬಟ್ಟ ಬಯಲಾಗುವುದು. ಪಾರಮಾರ್ಥಿಕ ಪ್ರಸಂಬದಲ್ಲಿ ಸಂತತವಾದ ಸಾಧನೆಯಿಂದ ಎಂತಹ ಚಿರಂತನವಾದ ಸುಖವನ್ನು ಪಡೆಯಬಹುದೆನ್ನುವುದಕ್ಕೆ ಈ ಒಬ್ಬೊಬ್ಬ ಸಂತರೂ ಸಾಕ್ಷಿಯಂತಿದ್ದಾರೆ. ಅನುಪಮವಾದ ಈ ದಿವ್ಯಾನುಭವವನ್ನು ಕುರಿತ ಈ ಕೀರ್ತನೆಗಳು ಆಯಾ ಹರಿದಾಸರ ಹಿರಿಮೆಯನ್ನು ತಿಳಿಯಪಡಿಸುವವಲ್ಲದೆ, ಮಾನವ ಸಮುದಾಯಕ್ಕೆ ಸರ್ವದಾ ಬದುಕಿನ ಪರಮೋದ್ದೇಶವನ್ನು ತಿಳಿಯ ಹೇಳುವ ನಂದಾದೀಪಗಳಂತಿವೆ ಎನ್ನಬಹುದು.

---

# ಜೀವನದ ಮೌಲ್ಯಗಳು†

ಜಿ. ಶ್ರೀನಿವಾಸನ್

ಮೌಲ್ಯಗಳ ವಿಷಯದಲ್ಲಿ ಬಹಳ ಹಿಂದಿನ ಕಾಲದಿಂದಲೂ ಪಾಶ್ಚಾತ್ಯ ಮತ್ತು ಪೌರಾತ್ಯ ತತ್ವಶಾಸ್ತ್ರಗಳಲ್ಲಿ ವಿಶೇಷವಾದ ಚಿಂತನೆ ನಡೆದಿದೆ. ಉದಾಹರಣೆಗೆ, ಪುರಾತನ ಭಾರತೀಯ ತತ್ವಶಾಸ್ತ್ರಜ್ಞರು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಗಳೆಂಬ ಪುರಾಣಾರ್ಥಗಳನ್ನು ಕುರಿತು ಚಿಂತಿಸುವಂತೆ, ಪಾಶ್ಚಾತ್ಯ ತತ್ವಶಾಸ್ತ್ರದಲ್ಲಿ ಸುಪ್ರಸಿದ್ಧನಾದ ಪ್ಲೇಟೋ ಧರ್ಮ (Justice) ಸೌಂದರ್ಯ (Beauty) ಮೋಕ್ಷ (Immorality) ಇತ್ಯಾದಿ ಮೌಲ್ಯಗಳನ್ನು ಕುರಿತು ಜಿಜ್ಞಾಸೆಯನ್ನು ಮಾಡಿದ್ದಾನೆ. ಆದರೆ "ಮೌಲ್ಯ ಶಾಸ್ತ್ರ" ಎಂದು ಕರೆಯಿಸಿಕೊಳ್ಳಲ್ಪಡುವ ಒಂದು ವಿಶಿಷ್ಟವಾದ ಶಾಸ್ತ್ರ ಹುಟ್ಟಿದುದು ಕೇವಲ ನೂರೈವತ್ತು ವರ್ಷಗಳಿಂದೀಚೆಗೆಂದೇ ಹೇಳಬಹುದು. ಇತ್ತೀಚೆಗೆ ಜಾರ್ಜ್ ಸಂತಾಯನ, ಡಬ್ಲ್ಯು. ಎಮ್. ಅರ್ಬನ್, ಜಾನ್ ಲೇರ್ಡ್, ಜಾನ್ ಡ್ಯೂಯಿ, ಆರ್. ಬಿ. ಪೆರಿ, ಡಿ. ಹೆಚ್. ಪಾರ್ಕರ್ ಮೊದಲಾದ ತತ್ವಶಾಸ್ತ್ರಜ್ಞರು ಮೌಲ್ಯದ ಅರ್ಥ, ಉತ್ಪತ್ತಿ, ಸ್ವರೂಪ, ಮೌಲ್ಯಕ್ಕೂ ಬಾಹ್ಯವಸ್ತುವಿಗೂ ಇರುವ ಸಂಬಂಧ, ಮೌಲ್ಯಕ್ಕೂ ಮನುಷ್ಯನ ಮನಸ್ಸಿಗೂ ಇರುವ ಸಂಬಂಧ, ಇತ್ಯಾದಿ ಬೌದ್ಧಿಕ ಪ್ರಶ್ನೆಗಳನ್ನು ಕುರಿತು ಜಿಜ್ಞಾಸೆಯನ್ನು ಮಾಡಿದ್ದಾರೆ.

---

† ಮೈಸೂರು ವಿಶ್ವವಿದ್ಯಾನಿಲಯದ ರಾಷ್ಟ್ರೀಯ ಐಕ್ಯತಾ ಸಮಿತಿಯವರು 1970–71ರಲ್ಲಿ ಏರ್ಪಡಿಸಿದ್ದ "ಸಂಸ್ಕೃತಿದರ್ಶನ" ಉಪನ್ಯಾಸ ಮಾಲೆಯ ಅಂಗವಾಗಿ ಮಾಡಿದ ಉಪನ್ಯಾಸ.

ಇಲ್ಲಿ ಈ ಬೌದ್ಧಿಕ ಪ್ರಶ್ನೆಗಳನ್ನು ಕುರಿತ ವಾದವಿವಾದಗಳನ್ನು ಪರಿಶೀಲಿಸದೆ[1] ಕೇವಲ ಜೀವನದ ಕ್ರಿಯಾತ್ಮಕ ಹಾಗೂ ವಾಸ್ತವಿಕತೆಯ ದೃಷ್ಟಿಯಿಂದ ಮೌಲ್ಯಗಳ ಮಹತ್ವವನ್ನು ಪರಿಶೀಲಿಸಬಹುದು. ಮೌಲ್ಯಗಳನ್ನು ಕುರಿತ ತಾತ್ತ್ವಿಕ ಜಿಜ್ಞಾಸೆ ಕೇವಲ ಕೆಲವು ತತ್ವಶಾಸ್ತ್ರಜ್ಞರ ಹವ್ಯಾಸವೇ ಆಗಿದ್ದರೂ, ಕ್ರಿಯಾರೂಪಕವಾದ ಮೌಲ್ಯಾನ್ವೇಷಣೆ ಇಡೀ ಮಾನವಕುಲಕ್ಕೇ ಅನ್ವಯಿಸುವ ಒಂದು ಗುಣಲಕ್ಷಣವೆಂದು, ಹೇಳಬಹುದು. ಯಾಕೆಂದರೆ, ಯಾವುದಾದರೂ ಮೌಲ್ಯಕ್ಕಾಗಿ ಹೆಣಗಾಡದ ವ್ಯಕ್ತಿ ಪ್ರಪಂಚದಲ್ಲಿರಲಾರ. ಆಲೋಚಿಸಿ ನೋಡಿದರೆ, ಇದೇ ಮಾನವನ ವಿಶಿಷ್ಟಗುಣವೂ ಹೌದು; ಬೇರೆ ಪ್ರಾಣಿಗಳು ಕೇವಲ ನೈಸರ್ಗಿಕ ಪ್ರವೃತ್ತಿಯಿಂದ ಕೆಲವು ಲಕ್ಷ್ಯಗಳತ್ತ ಸಾಗಬಹುದು; ಆದರೆ ಮನುಷ್ಯನು ಮಾತ್ರ ಬುದ್ಧಿಪೂರ್ವಕವಾಗಿ ಮೌಲ್ಯವನ್ನು ಹುಡುಕುತ್ತಾನೆ; ಉತ್ಪತ್ತಿಮಾಡುತ್ತಾನೆ. ಆದ್ದರಿಂದ ಮೌಲ್ಯಾನ್ವೇಷಣೆ ಮಾನವ ಜಾತಿಗೆ ಮಾತ್ರ ಸೀಮಿತವಾದದ್ದೆಂದು ಹೇಳಬಹುದು.

ಮನುಷ್ಯ ಒಬ್ಬ ಸಂಕೀರ್ಣಜೀವಿ. ಅವನಲ್ಲಿ ಭೌತಶರೀರ, ಪ್ರಾಣ, ಮನಸ್ಸು ಇವೆಲ್ಲವೂ ಮಿಳಿತವಾಗಿವೆ ಅವನು ಸಂಘ ಜೀವಿಯೂ ಹೌದು; ಆಧ್ಯಾತ್ಮಿಕ ಜೀವಿಯೂ ಹೌದು—ಈ ಎಲ್ಲಾ ಅಂಗಗಳಿಗನುಗುಣವಾಗಿ, ತನ್ನ ಎಲ್ಲಾ ಪ್ರವೃತ್ತಿಗಳನ್ನೂ ತೃಪ್ತಿಪಡಿಸುವುದಕ್ಕಾಗಿ, ಮನುಷ್ಯನು ಅನೇಕ ಮೌಲ್ಯಗಳನ್ನು ಜೀವನದಲ್ಲಿ ಪಡೆಯಲು, ಸಾಧಿಸಲು ತೊಡಗುತ್ತಾನೆ.

ಮನುಷ್ಯನು ತನ್ನ ಪ್ರಾಣರಕ್ಷಣೆ, ಶರೀರ ಮತ್ತು ಇಂದ್ರಿಯಗಳ ತೃಪ್ತಿಗಾಗಿ ಪಡೆಯುವ ಮೌಲ್ಯಗಳನ್ನು ಭೌತ ಮೌಲ್ಯಗಳೆಂದು ಕರೆಯಬಹುದು. ಇವುಗಳ ಪೈಕಿ ಆರೋಗ್ಯ ಅತಿ ಮುಖ್ಯವಾದದ್ದು. ಆರೋಗ್ಯವೇ ಮಹಾ ಭಾಗ್ಯವೆಂಬ ಗಾದೆಯೇ ನಮ್ಮಲ್ಲಿದೆ. ಆಹಾರ, ವಸ್ತ್ರ, ವಸತಿ ಇವೆಲ್ಲವನ್ನೂ ಭೌತಮೌಲ್ಯಗಳೆಂದೇ ಕರೆಯಬಹುದು; ಇವೆಲ್ಲವೂ ಮನುಷ್ಯನು ಜೀವಂತವಾಗಿರಬೇಕಾದರೆ, ಆರೋಗ್ಯವಂತನಾಗಿರಬೇಕಾದರೆ, ಅತ್ಯಗತ್ಯವಾದ ವಸ್ತುಗಳು.

ತನ್ನಲ್ಲಿರತಕ್ಕ ಹಾಗೂ ತನಗೆ ಬೇಡವಾದ ಕೆಲವು ವಸ್ತುಗಳನ್ನು ಒಬ್ಬ ವ್ಯಕ್ತಿಯು ಬೇರೆಯವರಿಗೆ ಕೊಟ್ಟು, ಅವುಗಳಿಗೆ ಪ್ರತಿಯಾಗಿ ಅವರಿಂದ ತನಗೆ

---

[1] ಮೌಲ್ಯಗಳ ವಿಷಯದಲ್ಲಿ ಬೌದ್ಧಿಕಪ್ರಶ್ನೆಗಳನ್ನು ಕುರಿತ ವಿಮರ್ಶೆಗೆ ನೋಡಿ: ಇದೇ ಲೇಖಕರ 1) "Person and Value", THE ARYAN PARTH, April 1970, ಮತ್ತು "Choice and Value" THE ARYAN PATH, March 1968.

ಬೇಕಾದ ವಸ್ತುಗಳನ್ನು ಪಡೆಯಬಹುದು. ಈ ವ್ಯವಹಾರ ಹಣದ ಮುಖಾಂತರ ಸುಗಮವಾಗಿ ನೆರವೇರುತ್ತದೆ. ಆದ್ದರಿಂದಲೇ ಮನುಷ್ಯನ ದೈನಂದಿನ ಜೀವನದಲ್ಲಿ ಹಣಕ್ಕೆ ಮುಖ್ಯವಾದ ಸ್ಥಾನ ಲಭಿಸಿದೆ; ಅದನ್ನು ಆರ್ಥಿಕ ಮೌಲ್ಯವೆನ್ನಬಹುದು. ಹಣದಿಂದ ಜೀವನದಲ್ಲಿ ಎಲ್ಲಾ ಸುಖಗಳನ್ನೂ ಪಡೆಯಲು ಅಸಾಧ್ಯವಾದರೂ, ಅನೇಕ ವಸ್ತುಗಳನ್ನು ಪಡೆಯಬಹುದೆನ್ನುವುದೇನೊ ನಿಜ.

ಮನುಷ್ಯನ ಸಾಂಘಿಕ ಜೀವನದಲ್ಲಿ ಪರಸ್ಪರ ಸಹಕಾರದಿಂದ ಉತ್ಪನ್ನವಾಗುವ ಮೌಲ್ಯಗಳು ಸಾಮಾಜಿಕ ಮೌಲ್ಯಗಳು. ಉದಾಹರಣೆಗೆ, ಒಂದು ಸಮಾಜದಲ್ಲಿ ಇರುವ ಪಾಠಶಾಲೆಗಳು, ವಾಹನಸೌಕರ್ಯಗಳು, ಆಸ್ಪತ್ರೆಗಳು ಮುಂತಾದುವು ಒಬ್ಬ ವ್ಯಕ್ತಿಯಿಂದ ಸೃಷ್ಟಿಯಾಗುವುದಿಲ್ಲ; ಅವುಗಳು ಸಮಾಜದಲ್ಲಿ ಉತ್ಪತ್ತಿಯಾಗಬೇಕಾದರೆ, ಅಲ್ಲಿನ ವ್ಯಕ್ತಿಗಳ ಪರಸ್ಪರ ಸಹಕಾರ ಅತ್ಯಗತ್ಯ. ಈ ಎಲ್ಲಾ ಸೌಕರ್ಯಗಳನ್ನೂ ಅನುಭವಿಸುವ ಹಕ್ಕು ಆ ಸಮಾಜದಲ್ಲಿ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯದೂ ಆಗಿರುತ್ತದೆ; ಅಂತೆಯೇ ಆ ಸಮಾಜಕ್ಕೆ ಅವನು ಋಣಪನ್ನರಿತ ವ್ಯಕ್ತಿ ಸಮಾಜದ ಸಲುವಾಗಿ ತಾನು ದುಡಿದು ಅದರ ಮೌಲ್ಯಸಂಪತ್ತನ್ನು ಹೆಚ್ಚಿಸಲು ಪ್ರಯತ್ನಿಸುವುದು ಸಹಜ ಮತ್ತು ಅದು ಅವನ ಧರ್ಮ ಹಾಗಿಲ್ಲದ ಪಕ್ಷಕ್ಕೆ ಅವನನ್ನು ಸ್ವಾರ್ಥಿಯೆನ್ನಬೇಕಾಗುತ್ತದೆ. ಸ್ವಾರ್ಥಮನೋಭಾವಕ್ಕಿಂತಲೂ ನೀಚಮನೋಭಾವ ಬೇರೊಂದಿದೆ; ಅದು ಸಮಾಜ ಮೌಲ್ಯಗಳನ್ನೇ ನಾಶಮಾಡುವ ರಾಕ್ಷಸೀ ಮನೋಭಾವ.

ಮನುಷ್ಯನ ನೈತಿಕಧರ್ಮ ಮತ್ತು ಅದಕ್ಕೆ ವಿರುದ್ಧವಾದ ಸ್ವಾರ್ಥಮನೋಭಾವಗಳ ಪ್ರಸ್ತಾಪ ಅವನ ಮಾನಸಿಕ ಮೌಲ್ಯಗಳಿಗೆ ಸಂಬಂಧಿಸಿದ್ದು. ಮನೋಶಾಸ್ತ್ರಜ್ಞರು ಅಭಿಪ್ರಾಯ ಪಡುವಂತೆ ಮನಸ್ಸಿನಲ್ಲಿ ಮೂರು ಶಕ್ತಿಗಳನ್ನು ಗುರುತಿಸಬಹುದು: 1. ಆಲೋಚನಾ ಶಕ್ತಿ, 2. ಭಾವನಾ ಶಕ್ತಿ ಅಥವಾ ಸಂವೇದನಾ ಶಕ್ತಿ, 3. ಇಚ್ಛಾ ಶಕ್ತಿ; ಇವುಗಳಿಗನುಗುಣವಾಗಿ ಸತ್ಯ, ಸೌಂದರ್ಯ ಮತ್ತು ನೈತಿಕ ಧರ್ಮಗಳೆಂಬ ಮಾನಸಿಕ ಮೌಲ್ಯಗಳನ್ನು ಸಾಧಿಸಲು ಮನುಷ್ಯನು ಪ್ರಯತ್ನಿಸುತ್ತಾನೆ

ಈ ಮೌಲ್ಯಗಳ ಪೈಕಿ ನೈತಿಕಧರ್ಮದ ವಿಷಯದಲ್ಲಿ, ಸತ್ಯ ಮತ್ತು ಸೌಂದರ್ಯಗಳ ವಿಷಯದಲ್ಲಿ ತಲೆದೋರದ ಒಂದು ಕ್ಲಿಷ್ಟವಾದ ಸಮಸ್ಯೆ ಕಾಣಿಸುತ್ತದೆ. ಯಾಕೆಂದರೆ, ಸತ್ಯ ಮತ್ತು ಸೌಂದರ್ಯಗಳನ್ನು ಸಾಧಿಸಲು ಯತ್ನಿಸುವುದು ಜೀವನದಲ್ಲಿ ತನಗೆ ಉಪಯುಕ್ತವಾದುದೆಂದು ಪ್ರತಿವ್ಯಕ್ತಿಗೂ ಸ್ವಯಂ ವೇದ್ಯ : ವಿಜ್ಞಾನದ ವೃಷ್ಟಿಯಿಂದ ಸತ್ಯಾನ್ವೇಷಣೆ ಮನುಷ್ಯನಿಗೆ ಪ್ರಕೃತಿಯ ಮೇಲೆ ಸ್ವಾಮಿತ್ವವನ್ನು ಏರ್ಪಡಿಸಿ ಅವನ ಐಹಿಕ ಸುಖಕ್ಕೆ ದಾರಿಮಾಡಿಕೊಟ್ಟಿದೆ; ಹಾಗೆಯೇ ಸೌಂದರ್ಯವನ್ನು ಸವಿಯುವುದರಲ್ಲಿ ಮಾನವನಿಗೆ ಒಂದು ಅನಿರ್ವಚನೀಯವಾದ ಆನಂದವಿರುವುದರಿಂದ ಅವನು ಸೌಂದರ್ಯವನ್ನು ಅರಸುತ್ತಾನೆ, ಸೃಷ್ಟಿಸುತ್ತಾನೆ. ಹೀಗೆ ಸತ್ಯ ಮತ್ತು ಸೌಂದರ್ಯ

ಗಳೆರಡೂ ಮನುಷ್ಯನ ಐಹಿಕ ಸುಖದೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿವೆ. ಆದರೆ ಸ್ಥೂಲವಾಗಿ ನೋಡಿದರೆ ನೈತಿಕ ಧರ್ಮದ ವಿಷಯ ಹಾಗಲ್ಲ; ಅದು ಅನೇಕ ವೇಳೆ ವ್ಯಯುಕ್ತಿಕ ಸೌಖ್ಯಕ್ಕೆ ಪ್ರತಿಕೂಲವಾಗಿ ಕಾಣಿಸುತ್ತದೆ. ಆದ್ದರಿಂದಲೇ ಮನುಷ್ಯನು ನೈತಿಕ ಧರ್ಮವನ್ನು ತ್ಯಜಿಸಿ ಸ್ವಾರ್ಥಾವಲಂಬಿಯಾಗುತ್ತಾನೆ. ಸ್ವಾರ್ಥಿಯಾದ ಮನುಷ್ಯನಲ್ಲಿ ಸಹಜವಾಗಿ ಉದ್ಭವಿಸುವ ಕೆಲವು ಪ್ರಶ್ನೆಗಳಿವು: ಜೀವನದಲ್ಲಿ ತನ್ನ ಸುಖವನ್ನು ತಾನು ನೋಡಿಕೊಂಡಿರೆ ಸಾಲದೆ? ಪರರಿಗಾಗಿ ತಾನು ಏಕಾದರೂ ತ್ಯಾಗ ಮಾಡಿಬೇಕು? ಹಾಗೆ ತ್ಯಾಗ ಮಾಡುವುದರಿಂದ ತನಗಾಗುವ ಪ್ರಯೋಜನವಾದರೂ ಏನು? ಇತ್ಯಾದಿ .. .......

ಈ ರೀತಿಯಾದ ಪ್ರಶ್ನೆಯೇ ಏಳಬೇಕಾಗಿಲ್ಲವೆಂದೂ, ಯಾಕೆಂದರೆ ನೈತಿಕ ಧರ್ಮಕ್ಕೆ ಯಾವ ಪ್ರಯೋಜನವನ್ನು ಹುಡುಕಬೇಕಾಗಿಲ್ಲವೆಂದೂ, ಅದೇ ಅದರ ಉದ್ದೇಶ ಮತ್ತು ಪ್ರಯೋಜನವೆಂದೂ ಸುಪ್ರಸಿದ್ಧ ಜರ್ಮನ್ ತತ್ತ್ವ ಶಾಸ್ತ್ರಜ್ಞ ಕಾಂಟ್ ಹೇಳಿದ್ದಾನೆ. ಭಾರತೀಯ ತತ್ತ್ವ ಶಾಸ್ತ್ರದಲ್ಲಿ ಮೀಮಾಂಸಕನಾದ ಪ್ರಭಾಕರನ ಅಭಿಪ್ರಾಯವೂ ಇದೇ ಆಗಿದೆ. ಆದರೆ ಈ ಉತ್ತರವನ್ನು ಒಪ್ಪಿಕೊಳ್ಳುವುದು ಎಷ್ಟರ ಮಟ್ಟಿಗೆ ಸಾಧ್ಯವೋ ಹೇಳಲಾಗುವುದಿಲ್ಲ. ಯಾಕೆಂದರೆ, ಮನುಷ್ಯನ ಪ್ರತಿಯೊಂದು ಕ್ರಿಯೆಗೂ ಒಂದು ಗುರಿ, ಉದ್ದೇಶ, ಪ್ರಯೋಜನವಿದ್ದೇ ಇರಬೇಕೆಂದು ಬಯಸುವುದು ಅವನ ನೈಜಗುಣ. ಧಾರ್ಮಿಕ ಕ್ರಿಯೆಯೂ ಇದಕ್ಕೆ ಹೊರತಲ್ಲ. ಆದ್ದರಿಂದಲೇ ಅವನಲ್ಲಿ ನೀತಿಯುತವಾದ ಜೀವನದಿಂದ ತನಗಾಗುವ ಪ್ರಯೋಜನವನ್ನು ಕುರಿತ ಪ್ರಶ್ನೆಯು ಪದೇ, ಪದೇ ಬರುತ್ತಲೇ ಇರುತ್ತದೆ.



ಈ ಪ್ರಶ್ನೆ ತೀರಾ ಲೌಕಿಕವಾಗಿ, ಸುಲಭವಾಗಿ ಕಂಡರೂ ಇದಕ್ಕೆ ಸಮಂಜಸವಾದ ಉತ್ತರವನ್ನು ಕೊಡುವುದು ಕಷ್ಟ ಸಾಧ್ಯ. ಅನೇಕ ಧರ್ಮಶಾಸ್ತ್ರಜ್ಞರೂ, ತತ್ತ್ವಶಾಸ್ತ್ರಜ್ಞರೂ ಈ ಪ್ರಶ್ನೆಗೆ ಉತ್ತರವನ್ನು ಕೊಡಲು ಪ್ರಯತ್ನಿಸಿದ್ದಾರೆ. ಮುಖ್ಯವಾಗಿ ಈ ಪ್ರಶ್ನೆಗೆ ಮೂರು ರೀತಿಯಾದ ಉತ್ತರಗಳು ಸಾಧ್ಯ.

ಮೊದಲನೆಯದು, ಸಾಮಾನ್ಯವಾಗಿ ಎಲ್ಲಾ ಮತಗಳಲ್ಲಿಯೂ ಕಂಡು ಬರುವ ಉತ್ತರ: ಒಬ್ಬ ವ್ಯಕ್ತಿಯ ಅಸ್ತಿತ್ವ ಅವನ ಸಾವಿನಿಂದ ಕೊನೆಗಾಣುವುದಿಲ್ಲವೆಂದೂ, ಸಾವಿನಿಂದಾಚೆ ಅವನು ಬೇರೆಯ ರೂಪದಲ್ಲಿ ಮುಂದುವರಿಯುತ್ತಾನೆಂದೂ, ಹಾಗೆ ಮುಂದುವರಿದಾಗ ಅವನು ಜೀವನದಲ್ಲಿ ಮಾಡಿದ ಧಾರ್ಮಿಕ ಕಾರ್ಯಗಳ ಸತ್ಪರಿಣಾಮಗಳನ್ನೂ, ಅನೀತಿಯುತ ಕಾರ್ಯಗಳ ದುಷ್ಪರಿಣಾಮಗಳನ್ನೂ ಅನುಭವಿಸಬೇಕಾವುದೆಂದೂ, ಆದ್ದರಿಂದ ಧಾರ್ಮಿಕಕಾರ್ಯಗಳನ್ನೇ ಮಾಡಬೇಕೆಂದೂ ಮತಗಳಲ್ಲಿ ಕಂಡು ಬರುವ ಸಾಮಾನ್ಯ ಅಭಿಪ್ರಾಯ. ಈ ಅಭಿಪ್ರಾಯ ಮನುಷ್ಯನ ದೃಷ್ಟಿ ಮತ್ತು ನಡತೆಯ ಮೇಲೆ ಹೆಚ್ಚು ಪ್ರಭಾವವನ್ನು ಬೀರಬಲ್ಲದು. ಆದರೆ ಅನೇಕ ವೇಳೆ

ಮನುಷ್ಯನ ಮನಸ್ಸಿನಮೇಲೆ ಮತಗಳ ಹಿಡಿತ ಸಡಿಲವಾಗಿ, ಅವುಗಳ ಸಿದ್ಧಾಂತವನ್ನು ಅವನು ಪ್ರಶ್ನಿಸಲೂಬಹುದು. ಹಾಗೆ ಪ್ರಶ್ನಿಸಿದಾಗ ಅವನಿಗೆ ಸಮಂಜಸವಾದ ಉತ್ತರ ಮತಗಳಲ್ಲಿ ಸಿಕ್ಕದೆ ಹೋಗಬಹುದು. ಇದಕ್ಕೆ ಕಾರಣ, ಮತಗಳ ಆಧಾರ ಮುಖ್ಯವಾಗಿ ನಂಬಿಕೆಯೇ ಹೊರತು ತರ್ಕವಲ್ಲ.

ಮತಗಳ ಪ್ರಭಾವ ಮನುಷ್ಯನ ಮೇಲೆ ಸಡಿಲವಾದಾಗ, ಧಾರ್ಮಿಕ ಪ್ರಶ್ನೆಯನ್ನು ಅವನು ಮತೀಯ ಸಿದ್ಧಾಂತಗಳ ನೆರವಿಲ್ಲದೆ, ಕೇವಲ ಲೌಕಿಕ ಚೌಕಟ್ಟಿನಲ್ಲಿ ಉತ್ತರಿಸಲು ಪ್ರಯತ್ನಿಸಿದ್ದಾನೆ. ಎರಡನೇ ರೀತಿಯಾದ, ಈ ಉತ್ತರವನ್ನು ನಾವು ಬೆಂಥಮ್, ಮಿಲ್, ಮಾರ್ಕ್ಸ್, ಸಾರ್ತ್ ಮೊದಲಾದ ತತ್ತ್ವಶಾಸ್ತ್ರರಲ್ಲಿ ಕಾಣಬಹುದು. ಬೆಂಥಮ್ ಮತ್ತು ಮಿಲ್ ತಮ್ಮ ನೀತಿಶಾಸ್ತ್ರದಲ್ಲಿ ಒಂದು ಸಮಾಜದಲ್ಲಿ ಯಾವ ಕೆಲಸದಿಂದ ಹೆಚ್ಚಿನ ಜನಗಳಿಗೆ ಪ್ರಯೋಜನವಾಗುವುದೋ ಅದನ್ನೇ ನೀತಿಯುತ ಕೆಲಸವೆಂದು ಪ್ರತಿ ವ್ಯಕ್ತಿಯೂ ತಿಳಿದು ಅದನ್ನು ಅನುಸರಿಸಿ ಸಮಾಜಕಲ್ಯಾಣವನ್ನು ಸಾಧಿಸುವುದರ ಮೂಲಕ ತನ್ನ ಸುಖವನ್ನೂ ಪಡೆಯಬಹುದೆಂದು ಅಭಿಪ್ರಾಯಪಡುತ್ತಾರೆ. ಮಾರ್ಕ್ಸ್‌ನು ಮತೀಯ ನಂಬಿಕೆಗಳನ್ನು ಖಂಡಿಸುವುದರ ಜೊತೆಗೆ ಲೌಕಿಕ್ಕ ಪರಿಧಿಯಲ್ಲಿ ತನ್ನದೇ ಆದ ನೈತಿಕ ತತ್ತ್ವವನ್ನು ಸಮರ್ಥಿಸುತ್ತಾನೆ. ಅವನ ಪ್ರಕಾರ ಮನುಷ್ಯ ಹುಟ್ಟಿನಿಂದ ಕೆಟ್ಟವನಲ್ಲ ; ಸ್ವಾರ್ಥಿಯೂ ಅಲ್ಲ ; ಸಮಾಜದಲ್ಲಿರುವ ದರಿದ್ರ, ಅಸಮಾನತೆಗಳು ಅವನನ್ನು ಸ್ವಾರ್ಥಿಯನ್ನಾಗಿ, ಕೆಟ್ಟವನನ್ನಾಗಿ ಮಾಡುತ್ತವೆ; ಮತೀಯ ನಂಬಿಕೆಗಳು ಹುಟ್ಟುವುದಕ್ಕೂ, ಹರಡುವುದಕ್ಕೂ ಅವೇ ಅವಕಾಶ ಮಾಡಿ ಕೊಡುತ್ತವೆ.[2] ದರಿದ್ರ ಮತ್ತು ಅಸಮಾನತೆಗಳನ್ನು ಅಳಿಸಿಹಾಕಿದಾಗ ಮತೀಯ ನಂಬಿಕೆಗಳಿಗೆ ಅವಶ್ಯಕತೆಯಿರುವುದಿಲ್ಲ; ಮನುಷ್ಯನು ಸ್ವಾರ್ಥಿಯೂ ಆಗುವುದಿಲ್ಲ. ಅವನು ಸಮಾಜದ ಕಲ್ಯಾಣಕ್ಕಾಗಿ ದುಡಿಯುತ್ತಾನೆ, ಮತ್ತು ಸಮಾಜಕಲ್ಯಾಣದಲ್ಲಿಯೇ ತನ್ನ ವ್ಯಯುಕ್ತಿಕ ಸೌಖ್ಯವನ್ನೂ ಕಾಣುತ್ತಾನೆ.

ಇತ್ತೀಚಿನ ತತ್ತ್ವ ಶಾಸ್ತ್ರಜ್ಞರಲ್ಲಿ ಅಸ್ತಿತ್ವವಾದಿಯೆಂದು ಪ್ರಸಿದ್ಧನಾಗಿರುವ ಜೀನ್–ಪಾಲ್‌ಸಾರ್ತ್‌ನೂ ಸಹ ಮತ ಪ್ರಭಾವದ ಸೋಂಕಿಲ್ಲದ ನೈತಿಕ ತತ್ತ್ವವನ್ನು ಸಮರ್ಥಿಸಲು ಪ್ರಯತ್ನಿಸಿದ್ದಾನೆ; ಈತನದು ನಿರೀಶ್ವರವಾದ ಮತ್ತು ಅನಾತ್ಮವಾದ.[3] ಮನುಷ್ಯನ ಜೀವನ ಸಾವಿನಲ್ಲಿ ಪರ್ಯವಸಾನವಾಗುತ್ತದೆ; ಸಾವಿನಿಂದಾಚೆ

---

2. ನೋಡಿ : Marx and Engels, *On Religion*, Moscow, 1957.

3. ನೋಡಿ : Jean-Paul Sartre, EXISTENTIALISM, New york, 1947.

ಅವನಿಗೆ ಏನೂ ಇಲ್ಲ. ಯಾಕೆಂದರೆ, ಅವನಲ್ಲಿ ' ಆತ್ಮ 'ವೆಂದು ಕರೆಯಿಸಿಕೊಳ್ಳಬಹುದಾದ ಯಾವ ವಸ್ತುವೂ ಅಡಗಿಕೊಂಡಿಲ್ಲ. ಅವನಲ್ಲಿರುವುದು ಬರೀ ಶೂನ್ಯತೆ; ಇದೇ ಅವನ ನಿಜ ಸ್ವರೂಪ; ಈ ಶೂನ್ಯತೆಯಿಂದಲೇ ಅವನು ಸ್ವತಂತ್ರನೂ ಹೌದು. ಈ ಶೂನ್ಯತೆಯನ್ನು ತುಂಬಿಕೊಳ್ಳುವುದಕ್ಕಾಗಿಯೇ ಅವನು ಮೌಲ್ಯಗಳನ್ನು ಸೃಷ್ಟಿಸುತ್ತಾನೆ. ಈ ಮೌಲ್ಯಗಳಲ್ಲಿ ನೈತಿಕ ಧರ್ಮ ಅತಿ ಮುಖ್ಯವಾದದ್ದು. ಅಂದರೆ, ಮನುಷ್ಯನು ಕೇವಲ ತನ್ನ ಸ್ವಾರ್ಥಕ್ಕಾಗಿಯೇ ದುಡಿಯದೆ ಲೋಕ ಕಲ್ಯಾಣವನ್ನು ದೃಷ್ಟಿಯಲ್ಲಿಟ್ಟುಕೊಂಡು ದುಡಿಯಬೇಕು. ಇದೇ ಅವನ ಸಹಜ ಧರ್ಮ; ಯಾಕೆಂದರೆ ಈ ನೈತಿಕವೆನಿಸೋ ಭಾವ ಅವನ ಆಂತರಿಕ ಶೂನ್ಯತೆಗೆ ಅನುಗುಣವಾಗಿರುತ್ತದೆ. ಹೀಗೆ ಸಾರ್ತ್ರ್ ನಿರೀಶ್ವರ ವಾದಿಯೂ, ಅನಾತ್ಮವಾದಿಯೂ ಆಗಿದ್ದರೂ, ಕೇವಲ ಐಹಿಕ ಚೌಕಟ್ಟಿನಲ್ಲಿಯೇ ಮನುಷ್ಯನ ಅಸ್ತಿತ್ವವನ್ನು ವಿಮರ್ಶಿಸಿ, ನೈತಿಕ ಜೀವನವನ್ನು ಅನುಸರಿಸುವುದು ಅವನ ಕರ್ತವ್ಯವೆಂದೂ, ಅದೇ ಅವನ ಸಹಜ ಪ್ರವೃತ್ತಿಯೆಂದೂ ಸಾಧಿಸಲು ಪ್ರಯತ್ನಿಸುತ್ತಾನೆ.[4]

ಮಾರ್ಕ್ಸ್ ಮತ್ತು ಸಾರ್ತ್ರ್‌ರ ವಾದಸರಣಿಯನ್ನು ಒಪ್ಪಿಗೊಳ್ಳುವುದು ಅನೇಕರಿಗೆ ಕಷ್ಟವಾಗಬಹುದು. ಯಾಕೆಂದರೆ, ಮೊದಲನೆಯದಾಗಿ ಮನುಷ್ಯನಿಗೆ ಸಾವಿನಿಂದಾಚೆ ಏನೂ ಇಲ್ಲವಾದ ಪಕ್ಷಕ್ಕೆ, ಸಮಾಜದ ಸೌಖ್ಯಕ್ಕಾಗಿ ತಾನು ತ್ಯಾಗಮಾಡದೆ ಸುಖವಾಗಿರಬಹುದಾದರೆ, ತನ್ನ ಸುಖವೊಂದನ್ನೇ ತಾನೇಕೆ ಬಯಸಬಾರದು, ಅದರಲ್ಲಿ ತಪ್ಪೇನಿದೆ, ಎಂಬ ಪ್ರಶ್ನೆ ಏಳುತ್ತದೆ. ಎರಡನೆಯದಾಗಿ, ಮನುಷ್ಯನಿಗೆ ಶಾರೀರಕ ಸುಖವನ್ನು ಒದಗಿಸಿ ಕೊಟ್ಟಮಾತ್ರಕ್ಕೆ, ಆತ್ಮ, ದೈವ ಮೊದಲಾದ ಪಾರಮಾರ್ಥಿಕ ಚಿಂತನೆಗಳು ಅವನಿಂದ ಪೂರ್ತಿಯಾಗಿ ದೂರವಾಗುವುವೆಂದು ಹೇಳುವುದು ಕಷ್ಟ. ಯಾಕೆಂದರೆ, ಶಾರೀರಕ ಸುಖಕ್ಕಾಗಿ ಪರದಾಡುವುದು ಮನುಷ್ಯನಿಗೆ ಎಷ್ಟು ಹುಟ್ಟು ಗುಣವೋ, ಪಾರಮಾರ್ಥಿಕ ಚಿಂತನೆಯೂ ಅವನಲ್ಲಿ ಅಷ್ಟೇ ಸ್ವಭಾವಸಿದ್ಧವಾಗಿ ಹುದುಗಿದೆ.

ಮೇಲೆ ಹೇಳಿದ ಮತೀಯ ಮತ್ತು ಲೌಕಿಕ ಉತ್ತರಗಳೆರಡೂ ಪರಸ್ಪರ ವಿರುದ್ಧವಾಗಿ ಕಾಣುತ್ತವೆ. ಈ ಎರಡು ಉತ್ತರಗಳನ್ನೂ ಸ್ವಲ್ಪ ಮಟ್ಟಿಗೆ ಅಳವಡಿಸಿ

---

4. ಸಾರ್ತ್ರ್ ಮಂಡಿಸಿರುವ ಅಸ್ತಿತ್ವವಾದದ ವಿಷಯದಲ್ಲಿ ಹೆಚ್ಚಿನ ವಿವರಣಾತ್ಮಕ ವಿಮರ್ಶೆಗೆ ನೋಡಿ : ಇದೇ ಲೇಖಕರ

THE EXISTENTIALIST CONCEPTS AND THE HINDU PHILOSOPHICAL SYSTEMS, Allahabad, 1967.

ಕೊಂಡು, ಹಾಗೂ ಎರಡರಿಂದಲೂ ಸ್ವಲ್ಪ ಭಿನ್ನವಾದ ಮೂರನೆಯ ಉತ್ತರ ಅಥವಾ ದೃಷ್ಟಿ ಬೇರೊಂದಿದೆ. ಅದನ್ನು ಆಧ್ಯಾತ್ಮಿಕ ದೃಷ್ಟಿಯೆಂದು ಕರೆಯಬಹುದು. ಅದರ ಪ್ರಕಾರ ಆತ್ಮ ಮತ್ತು ದೈವನೆಂಬ ಪಾರಮಾರ್ಥಿಕ ವಸ್ತುಗಳು ಸಾವಿನಿಂದಾಚೆ ಕಾದಿರಿಸಿರುವ ಮೌಲ್ಯಗಳೆಂಬ ಅಂಧವಿಶ್ವಾಸವನ್ನು ಬಿಡಬೇಕಾಗುತ್ತದೆ; ಜೀವನದಲ್ಲಿ ಶಾರೀರಕ ಸುಖದ ಹೊರತು ಬೇರಾವ ಸುಖ ಅಥವಾ ತೃಪ್ತಿಯ ಹಂತವೂ ಇಲ್ಲವೆನ್ನುವ ಮೌಢ್ಯವನ್ನೂ ಬಿಡಬೇಕಾಗುತ್ತದೆ. ಪಾರಮಾರ್ಥವೆನ್ನುವುದು ಜೀವನದಲ್ಲಿಯೇ ಸಾಧಿಸಬಹುದಾದ ಒಂದು ಹಂತ. ಅದನ್ನು ಸ್ವಾನುಭವದಲ್ಲಿ ಪಡೆಯಬೇಕಾದರೆ, ಮನುಷ್ಯನು ಶಾರೀರಕ ಸುಖಕ್ಕೆ ಕಟ್ಟುಬೀಳದಿರಬೇಕು; ಹಾಗೆ ಕಟ್ಟುಬೀಳದಿರಬೇಕಾದರೆ ಅವನು ನೈತಿಕ ಧರ್ಮವನ್ನು ಅನುಸರಿಸಬೇಕು. ಈ ಅನುಸರಣೆಯಿಂದ ಅವನಲ್ಲಿ ಲೌಕಿಕ ಸುಖದ ಅಶಾಶ್ವತೆ ಹಾಗೂ ಅಪೂರ್ಣತೆಯ ಅರಿವು ಬೇರೂರಿ, ಅದರ ಮೂಲಕವೇ ತನ್ನ ಆಂತರಿಕ ಜೀವನದಲ್ಲಿ ಅಧ್ಯಾತ್ಮ ಮೌಲ್ಯಗಳ ಅಸ್ತಿತ್ವವನ್ನು ಸಾಧಿಸುತ್ತಾನೆ. ಈ ರೀತಿ ಮನುಷ್ಯನು ತನ್ನ ಜೀವನದಲ್ಲಿ ಹಂತಕ್ಕೇರುತ್ತಾನೆ; ಪರಿವರ್ತಿತನಾಗುತ್ತಾನೆಂದರೂ ತಪ್ಪಾಗಲಾರದು.[1]

ಆದರೆ ಈ ಅಧ್ಯಾತ್ಮಮಾರ್ಗ ಬಹಳ ಕಷ್ಟವಾದುದೆಂದು ಬೇರೆ ಹೇಳಬೇಕಾಗಿಲ್ಲ. ಯಾಕೆಂದರೆ ಇದು ಒಬ್ಬ ವ್ಯಕ್ತಿಯ ಬಿಚ್ಚು ಮನಸ್ಸಿನ ಅನ್ವೇಷಣೆ. ಸಾಂಪ್ರದಾಯಿಕ ಸಂಕೋಲೆಗಳಿಂದ ಬಿಡುಗಡೆ ಹೊಂದಿ ಅವನು ಆಂತರಿಕವಾಗಿ ಸಾಧಿಸಿರುವ ವ್ಯಕ್ತಿಸ್ವಾತಂತ್ರ್ಯವೇ ಇದರ ತಳಹದಿ. ಈ ಮಾರ್ಗವನ್ನು ಅನುಸರಿಸುವ ವ್ಯಕ್ತಿಗೆ ಮತೀಯ ನಂಬಿಕೆಗಳಲ್ಲಿ ಅಂಧವಿಶ್ವಾಸವನ್ನಿಡುವುದರಿಂದ ದೊರೆಯಬಹುದಾದ ಮನಸ್ಸಿನ ನೆಮ್ಮದಿ ಇರುವುದಿಲ್ಲ; ಜೊತೆಗೆ ಶಾರೀರಕ ಸುಖದಲ್ಲಿ ಕಂಡುಬರುವ ಅಶಾಶ್ವತೆ, ಅಪೂರ್ಣತೆಗಳು ಮನಸ್ಸನ್ನು ಕಾಡುತ್ತಿರುತ್ತವೆ. ಈ ಅತೃಪ್ತಿಯೇ ಮೂಲಕಾರಣವಾಗಿ ಅವನು ಆಧ್ಯಾತ್ಮಿಕ ತೃಪ್ತಿಯನ್ನು ಧಾರ್ಮಿಕ ಯತ್ನದ ಮೂಲಕ ತನ್ನಲ್ಲಿ ಪಡೆಯಲು ತೊಡಗುತ್ತಾನೆ. ಅಂದರೆ, ಸ್ವಾರ್ಥತ್ಯಾಗದಲ್ಲಿ, ಸಮಾಜ ಸೇವೆಯಲ್ಲಿ ಒಂದು ವಿಶಿಷ್ಟವಾದ ಆನಂದವಿದೆಯೆಂದು ಮನಗಂಡು ಅದನ್ನು ಸಾಧಿಸಲು ಪ್ರಯತ್ನಿಸುತ್ತಾನೆ. ಅದರಲ್ಲಿ ಕಂಡುಬರುವ ಅಲೌಕಿಕ ಆನಂದ ಅವನನ್ನು ಹೆಚ್ಚು, ಹೆಚ್ಚಾಗಿ ಸ್ವಾರ್ಥರಹಿತವಾದ ನೈತಿಕ ಜೀವನವನ್ನು ನಡೆಸಲು ಪ್ರೋತ್ಸಾಹಿಸುತ್ತದೆ.[2]

---

1. ಈ ವಿಷಯದಲ್ಲಿ ಹೆಚ್ಚಿನ ವಿವರಣೆಗೆ ನೋಡಿ: ಇದೇ ಲೇಖಕರ "The Dialectic of the Individual," THE ARYAN PATH, June 1969.

2. ಈ ಮಾರ್ಗವನ್ನು ಅನುಸರಿಸಿದ ಹಲವು ಮಹಾಪುರುಷರಲ್ಲಿ ಇಬ್ಬರು ಸಮಕಾಲೀನ ಸುಪ್ರಸಿದ್ಧರು—ಮಹಾತ್ಮಗಾಂಧಿ ಮತ್ತು ಆಲ್ಬರ್ಟ್ ಸ್ವೈಟ್ಸರ್.

ಈ ರೀತಿಯಾಗಿ ನೈತಿಕ ಜೀವನಕ್ಕೆ ಆಧ್ಯಾತ್ಮಿಕ ದೃಷ್ಟಿ ಮತ್ತು ಬೆಂಬಲವನ್ನು ಕೊಡುವುದನ್ನು ನಾವು ಭಾರತೀಯ ತತ್ತ್ವಶಾಸ್ತ್ರದುದ್ದಕ್ಕೂ ನೋಡಬಹುದು. ಹಾಗೆಯೇ ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರಲ್ಲಿಯೂ ಸಹ ಎಫ್. ಹೆಚ್. ಬ್ರಾಡ್ಲಿ ಬರ್ನಾರ್ಡ್ ಬೊಸಾಂಕೆ ಮೊದಲಾದ ವಿದ್ವಾಂಸರು ನೀತಿಯುತವಾದ ಜೀವನಕ್ಕೆ ಆಧ್ಯಾತ್ಮಿಕ ಗುರಿಯನ್ನು ಒದಗಿಸಿದ್ದಾರೆ.

ಒಂದು ಕೊನೆಯ ಮಾತನ್ನು ಹೇಳಬಹುದಾದರೆ, ಜೀವನದಲ್ಲಿ ಎಲ್ಲಾ ಮೌಲ್ಯಗಳೂ ಮುಖ್ಯವೇ. ಯಾಕೆಂದರೆ, ಮನುಷ್ಯನಲ್ಲಿರುವ ಪ್ರತಿ ಅಂಶವೂ ತೃಪ್ತಿ ಪಡೆದಾಗಲೇ, ಅವನ ಜೀವನ ಪರಿಪೂರ್ಣತೆಯನ್ನು ಪಡೆಯುತ್ತದೆ. ಆದರೆ ಈ ಎಲ್ಲಾ ಮೌಲ್ಯಗಳ ಪೈಕಿ ಧರ್ಮಕ್ಕೆ ಒಂದರ್ಥದಲ್ಲಿ ಕೇಂದ್ರಸ್ಥಾನ ಲಭಿಸಿದೆ. ಅದು ಮನುಷ್ಯನ ಲೌಕಿಕ ಮತ್ತು ಆಧ್ಯಾತ್ಮಿಕ ಹಂತಗಳ ನಡುವೆ ಇರುವ ಒಂದು ಸೇತುವೆ. ಮನುಷ್ಯನ ಲೌಕಿಕ ಮೌಲ್ಯಗಳ ಅನುಸರಣೆಗೆ ಒಂದು ಮಿತಿಯನ್ನೂ, ನಿರ್ದಿಷ್ಟತೆಯನ್ನೂ ಕೊಡುವುದೇ ಅಲ್ಲದೆ, ಅವನ ಆಂತರಿಕ ಆನಂದಕ್ಕೂ ದಾರಿ ಮಾಡಿಕೊಡುತ್ತದೆ. ಈ ಕಾರಣದಿಂದಲೇ, ಭಾರತೀಯ ತತ್ತ್ವಶಾಸ್ತ್ರದಲ್ಲಿ ಧರ್ಮಕ್ಕೆ ಬಹು ಮುಖ್ಯವಾದ ಸ್ಥಾನ ಕೊಡಲ್ಪಟ್ಟಿದೆ. ಅರ್ಥ ಮತ್ತು ಕಾಮ ಮೌಲ್ಯಗಳ ಅನುಸರಣೆಗೆ ಮಿತಿ ಮತ್ತು ನಿರ್ದಿಷ್ಟತೆಗಳನ್ನು ಒದಗಿಸುವ ಮೂಲಸೂತ್ರವಾಗಿದಿಯೇ ಅಲ್ಲದೆ, ಆಂತರಿಕ ಶ್ರೇಯಸ್ಸಿಗೂ ಮೂಲಕಾರಣವಾಗಿ ಪರಿಗಣಿಸಲ್ಪಟ್ಟಿದೆ.

# ಬಸವ ಸಂದೇಶ

## ಎಚ್. ತಿಪ್ಪೇರುದ್ರಸ್ವಾಮಿ

ಭರತಖಂಡದ ಧಾರ್ಮಿಕ ಪರಂಪರೆಯನ್ನು ಶ್ರೀಮಂತಗೊಳಿಸುವುದರಲ್ಲಿ ಕರ್ಣಾಟಕವು ಕೊಟ್ಟಿರುವ ಕೊಡುಗೆ ಮಹತ್ವಪೂರ್ಣವಾದುದು. ಅದರಲ್ಲಿಯೂ ಹನ್ನೆರಡನೆ ಶತಮಾನ ಚಿರಸ್ಮರಣೀಯವಾದ ಒಂದು ಘಟ್ಟ. ಬಸವಣ್ಣನವರ ನೇತೃತ್ವದಲ್ಲಿ ಕರ್ಣಾಟಕ ನವಚೇತನದ ಧಾರ್ಮಿಕ ರಂಗಭೂಮಿಯಾಗಿ ಪರಿಣಮಿಸಿತು. ಧರ್ಮ ಜೀವಂತಶಕ್ತಿಯಾಗಿ ಮಿಂಚಿನಂತೆ ಸಂಚರಿಸಿತು. ಜನತೆಯ ಜೀವನವನ್ನು ಹೊಕ್ಕು ಮನೆ ಮನೆಗಳನ್ನು ಮನ ಮನಗಳನ್ನು ಬೆಳಗಿತು. ಹಿಂದೂ ಧರ್ಮದ ಉದಾತ್ತ ತತ್ವಗಳು ವ್ಯಾವಹಾರಿಕ ಜೀವನದಲ್ಲಿ ಜನಸಾಮಾನ್ಯರ ಮಟ್ಟಕ್ಕೆ ಅಳವಡುವ ಧಾರ್ಮಿಕ ಮಾರ್ಗವನ್ನು ಬಸವಣ್ಣನವರು ತೋರಿಸಿದರು.

‘ ಸಮಾಜದ ಸಮಸ್ಯೆಗಳನ್ನು ಧರ್ಮ ಕಡೆಗಣಿಸಬಾರದು, ಪರಿವರ್ತನಶೀಲವಾದ ಸಮಾಜದಲ್ಲಿ ಹೊಸಹೊಸ ಸಮಸ್ಯೆಗಳೂ ತೊಡಕುಗಳೂ ತಲೆದೋರುವುದು ಅನಿವಾರ್ಯ. ಅವುಗಳನ್ನು ಎದುರಿಸಿ ಬಾಳಲು ಸಹಾಯಕವಾಗುವಂತೆ ಧರ್ಮವು ವಿಕಾಸಮಾರ್ಗದಲ್ಲಿ ನಡೆಯಬೇಕು. ವಿಚಾರವಾದದ ಪರಿವರ್ತನೆಗಳಿಗೆ ಹೊಂದಿಕೊಂಡು ನಡೆಯಬಲ್ಲ ಧರ್ಮವು ಜನತೆಯನ್ನು ಉದ್ಧರಿಸಬಲ್ಲುದು — ಎಂಬ ಈ ಮೂಲಭೂತವಾದ ಮತ್ತು ಶಾಶ್ವತವಾದ ತತ್ವಗಳ ತಳಹದಿಯ ಮೇಲೆ ಬಸವಣ್ಣನವರು ತಮ್ಮ ಕಾರ್ಯಕ್ಷೇತ್ರವನ್ನು ಕಟ್ಟಿದರು. ಅದಕ್ಕನುಗುಣವಾಗಿ ವ್ಯಾಪಕವಾದ ಸಾರ್ವಕಾಲಿಕವಾದ ತತ್ವಗಳನ್ನು ಬೋಧಿಸಿದರು ; ಸಾಧಿಸಿ ತೋರಿಸಿದರು. ಆದುದರಿಂದಲೇ ಆಧುನಿಕ ಜಗತ್ತಿನ ವೈಜ್ಞಾನಿಕ ದೃಷ್ಟಿಗೂ ಅದು ಹೊಂದಿಕೊಳ್ಳುವಂತಿದೆ. ಇಂದಿನ ಸಾಮಾಜಿಕ ಸಮಸ್ಯೆಗಳ ಮೇಲೂ ಬೆಳಕನ್ನು ಬೀರುವಂತಿದೆ.

ಬಸವಣ್ಣನವರ ವ್ಯಕ್ತಿತ್ವ ಬಹುಮುಖವಾದುದು. ಒಂದು ಕಡೆ ರಾಜಕೀಯದಲ್ಲಿ ಉನ್ನತ ಅಧಿಕಾರ; ಕಳಚೂರ್ಯ ಬಿಜ್ಜಳನ ಬಳಿಯಲ್ಲಿ ಭಂಡಾರದ ಮಂತ್ರಿ. ಇನ್ನೊಂದು ಕಡೆ ಆಧ್ಯಾತ್ಮಿಕ ಮಹಾಸಾಧಕ ಭಕ್ತಿಭಂಡಾರಿ. ಇದಲ್ಲದೆ ಸಮಾಜ

ದಲ್ಲಿ ಬೇರುಬಿಟ್ಟ ಮೇಲುಕೀಳೆಂಬ ವಿಷಮತೆಯನ್ನು ಕಂಡು ಕೆರಳುವ ಕ್ರಾಂತಿಕಾರ; ಜನರ ದುಃಖವನ್ನು ಕಂಡು, ಕಂಬನಿ ಮಿಡಿಯುವ ಲೋಕಸಂಸಾರಿ; ಧರ್ಮದ ಸ್ವಾರ್ಥಮುಖವಾಡವನ್ನು ಖಂಡಿಸಿದ ನಿಷ್ಠುರವಾದಿ; ಸರ್ವ ಸಮಾನತೆಯ ಸ್ವಯಂ ಪೂರ್ಣ ಸಮಾಜದ ಕನಸನ್ನು ಕಂಡ ಕ್ರಾಂತಿದರ್ಶಿ; ಈ ಬಹುಮುಖವಾದ ಭಾವನೆ ಗಳನ್ನು ಸಹಜವಾಗಿ ವಚನಗಳ ರೂಪದಲ್ಲಿ ಹೊರಹೊಮ್ಮಿಸಿದ ವರಕವಿ. ಇವು ಅವರ ವಿರಾಟ್ ವ್ಯಕ್ತಿತ್ವದ ಹಲವು ಮುಖಗಳು.

ಅದು ಕನ್ನಡದ ಪುಣ್ಯ; ಬಸವಣ್ಣ ತನ್ನ ಧಾರ್ಮಿಕ ಬೋಧನೆಗಾಗಿ ಜನರ ನುಡಿಯನ್ನು ಎತ್ತಿಕೊಂಡ. ಜನವಾಣಿ ದೇವವಾಣಿಯ ಮಟ್ಟಕ್ಕೇರಿತು. ಅವನ ನೇತೃತ್ವದಲ್ಲಿ ಕಲ್ಯಾಣದಲ್ಲಿ ಸಮಾವೇಶಗೊಂಡ ಶರಣರಿಂದ ರಚಿತವಾದ ಅನುಭವ ಸಾಹಿತ್ಯ, ಕನ್ನಡವನ್ನು ಹೊಸ ಶಕ್ತಿಯಿಂದ ಬೆಳಗಿತು. ಅಲ್ಲಮಪ್ರಭುವಿನಂತಹ ಮೇರುಸದೃಶ ವ್ಯಕ್ತಿಯ ಅನುಭವದ ದೀಪ್ತಿಯಿಂದ ಕನ್ನಡ ಮಾತು, ಜ್ಯೋತಿರ್ಲಿಂಗ ಸ್ವರೂಪವಾಯಿತು. ಅಕ್ಕಮಹಾದೇವಿಯ ಮಧುರಭಕ್ತಿಯ ಮಧು, ಅಧರಕ್ಕೂ ಸಿಹಿ ಉದರಕ್ಕೂ ಸಿಹಿಯಾಯಿತು. ಇಂತಹ ನೂರಾರು ಶರಣರನ್ನು ಕಲ್ಯಾಣವೆಂಬ ಪ್ರಣತಿಯ ಪ್ರಭೆಯಲ್ಲಿ ಬೆಳಗಿಸಿದ ಜ್ಯೋತಿ ಬಸವಣ್ಣ.

ಬಸವಣ್ಣನವರ ವಚನಗಳಂತೂ ಅವರ ವ್ಯಕ್ತಿತ್ವಕ್ಕೆ ಹಿಡಿದ ರನ್ನಗನ್ನಡಿಗಳು. ಕಾವ್ಯರಚನೆ ಅವರ ಉದ್ದೇಶವಲ್ಲದಿದ್ದರೂ ಹೃದಯದ ಆಳವಾದ ಅನುಭವದಿಂದ ಪರಿ ಪಾಕಗೊಂಡು ಒಡಮೂಡಿದ ಮಾತುಗಳು ಅಣಿಮುತ್ತುಗಳಾಗಿವೆ. "ಅಂಗಮೆಚ್ಚಿ ಅಹುದಹುದು" ಎನ್ನುವಂತಿವೆ. ಅವರ ಮನೋವಿಕಾಸದ ಜೀವಂತ ಚಿತ್ರ, ಅವರ ವಚನಗಳಲ್ಲಿ ಮೂಡಿಬಂದಿದೆ. ಬಹುಮುಖವಾದ ಅವರ ವಿಚಾರವಾದಕ್ಕೆ ಅವರ ವಚನಗಳು ಸಾಕ್ಷಿಯಾಗಿವೆ.

ಮೊಟ್ಟಮೊದಲನೆಯದಾಗಿ ಗಮನಿಸಬೇಕಾದುದು ಅವರ ಸಾಧಕ ಜೀವನ. ಎಲ್ಲ ಸಾಧನೆಗೂ ಮೂಲ ಪರಿಶುದ್ಧವಾದ ವ್ಯಕ್ತಿತ್ವ ಎಂದು ನಂಬಿದವರು ಬಸವಣ್ಣ ನವರು. ತಾನು ಬೆಳಕನ್ನು ಕಾಣದ ಹೊರತು ವ್ಯಕ್ತಿ ಇನ್ನಾರಿಗೂ ಬೆಳಕನ್ನು ಕಾಣಿ ಸಲಾರ. ಕುರುಡ ಕುರುಡನಿಗೆ ದಾರಿ ತೋರಿಸಿದಂತಾಗಬಾರದು. ಆದುದರಿಂದ ಬಸವಣ್ಣನವರು ತಮ್ಮ ಸಾಧನೆಯಲ್ಲಿ ಕಠೋರ ನಿಷ್ಠೆಯಿಂದ ಮುನ್ನಡೆದರು. ಲೌಕಿಕ ಜಗತ್ತಿನಲ್ಲಿದ್ದು ಅಲೌಕಿಕ ಜಗತ್ತಿನ ಅತ್ಯುನ್ನತವಾದ ಎತ್ತರವನ್ನು ಮುಟ್ಟಿ ದರು. ಅವರ ಈ ಸಾಧನೆಯ ವಿವಿಧ ಹಂತಗಳು ಅವರ ವಚನಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿವೆ.

ಬಸವಣ್ಣನವರ ಮಾರ್ಗ ಭಕ್ತಿಮಾರ್ಗ. 'ಭಕ್ತಿಭಂಡಾರಿ' ಎಂದೇ ಅವರು ಶರಣರಲ್ಲಿ ಪ್ರಸಿದ್ಧರಾಗಿದ್ದಾರೆ. ಮಡಿವಾಳ ಮಾಚಯ್ಯ ಹೇಳುವ ಈ ಮುಂದಿನ

ಮಾತು ಅವರ ಭಕ್ತಿಜೀವನವನ್ನು ಬಹಳ ಸುಂದರವಾಗಿ ಚಿತ್ರಿಸುತ್ತದೆ. "ಎತ್ತೆತ್ತ ನೋಡಿದೊಡೆ ಅತ್ತತ್ತ ಬಸವನೆಂಬ ಬಳ್ಳಿ; ಎತ್ತೆತ್ತ ನೋಡಿದೊಡೆ ಅತ್ತತ್ತ ಲಿಂಗ ವೆಂಬ ಗೊಂಚಲು; ಒತ್ತಿ ಹಿಂಡಿದೊಡೆ ಭಕ್ತಿಯೆಂಬ ರಸವಯ್ಯ." ಬಹಳ ಅರ್ಥ ವನ್ನುಳ್ಳ ಮಾತು ಇದು. ಬಸವಣ್ಣನವರ ಮಾತುಗಳನ್ನು ಒತ್ತಿಹಿಂಡಿದರೆ ಭಕ್ತಿ ಯೆಂಬ ರಸ ತೊಟ್ಟಿಕ್ಕುತ್ತದೆ. ಎಲ್ಲಿ ಮುಟ್ಟಿದರೂ ಅವು ಮೃದು; ಎಲ್ಲಿ ಮೆದ್ದರೂ ಅವು ಸಿಹಿ. 'ಭಕ್ತನಾದರೆ ಬಾಳೆಯ ಹಣ್ಣಿನಂತಿರಬೇಕು; ಭಕ್ತನಾದರೆ ಬೆಲ್ಲದ ಕುಳ್ಳಿಯಂತಿರಬೇಕು; ಭಕ್ತನಾದರೆ ಮಾವಿನ ಫಲದಂತಿರಬೇಕು"--ಎಂಬ ಮಾತು ಗಳು ಬಸವಣ್ಣನವರ ಭಕ್ತಿಯನ್ನೇ ನೋಡಿ ಹೇಳಿದಂತಿವೆ.

ಬಸವಣ್ಣನವರ ವಚನಗಳಲ್ಲಿರುವ ಭಕ್ತಿಯ ಮಿಡಿತ ಎಲ್ಲರ ಹೃದಯಗಳ ಲ್ಲಿಯೂ ಆ ಚೈತನ್ಯದ ದಿವ್ಯಧ್ವನಿ ಮಿಡಿಯುವಂತೆ ಮಾಡುತ್ತದೆ. ಅಂತಹ ಸರಳ ವಾದ ನೇರವಾದ ಮತ್ತು ಹೃದಯದಿಂದ ಹೃದಯಕ್ಕೆ ಮುಟ್ಟಬಲ್ಲ ಶಕ್ತಿಯನ್ನು ಆ ವಚನಗಳಲ್ಲಿ ಕಾಣುತ್ತೇವೆ. ಹೃದಯದ ತಳಮಳದಿಂದ ಹಿಡಿದು, ಅನುಭವದ ಶಾಂತಸ್ಥಿತಿಯವರೆಗೆ ಬಸವಣ್ಣನವರ ಸಾಧನೆಯ ವಿವಿಧ ಹಂತಗಳೆಲ್ಲಾ ಅವರ ವಚನ ಗಳಲ್ಲಿ ಯಥಾವತ್ತಾಗಿ ಮೂಡಿಬಂದಿವೆ. ಅದೊಂದು ಭಕ್ತಿಸಾಧನೆಯ ಜೀವಂತ ಕೈಪಿಡಿಯಿದ್ದಂತೆ ಎಂದು ಹೇಳಬಹುದು.

"ಅಯ್ಯ ಅಯ್ಯ ಎಂದು ಕರೆಯುತಲಿದ್ದೇನೆ; ಅಯ್ಯ ಅಯ್ಯ ಎಂದು ಒರಲು ತ್ತಲಿದ್ದೇನೆ. ಓ ಎನ್ನಲಾಗದೇ ಅಯ್ಯ?"—"ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆನ್ನ ಬಾಳುವೆ" "ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ, ವಿಚಾರಿಸಿ ದೊಡೇನೂ ಹುರುಳಿಲ್ಲವಯ್ಯ"—ಅಕಟಕಟ ಶಿವ ನಿನಗಿನಿತು ಕರುಣವಿಲ್ಲ. ಅಕಟ ಕಟ ಶಿವ ನಿನಗಿನಿತು ಕರುಣವಿಲ್ಲ; ಅಕಟಕಟ ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕದುಃಖಿಯ, ಪರಲೋಕ ದೂರನ?"—ಎಂಬ ಮುಂತಾದ ಮಾತುಗಳು ಭಕ್ತನ ಮನಸ್ಸಿನ ಪ್ರಾರಂಭದ ತಳಮಳವನ್ನು ವ್ಯಕ್ತಪಡಿಸುತ್ತವೆ. ಇದ ಪ್ರಾರಂಭದ ದೆಸೆಯೇ ಹೊರತು ಕೊನೆಯ ನಿಲವಲ್ಲ. ಬಸವಣ್ಣನವರು ಮುಂದೆ "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ" ಎಂದು ಹೇಳುತ್ತಾರೆ. "ಉರಿಬರಲಿ ಸಿರಿಬರಲಿ ಬೇಕು ಬೇಡೆನ್ನೆಸು" ಎಂಬಂತಹ ದೃಢನಿಷ್ಠೆಯಿಂದ "ಎನ್ನಮಾನಾಪಮಾನ ನಿಮ್ಮದಯ್ಯ; ಬಳ್ಳಿಗೆ ಕಾಯಿ ದಿಮ್ಮಿತ್ತೇ ಕೂಡಲ ಸಂಗಮದೇವ" ಎಂಬಂತಹ ಸರ್ವಸಮರ್ಪಣೆಯಿಂದ, "ಮಾವಿನ ಕಾಯೊಳಗೊಂದು ಎಕ್ಕೆಯಕಾಯಿ ನಾನಯ್ಯ" ಎಂಬಂತಹ ನಿರಹಂಕಾರದಿಂದ ಅವರ ಭಕ್ತಿಸಾಧನೆ ಮುಂದುವರಿಯಿತು.

"ತ್ರಿವಿಧ ದಾಸೋಹ"ದಿಂದ ಷಟ್‌ಸ್ಥಳದ ನಿಚ್ಚಣಿಕೆಯನ್ನೇರಿ ಲಿಂಗಾಂಗ ಸಾಮರಸ್ಯದ ನಿಲವಿಗೆ ಬಸವಣ್ಣನವರು ಬಂದರು. ಪ್ರಾರಂಭದ ತಳಮಳ ಹಿಂಗಿ

ಸಾಕ್ಷಾತ್ ಕೂಡಲಸಂಗಮದೇವನೇ ತಾವಾಗಿ, ತಮ್ಮನ್ನೇ ತಾವು ಹಾಡಿಕೊಳ್ಳುವ ಸ್ಥಿತಿ ಅವರದಾಯಿತು. ನೂರಾರು ವಚನಗಳಲ್ಲಿ ಬೆಳೆದುಬಂದ ಅವರ ಸಾಧನೆಯ ಚಿತ್ರ ಅಪೂರ್ವವಾದುದು. ಅವರ ಸಾಮರಸ್ಯದ ನಿಲವನ್ನು ಸೂಚಿಸುವ ವಚನಗಳಲ್ಲಿ ಒಂದನ್ನುಮಾತ್ರ ಇಲ್ಲಿ ಉದಾಹರಿಸಬಹುದು :

“ ಭಕ್ತಿಯೆಂಬ ಪೃಥ್ವಿಯಮೇಲೆ, (ಗುರುವೆಂಬ ಬೀಜವಂಕುರಿಸಿ)
ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯಮೇಲೆ—
ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು;
ನಿಷ್ಪತ್ತಿ ಎಂಬ ಹಣ್ಣಾಯಿತು.
ನಿಷ್ಪತ್ತಿಯೆಂಬ ಹಣ್ಣು ತೊಟ್ಟುಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ. ”

“ಇದೀ ಸಾಧನೆಯ ಮಾರ್ಗವನ್ನು ಸಿದ್ಧಿಯ ನಿಲುವನ್ನು ಈ ಒಂದು ವಚನದಲ್ಲಿ ಅಡಕಗೊಳಿಸಿದ್ದಾರೆ. ಭಕ್ತಿಯೇ ಸಾಧನೆಗೆ ಆಧಾರಭೂತವಾದ ಭೂಮಿ” ಅದರ ಮೇಲೆ ಗುರುವಿನ ಅನುಗ್ರಹದಿಂದ ದೈವಕೃಪೆ ಕುಡಿವಡೆಯುತ್ತದೆ. ಅದರಲ್ಲಿ ವಿಚಾರ ವೆಂಬ ಕಾಯಿ; ಅಂದರೆ ಆಚಾರ ವಿಚಾರಗಳ ಸಮನ್ವಯವಾಗಬೇಕು. ಇದರ ಸಾರ್ಥ ಕತೆ ನಿಷ್ಪತ್ತಿ ಎಂಬ ಹಣ್ಣಿನಲ್ಲಿ. ಬುದ್ಧಿಗೆ ಅತೀತವಾದ ಅನುಭಾವದ ಬೆಳಕೇ ನಿಷ್ಪತ್ತಿ. ಅದೇ ಉದ್ದೇಶಿತ ಫಲ. ಅದು ತೊಟ್ಟುಕಳಚಿ ಬೀಳುವುದರಲ್ಲಿರಲು ಕೂಡಲಸಂಗಮ ದೇವ ಎತ್ತಿಕೊಂಡು ತನ್ನ ಹೃದಯದಲ್ಲಿಂಬಿಟ್ಟುಕೊಂಡ. ಹೀಗೆ ಬಸವಣ್ಣನವರ ಜೀವನ ಹಣ್ಣಾಗಿ ಅದು ಕೂಡಲಸಂಗನಿಗೆ ಅರ್ಪಿತವಾಯಿತು.

ಸಾಧಕರಾಗಿ ಬಸವಣ್ಣನವರು ಲಿಂಗಾಂಗ ಸಾಮರಸ್ಯ ಪಡೆದರು; ಅತ್ಯುನ್ನತ ವಾದ ನಿಲವನ್ನು ಏರಿದರು. ಕೊನೆಯವರೆಗೂ ಮಂತ್ರಿಯ ಪದವಿಯಲ್ಲಿದ್ದುಕೊಂಡೇ ಲೌಕಿಕ ಪಾರಮಾರ್ಥಿಕಗಳೆರಡನ್ನೂ ಜೊತೆಜೊತೆಯಾಗಿ ಸಾಧಿಸಿಕೊಂಡು ಹೋದರು. ಯಾವುದನ್ನ ಸಾಧಿಸುವುದಕ್ಕಾಗಿ ಬುದ್ಧ ರಾಜ್ಯವನ್ನು ತ್ಯಜಿಸಿದನೋ ಅದನ್ನು ಬಸವಣ್ಣ ನವರು ರಾಜ್ಯವನ್ನು ಕಟ್ಟಿಕೊಂಡೇ ಪಡೆದರು. ಇದು ಅವರು ಮಾಡಿದ ಪವಾಡಗಳಲ್ಲಿ ಎಲ್ಲಕಿಂತ ಹೆಚ್ಚಿನದು.

ಲೋಕಸಂಸಾರವನ್ನು ಕಟ್ಟಿಕೊಂಡಿದ್ದ ಅವರು ತಮ್ಮೊಬ್ಬರ ಸಾಮರಸ್ಯದ ಸುಖ ದಿಂದ ತೃಪ್ತರಾಗಲಿಲ್ಲ. ತಮ್ಮ ಸುತ್ತಮುತ್ತಲಿನ ಜನರ ದುಃಖ ಅವರ ಮನಸ್ಸನ್ನು ಕರಗಿಸಿತು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಸ್ವಾರ್ಥಸಾಧನೆ ಮತ್ತು ಅಂಧ ಶ್ರದ್ಧೆಗಳು ಅವರನ್ನು ಕೆರಳಿಸಿದುವು. ಮೇಲು ಕೀಳೆಂಬ ಸಮಾಜದ ವಿಷಮತೆಗೆ

ಧರ್ಮದ ಅಂಗೀಕಾರಮುದ್ರೆ ಬಿದ್ದಿದ್ದುದು ಅವರಿಗೆ ನೋವನ್ನುಂಟುಮಾಡಿತು. ಧರ್ಮದ ಈ ಆವರಣಗಳನ್ನು ಕತ್ತರಿಸಿಹಾಕಿ, ಅದರ ಅಮೃತ ಫಲಗಳನ್ನು ಎಲ್ಲರಿಗೂ ಉಣಬಡಿಸುವ ಸಾಹಸವನ್ನು ಬಸವಣ್ಣನವರು ಕೈಕೊಂಡರು. ಅದಕ್ಕನುಗುಣವಾಗಿ ಅವರ ವಿಚಾರಧಾರೆ ಹರಿಯಿತು.

ಅಂದು ಬಸವಣ್ಣನವರು ಹರಿಯಿಸಿದ ವಿಚಾರಧಾರೆ ಅಂದಿಗೆ ಮಾತ್ರವಲ್ಲದೆ ಎಂದೆಂದಿಗೂ ಎಲ್ಲರಿಗೂ ಮಾರ್ಗದರ್ಶಕವಾಗುವಷ್ಟು ವ್ಯಾಪಕವಾದ ಶಕ್ತಿಯನ್ನು ಪಡೆದಿದೆ. ಏಕೆಂದರೆ ಅವರು ಧರ್ಮದ ವಿಚಾರದಲ್ಲಾಗಲೀ ಸಮಾಜ ವ್ಯಕ್ತಿ ಇವುಗಳ ಅಭ್ಯುದಯದ ವಿಚಾರದಲ್ಲಾಗಲೀಅಂಧಶ್ರದ್ಧೆಯನ್ನು ಅವಲಂಬಿಸದೆ ಜೀವನದ ಹೋರಾಟಕ್ಕೆ ಚಿರಂತನವಾದ ಉತ್ತರವನ್ನು ಕಂಡುಕೊಂಡಿದ್ದಾರೆ. ಹಿಂದಿನ ಧರ್ಮಗ್ರಂಥಗಳಿಂದ ಬಸವಣ್ಣನವರು ಪ್ರೇರಣೆ ಪಡೆದರು; ನಿಜ. ಆದರೆ ಅವುಗಳನ್ನು ತಮ್ಮ ಅನುಭವದ ಕುಲುಮೆಯಲ್ಲಿ ಕಾಯಿಸಿ ಬಡಿದು ಅಪರಂಜಿಯನ್ನು ಮಾತ್ರ ಅಂಗೀಕರಿಸಿದರು. ತಮಗೆ ಸತ್ಯವೆನಿಸಿದುದನ್ನು ಯಾವ ದಾಕ್ಷಿಣ್ಯವೂ ಇಲ್ಲದೆ ಪ್ರತಿಪಾದಿಸಿದರು; ಕಾವ್ಯಗತಗೊಳಿಸಿದರು. ಪೂರ್ಣ ಧರ್ಮದ ಶಾಶ್ವತ ಸತ್ಯಗಳನ್ನು ಸಾರಿದ ಅವರ ನುಡಿಗಳು ಎಷ್ಟೋವೇಳೆ ಕ್ರಾಂತಿಕಾರಕವಾಗಿ ಪರಿಣಮಿಸಿದುವು. ಅವರ ಆ ವಿಚಾರವಾಹಿನಿಯ ಸಂಕ್ಷೇಪ ಪರಿಚಯವನ್ನು "ವ್ಯಕ್ತಿಸಾಧನೆ ಮತ್ತು ಬೋಧನೆ "ಸಮಾಜ ರಚನೆ" ಮತ್ತು "ಧಾರ್ಮಿಕ ಆಚರಣೆ"—ಈ ಮೂರು ಅಂಶಗಳಲ್ಲಿ ಗಮನಿಸಿ ನೋಡಬಹುದು.

ಸಮಾಜದಲ್ಲಿ ಅವರ ಘಟಕಗಳಾದ ಒಬ್ಬೊಬ್ಬ ವ್ಯಕ್ತಿಯ "ಉದಯ"ವೂ ಆಗಬೇಕಾದುದು ಅವಶ್ಯಕ. ವ್ಯಕ್ತಿಗಳು ದೊಡ್ಡವರಾದರೆ ಸಮಾಜ ದೊಡ್ಡದಾಗುತ್ತದೆ. ವ್ಯಕ್ತಿ ತನ್ನ ವೈಯಕ್ತಿಕ ಜೀವನವನ್ನು ಉದಾತ್ತವಾದ ರೀತಿಯಲ್ಲಿ ಬೆಳಸಿಕೊಳ್ಳದ ಹೊರತು ಸಮಾಜಕ್ಕೆ ಮಾರ್ಗದರ್ಶಕನಾಗಲಾರ—ಎಂದು ನಂಬಿದ ಬಸವಣ್ಣನವರು ವ್ಯಕ್ತಿಯ ಉದ್ಧಾರಕ್ಕೆ ಅತಿಹೆಚ್ಚಿನ ಪ್ರಾಮುಖ್ಯವನ್ನು ಕೊಟ್ಟಿದ್ದಾರೆ. ಅದಕ್ಕೆ ಸಹಾಯವಾದ ನೈತಿಕ ಆಚರಣೆಗಳಲ್ಲಿ ಅವರು ಎರಡು ಅಂಶಗಳನ್ನು ಕಂಡರು. ಒಂದು ವೈಯಕ್ತಿಕ ನೀತಿ; ಇನ್ನೊಂದು ಸಾಮಾಜಿಕ ನೀತಿ. ವಾಸ್ತವವಾಗಿ ಇವೆರಡು ಬೇರೆಬೇರೆಯಲ್ಲ. ಇವೆರಡೂ ಸಮನ್ವಯಗೊಂಡಾಗ ಪೂರ್ಣಜೀವನವಾಗುತ್ತದೆಂದು ತುಂಬು ಜೀವನದ ನೈತಿಕ ಮಾರ್ಗವನ್ನು ಮುಂದೆ ಇಟ್ಟರು.

ತನು ಮನ ಧನಗಳನ್ನು ನೈತಿಕ ಜೀವನದ ನಿಚ್ಚಣಿಕೆಗಳನ್ನಾಗಿ ಬಸವಣ್ಣನವರು ಪರಿವರ್ತಿಸಿದರು. 'ತನು' ಅಂದರೆ ಈ ಸ್ಥೂಲದೇಹ ಬಹಳ ಮುಖ್ಯವಾದುದು. ಇದು ಅಶಾಶ್ವತವಾಗಿರಬಹುದು; ಆದರೆ ಅಮುಖ್ಯವಲ್ಲ. ಬೆಂಕಿಯು ವಸ್ತುಗಳನ್ನು ಆಶ್ರಯಿಸಿಯೇ ವ್ಯಕ್ತವಾಗುವಂತೆ ಆತ್ಮ ಈ ದೇಹವನ್ನು ಧರಿಸಿಯೇ ಸಾಧನೆಯನ್ನು

ಕೈಕೊಳ್ಳಬೇಕು. ಇದು ಅತ್ಯಗತ್ಯವಾದ ಪವಿತ್ರ ಸಾಧನ. ಇದನ್ನು ತಿರಸ್ಕರಿಸದೆ ಸಾಧನೆಗೆ ಕೈದುವನ್ನಾಗಿ ಮಾರ್ಪಡಿಸಿಕೊಳ್ಳಬೇಕು.—ಎಂಬುದು ಬಸವಣ್ಣನವರ ಅಭಿಮತ. ಅವರ ಈ ಒಂದು ವಚನ ನೋಡಬಹುದು.

ಉಳ್ಳವರು ದೇವಾಲಯವ ಮಾಡುವರು ;
ನಾನೇನ ಮಾಡುವೆನಯ್ಯ ; ಬಡವನಯ್ಯ
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಶಿರ ಹೊನ್ನ ಕಳಶವಯ್ಯ ;
ನೋಡಯ್ಯ ಕೂಡಲಸಂಗಮದೇವ, ಕೇಳಯ್ಯ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ಹೀಗೆ ದೇಹವನ್ನೇ ದೇಗುಲವನ್ನಾಗಿ ಪರಿವರ್ತಿಸಬೇಕು ಸಾಧಕ. ಅಲ್ಲವಾದರೆ ಈ ದೇಹ ವ್ಯರ್ಥ. "ವ್ಯಾಧನೊಂದು ಮೊಲವ ತಂದರೆ ಸಲುವ ಹಾಗಕ್ಕೆ ಬೆಲೆಗೈವರಯ್ಯ ನೆಲನಾಳ್ವನ ಹೆಣವೆಂದರೆ ಒಂದಡಕೆಗೆ ಕೊಂಬರಿಲ್ಲ ನೋಡಯ್ಯ" ಎಂಬ ವಚನದಲ್ಲಿ ಅದನ್ನು ಎಚ್ಚರಿಸಿದ್ದಾರೆ. ಒಂದು ಮೊಲ ಸತ್ತ ಮೇಲೂ ನಾಲ್ಕುಕಾಸು ಬಾಳುತ್ತದೆ. ಆನೆಯಂತಹ ಕೆಲವು ಪ್ರಾಣಿಗಳಂತೂ ಸತ್ತು ಸಾವಿರ ಬಾಳುತ್ತವೆ. ಆದರೆ ಮನುಷ್ಯ ದೇಹಕ್ಕೆ ಬೆಲೆಯೇನಿದೆ ? ನೆಲವನ್ನು ಆಳುತ್ತಿದ್ದ ರಾಜನ ಹೆಣವನ್ನು ಕೂಡ ಒಂದು ಅಡಕೆ ಕೊಟ್ಟು ಯಾರೂ ಕೊಳ್ಳಲಾರರು. "ಮೊಲನಿಂದ ಕರಕಷ್ಟ ನರನ ಬಾಳುವೆ," ತನ್ನನ್ನು ತಾನು ಮರೆತರೆ, ತನ್ನನ್ನು ತಾನು ಅರಿತರೆ ಹರನಿಗಿಂತ ಮಿಗಿಲು. ಆಗ ಈ ದೇಹವೇ ಜಂಗಮ ದೇವಾಲಯವಾಗುತ್ತದೆ.

ಹಾಗೆಯೇ ಧನ ಅಥವಾ ಸಂಪತ್ತು. ಇದನ್ನು ಮಾಯೆ ಎಂದು ಹಳಿಯುವುದಾಗಲೀ, ತಿರಸ್ಕರಣೀಯವೆನ್ನುವುದಾಗಲೀ ಸಲ್ಲದು ಇದು ಜೀವನದ ಎಲ್ಲ ಕಾರ್ಯಗಳಿಗೂ ಅತ್ಯಾವಶ್ಯಕವಾದುದು. ಆದರೆ ಅದು ಮೋಹಮೂಲವಾಗಿ ಬಂಧಕವಾಗಬಾರದು. ಅದನ್ನು ಪಡೆಯುವ ಮಾರ್ಗ ಮತ್ತು ವಿನಿಯೋಗಿಸುವ ರೀತಿ ಎರಡೂ ತ್ಯಾಗಮೂಲವಾಗಿರಬೇಕು ; ಶುದ್ಧವಾದವುಗಳಾಗಿರಬೇಕು.

ಪಾಪಿಯಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ ;
ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯ.
ನಮ್ಮ ಕೂಡಲಸಂಗನ ಶರಣರಿಗಲ್ಲದೆ
ಮಾಡುವ ಅರ್ಥ ವ್ಯರ್ಥ ಕಂಡಯ್ಯ.

ಎನ್ನುತ್ತಾರೆ ಬಸವಣ್ಣನವರು. ಸನ್ಮಾರ್ಗದಲ್ಲಿ ಧನವನ್ನು ಗಳಿಸಬೇಕು ; ಸತ್ಪಾತ್ರಕ್ಕಾಗಿ ಸತ್ಕಾರ್ಯಗಳಿಗಾಗಿ ಅದನ್ನು ವಿನಿಯೋಗಿಸಬೇಕು,

ಹೀಗೆ ತನು ಮತ್ತು ಧನಗಳೆರಡೂ ಅವನ್ನು ಉಪಯೋಗಿಸುವ ಮನದಿಂದ ಮಹತ್ವನ್ನು ಪಡೆಯುತ್ತವೆ. ಮನ ಹೀನವಾದರೆ ಅಲ್ಲಿಗೆ ಭಕ್ತಿ ಮುಗಿದಂತೆ:

ಚೇಳಿಂಗೆ ಬಸುರಾಯಿತ್ತೇ ಕಡೆ;
ಬಾಳೆಗೆ ಫಲವಾಯಿತ್ತೇ ಕಡೆ; ನೋಡಾ.
ರಣರಂಗದಲ್ಲಿ ಕಾದುವ ಓಲೆಯಕಾರರಿಗೆ
ಓಸರಿಸಿತ್ತೇ ಕಡೆ;
ಮಾಡುವ ಭಕ್ತಂಗೆ ಮನ ಹೀನವಾದರೆ
ಅದೇ ಕಡೆ ಕೂಡಲ ಸಂಗಮದೇವಾ

ಎಂದಿದ್ದಾರೆ ಬಸವಣ್ಣನವರು. ಮನಸ್ಸೇ ಬಂಧಕ್ಕೂ ಮೋಕ್ಷಕ್ಕೂ ಕಾರಣ. ಅಂತರಂಗದ ಶುದ್ಧಿ ಎಲ್ಲ ಸಾಧನೆಗೂ ಆಧಾರಭೂತವಾದದ್ದು. ದೇಹ ಬೆತ್ತಲೆ ಇದ್ದರೇನು? ತಲೆ ಬೋಳಿಸಿದರೇನು? ಭಸ್ಮವನ್ನು ಧರಿಸಿದರೇನು? "ಮಾಡುವ ಕ್ರಿಯೆ ಭಸ್ಮವಾದರೆ ಶರಣ." ಒಳಗೆ ತೊಳೆಯುವುದನ್ನು ಅರಿಯದೆ ಹೊರಗೆ ತೊಳೆದರೆ ವ್ಯರ್ಥ.

ನಾನಾಮುಖವಾಗಿ ಹರಿದು ಹಂಚಿಹೋಗುತ್ತಿರುವ ಮನಸ್ಸಿನ ಶಕ್ತಿಯನ್ನು ಕೇಂದ್ರೀಕರಿಸುವುದು ಹೇಗೆ? ಮನಸ್ಸಿನ ವ್ಯಾಪಾರಗಳನ್ನೆಲ್ಲಾ ಕೃತಕವಾಗಿ ನಿಗ್ರಹಿಸುವ ಕಠಿಣತಮ ವೈರಾಗ್ಯವನ್ನು ಬಸವಣ್ಣನವರು ಬೋಧಿಸಲಿಲ್ಲ. ಅವರು ತೋರಿಸಿದ ಮಾರ್ಗ ಸಾಮಾನ್ಯ ಚೇತನಗಳೂ ಒಂದೊಂದಾಗಿ ಹೆಜ್ಜೆಯಿಟ್ಟು ನಡೆಯಬಹುದಾದ ಮಾರ್ಗ. ಹೊನ್ನು ಹೆಣ್ಣು ಮಣ್ಣುಗಳನ್ನು ಮಾಯೆಯೆಂದಷ್ಟೂ ಅವುಗಳ ಆಕಾಂಕ್ಷೆ ಭೂತಾಕಾರವಾಗಿ ಕಾಡುತ್ತದೆ. ಆದರೆ ಅವುಗಳನ್ನು ಪಡೆದು ಮತ್ತೆ ಪಡೆಯಬೇಕೆಂಬ ಮನದ ಮುಂದಣ ಆಶೆಯನ್ನು ಗೆದ್ದಾಗ ಅವುಗಳು ಬಂಧಕಗಳಾಗಿ ಪರಿಣಮಿಸವು. ಇದನ್ನು ಬಸವಣ್ಣನವರು ಹೀಗೆ ಹೇಳಿದ್ದಾರೆ:

ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು;
ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು.
ಸತಿ ಪತಿ ರತಿ ಸುಖವ ಬಿಟ್ಟರೇ ಸಿರಿಯಾಳ ಚಂಗಳೆಯರು?
ಸತಿ ಪತಿ ರತಿಸುಖ ಭೋಗೋಪಭೋಗವ ಬಿಟ್ಟರೇ ಸಿಂಧುಬಲ್ಲಾಳರು?
ನಿಮ್ಮ ಮುಟ್ಟಿ ಪರಸ್ತ್ರೀಗೆಳಸಿದಡೆ ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವಾ.

ಇಂದ್ರಿಯಗಳು ಬಯಸುವ ಸುಖವನ್ನು ನ್ಯಾಯವಾದ ಮಾರ್ಗದಿಂದ ಪಡೆದು, ಅನುಭವಿಸಿ, ಆ ಇಂದ್ರಿಯಗಳೇ ಆ ಸುಖದ ಮಿತಿಯನ್ನು ಕಂಡುಕೊಳ್ಳುವಂತೆ ಮಾಡಬೇಕು. ಇದನ್ನು ಸಾಧಿಸದೆ ತನುವನ್ನು ಕರಗಿಸಿ ಕೊರಗಿಸಿ ಮನವನ್ನು ಬಳಲಿ

ಸಿದರೆ ಪ್ರಯೋಜನವಿಲ್ಲ. ಇದಕ್ಕೆ ಒಂದು ಸುಂದರವಾದ ಸಾಮ್ಯವನ್ನು ಕೊಡುತ್ತಾರೆ ಬಸವಣ್ಣನವರು.

ಹುತ್ತವ ಬಡಿದೊಡೆ ಹಾವು ಸಾಯಬಲ್ಲದೇ ಅಯ್ಯಾ ?
ಅಘೋರ ತಪವ ಮಾಡಿದೊಡೇನು ?
ಅಂತರಂಗ ಆತ್ಮಶುದ್ಧಿ ಇಲ್ಲದವರನೆಂತು–
ನಂಬುವೆನಯ್ಯಾ ಕೂಡಲ ಸಂಗಮದೇವಾ.

ಕೇವಲ ಬಹಿರಂಗ ಆಡಂಬರಗಳು ಹುತ್ತವನ್ನು ಬಡಿದಂತೆ. ಅದರಿಂದ ಒಳಗಿರುವ ಹಾವು ಸಾಯಲಾರದು. "ಬಂಡಿ ತುಂಬ ಪತ್ರಿಯ ತಂದು ಕಂಡುಕಂಡಲ್ಲಿ ಮಜ್ಜನಕ್ಕೆರೆದರೂ ಸುಖವಿಲ್ಲ. "ಸಕಲ ಇಂದ್ರಿಯಗಳಲ್ಲಿ ವಿಚಾರಿಸುವ" ಮನಸ್ಸನ್ನು ಪರಿಶುದ್ಧಗೊಳಿಸಿದವನೇ ಸುಖಿ. ಮನಸ್ಸೇ ಮಹಾದೇವನ ಸ್ಥಿತಿಯನ್ನು ತರಬಲ್ಲುದು.

ಬಸವಣ್ಣನವರ ಬೋಧೆಯೆಲ್ಲಾ ಇದಕ್ಕೆ ಸಹಾಯಕವಾಗುವಂತಹದು. ಭಕ್ತಿ ಹೃದಯದ ಅನುಕಂಪೆಯಿಂದ ಅವರ ಮಾತುಗಳು ಆರ್ದ್ರವಾಗಿವೆ. "ಎಲೆ ಎಲೆ ಮಾನವ ಅಳಿಯಾಸೆ ಬೇಡವೋ, ಕಾಡ ಬೆಳುದಿಂಗಳ ಸಿರಿ ಸ್ಥಿರವಲ್ಲ" ಎಂದು ಜನರನ್ನು ಕೇಳಿಕೊಳ್ಳುತ್ತಾರೆ. ಮುಂದಿನ ಕ್ಷಣದಲ್ಲಿ ಬರುವ ಸಂಕಟಗಳನ್ನು ಅರಿಯದೆ "ಹರಕೆಗೆ ತಂದ ಕುರಿ, ತೋರಣಕ್ಕೆ ಕಟ್ಟಿದ ತಳಿರ ಮೇಯುವಂತೆ" "ಹಾವಿನ ಬಾಯ ಕಪ್ಪೆ ಹಸಿದು, ಹಾರುವ ನೊಣಕ್ಕೆ ಆಶೆ ಮಾಡುವಂತೆ" ಮನುಷ್ಯ ಈ ವಿಷಯ ಸುಖವೇ ಶಾಶ್ವತವೆಂದು ಭ್ರಾಂತನಾಗಿರುವುದನ್ನು ಕಂಡು ಪರಿತಪಿಸುತ್ತಾರೆ. "ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ" ಅವರ ಸ್ಥಿತಿ ಎಂಬುದನ್ನು ತಿಳಿದು ಅವರಿಗಾಗಿ ಮರುಗುತ್ತಾರೆ.

ಇನ್ನೇನು ಉದ್ಧಾರವೇ ಇಲ್ಲವೆನ್ನುವಂತಹ ಪಾಪಿಗೂ ಕೂಡ ಅವರ ಕೃಪಾಸಾಗರದಲ್ಲಿ ಆಶ್ರಯವುಂಟು. ಹಿಂದಿನ ಕರ್ಮಗಳಿಗೆ ಪಶ್ಚಾತ್ತಾಪ ಪಟ್ಟರೆ ಅದರಿಂದ ಮುಂದೆ ಸನ್ಮಾರ್ಗಗಾಮಿಯಾಗಲು ಅವಕಾಶವಾಗುತ್ತದೆಂದು ಆಶ್ವಾಸನೆ ಕೊಡುತ್ತಾರೆ.

ಇಹಲೋಕದ ಜೀವನವನ್ನು ಸಾಧನೆಯ ಸನ್ನಿವೇಶಕ್ಕೆ ಅಳವಡಿಸಿಕೊಳ್ಳಬೇಕೆಂಬುದೇ ಬಸವಣ್ಣನವರು ಬೋಧಿಸಿದ ಮುಖ್ಯ ತತ್ವ. ಅದಕ್ಕೆ ಜಾತಿ ಮತ ಉದ್ಯೋಗ ಯಾವುದೂ ಅಡ್ಡಿಯಾಗಲಾರದು. ಅದಕ್ಕೆ ಸಹಾಯಕವಾಗುವ ನೈತಿಕ ಜೀವನವನ್ನು ಜನರಲ್ಲಿ ಬೆಳೆಸಲು ಸಾಹಸಪಟ್ಟರು. ಕಳ್ಳತನ ಕಪಟ ಹಿಂಸೆ ದುರಾಚಾರ, ದುಶ್ಶೀಲ ಮೊದಲಾದುವುಗಳನ್ನೆಲ್ಲಾ ಖಂಡಿಸಿದರು. ಅಂಗಗುಣಗಳನ್ನು ಅಳಿದು

"ಲಿಂಗಗುಣ"ಗಳು ಬೆಳೆಯಲು ಸಹಾಯಕವಾದ ಆಚಾರಗಳನ್ನು ಸಮಾಜದ ಮುಂದಿಟ್ಟರು.

ಆದರೆ ಈ ಪೂರ್ಣಧರ್ಮದ ಆಚರಣೆಗೆ ಅಂದಿನ ಹಿಂದೂ ಸಮಾಜ ರಚನೆ ತೊಡಕಾಗಿ ಪರಿಣಮಿಸಿತ್ತು. ಅನೇಕ ಕೃತಕ ವಿಭಜನೆಗಳು ಸಮಾಜದಲ್ಲಿ ತಲೆಯೆತ್ತಿ ನಿಂತಿದ್ದುವು. ಅವುಗಳಲ್ಲಿ ಮುಖ್ಯವಾದುದು ವರ್ಣವಿಭೇದ. ಚತುರ್ವರ್ಣಗಳ ಮೂಲವೇನೇ ಇರಲಿ, ಅದರ ಹಿಂದಿರುವ ತತ್ವ ಎಂಥದೇ ಆಗಿರಲಿ ಬಸವಣ್ಣನವರ ಕಾಲಕ್ಕಾಗಲೇ ಇವು ವಿರೂಪಮಾರ್ಗ ಹಿಡಿದಿದ್ದುವು. ಇವುಗಳ ಜೊತೆಗೆ ಅಸ್ಪೃಶ್ಯ ವೆಂಬ ಪಂಚಮ ವರ್ಣವೂ ಸೇರಿ ಹಿಂದೂ ಧರ್ಮಕ್ಕೆ ಹಿಡಿದಿದ್ದ ಕಳಂಕವನ್ನು ಸಾರಿ ಹೇಳುತ್ತಿತ್ತು. ಈ ವಿಭಜನೆಗಳನ್ನು ತೀವ್ರವಾಗಿ ಪ್ರತಿಭಟಿಸಿದರು ಬಸವಣ್ಣನವರು.

ಕೊಲ್ಲುವವನೇ ಮಾದಿಗ, ಹೊಲಸು ತಿಂಬವನೇ ಹೊಲೆಯ;
ಕುಲವೇನೋ ಆವಂದಿರ ಕುಲವೇನೋ,
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ
ಕೂಡಲ ಸಂಗನ ಶರಣರೆಲ್ಲ ಕುಲಜರು.

ಮನುಷ್ಯನ ಯೋಗ್ಯತೆಯನ್ನು ನಿರ್ಧರಿಸುವುದು ಅವನ ಹುಟ್ಟಿನಿಂದಲ್ಲ; ಅವನ ಆಚಾರ ವಿಚಾರಗಳಿಂದ, ಗುಣಕರ್ಮಗಳಿಂದ ಎಂದು ಘೋಷಿಸಿದರು. ತತ್ವಶಃ ಘೋಷಿಸಿದ್ದು ಮಾತ್ರವಲ್ಲ; ಕಾರ್ಯತಃ ಅದನ್ನು ಆಚರಣೆಗೂ ತಂದರು; ನುಡಿದಂತೆ ನಡೆದರು.

ಇದು ತುಂಬಾ ಕ್ರಾಂತಿಕಾರಕವಾದ ಆಚರಣೆ ಆದರಲ್ಲಿಯೂ ಎಂಟುನೂರು ವರ್ಷಗಳ ಹಿಂದೆ ಸಮಾಜದಲ್ಲಿ ಇದರಿಂದ ಆದ ಪರಿಣಾಮವನ್ನು ಊಹಿಸುವುದೂ ಕಷ್ಟ. "ಉತ್ತಮ ವರ್ಣ"ದವರು ಯಾರನ್ನು ಬಹಳ ದೂರದಲ್ಲಿಟ್ಟಿದ್ದರೋ, ಯಾರ ಮುಖಾವಲೋಕನದಿಂದಲೇ ಮತ್ತೆ ಸ್ನಾನ ಮಾಡಬೇಕಾಗಿದ್ದಿತೋ, ಅಂತಹ ಅಸ್ಪೃಶ್ಯರನ್ನು ಬಸವಣ್ಣ ತನ್ನ ಅನುಭವಮಂಟಪಕ್ಕೆ ಸೇರಿಸಿದ. ಅವರನ್ನು ಸ್ಪೃಶ್ಯರನ್ನಾಗಿಸಿದುದು ಮಾತ್ರವಲ್ಲ; ಧರ್ಮದಲ್ಲಿ ಅವರಿಗೂ ಸಮಾನ ಅಧಿಕಾರವನ್ನು ಕೊಟ್ಟ. ಹರಳಯ್ಯ, ಶಿವನಾಗಮಯ್ಯ, ಮಾದಾರ ಧೂಳಯ್ಯ ಮೊದಲಾದ ಅಸ್ಪೃಶ್ಯರು ಬಸವಣ್ಣನವರ ಆಶ್ರಯ ಪಡೆದು ಶರಣರಾದರು; ಅನುಭವಿಗಳಾದರು; ಬಸವಣ್ಣನ ಮಹದಾಶೆಯ ಸಾರ್ಥಕ ಮೂರ್ತಿಗಳಾದರು.

ಆದರೆ ಸಮಾಜದಿಂದ ಪ್ರಬಲವಾದ ಪ್ರತಿಭಟನೆಯನ್ನು ಅವರು ಎದುರಿಸಬೇಕಾಯಿತು. ಸಂಪ್ರದಾಯವಾದಿಗಳಾದ ಕರ್ಮಠರ ಮಧ್ಯೆ ನಿಂತು ಸ್ವತಂತ್ರ ವಿಚಾರದ ಬೆಳಕನ್ನು ಬೀರಲು ಹವಣಿಸಿದ ಬಸವಣ್ಣನವರ ಕಾರ್ಯಕ್ಷೇತ್ರದಲ್ಲಿದ್ದ ತೊಡಕನು

ಇಂದು ನಾವು ಊಹಿಸಿಕೊಳ್ಳಬಹುದು. ಮಾದಿಗರ ಹರಳಯ್ಯನ ಮಗನಿಗೆ ಬ್ರಾಹ್ಮ ಣರ ಮಧುವರಸನ ಮಗಳನ್ನು ಕೊಟ್ಟು ವಿವಾಹ ಮಾಡುವಷ್ಟರ ಮಟ್ಟಿಗೆ ಹೋದಾಗ, ವಿರೋಧಿಗಳ ಕೈ ಮೇಲಾಯಿತು. "ವರ್ಣಸಂಕರ"ವಾಯಿತೆಂದು ರಾಜನಲ್ಲಿ ದೂರಿಟ್ಟರು. ರಾಜ ಬಿಜ್ಜಳ "ಧರ್ಮರಕ್ಷಣೆ"ಗಾಗಿ ಹರಳಯ್ಯ ಮಧುವರಸರನ್ನು ಆನೆಯ ಕಾಲಿಗೆ ಕಟ್ಟಿ ಎಳಸುವ ಉಗ್ರಶಿಕ್ಷೆ ವಿಧಿಸಿದ.

ಅಂದು ಬಸವೇಶ್ವರ ತೋರಿಸಿದ ಸಾಹಸದಿಂದ ಸಂಪ್ರದಾಯವಾದಿಗಳ ಎದೆ ಇಂದೂ ನಡುಗಬಹುದು. ಆದರೂ ಇಂದಿನ 'ಗಾಂಧಿಯುಗ'ದಲ್ಲಿರುವ ನಾವು ಅಂತಹ ಘಟನೆಗಳನ್ನು ಅರಗಿಸಿಕೊಳ್ಳಬಲ್ಲೆವು. ಆದರೆ ಸಮಾಜ ಅದನ್ನು ತಾಳಲಾ ರದೇ ಹೋಯಿತು. ಬಸವಣ್ಣ ತನ್ನ ಕಾಲಕ್ಕಿಂತ 800 ವರ್ಷಗಳು ಮುಂದಿದ್ದನೆನ್ನ ಬಹುದು.

ಈ ವರ್ಣಗಳು ಮಾತ್ರವಲ್ಲದೆ ಇವುಗಳೊಳಗಿನ ನೂರಾರು ಜಾತಿಭೇದಗಳು ಅವುಗಳಲ್ಲಿ ಮೇಲುಕೀಳೆಂಬ ಕಚ್ಚಾಟಗಳು ಇವುಗಳನ್ನು ಕಂಡು ಬಸವಣ್ಣನ ಮನಸ್ಸು ರೋಸಿ ಹೋಯಿತು. ಅವರಿಗೆ ಮಾನವ ವರ್ಗದಲ್ಲೆಲ್ಲಾ ಕಂಡದ್ದು ಎರಡೇ ಕುಲ ಗಳು. "ಜಾತಿ ಗೋತ್ರಗಳೊಳಗೆ ಗುಣದಿಂದ ನೀಚ ಶ್ರೇಷ್ಠ" ಎಂಬ ಎರಡು ಕುಲ ಗಳನ್ನು ಮಾತ್ರ ಹೇಳಿದರು. ನೀಚರಿಗೆ ಶ್ರೇಷ್ಠರಾಗುವ ಅವಕಾಶವನ್ನು ಸದಾ ಕಲ್ಪಿಸಿ ಕೊಟ್ಟರು.

ಮುಖ್ಯವಾಗಿ ಜೀವನದ ನಿರ್ವಹಣೆಗೋಸ್ಕರವಾಗಿ ಕೈಕೊಂಡ ವೃತ್ತಿಯಿಂದಲೇ ವ್ಯಕ್ತಿಯ ಯೋಗ್ಯತೆಯನ್ನು ಅಳೆಯುವ ಸಮಾಜದ ಮನೋಧರ್ಮ ಬದಲಾಗ ಬೇಕಾಗಿತ್ತು. ಮೇಲು ಕೀಳೆಂಬುದು ಉದ್ಯೋಗದಲ್ಲಿಲ್ಲ; ಅದನ್ನು ನಿರ್ವಹಿಸುವ ಮನೋಧರ್ಮದಲ್ಲಿದೆ. ಉದ್ಯೋಗಗಳು 'ಕಾಯಕ'ಗಳಾಗಿ ಪರಿಣಮಿಸಿದಾಗ ಅವು ಸಾಧನೆಗೆ ಅಡ್ಡಿಯಾಗುವುದಿಲ್ಲ—ಎಂದು ಬಸವಣ್ಣ ಸಾರಿದ.

'ಕಾಯಕ' ಎಂಬ ಮಾತು ಅವನು ವಿಚಾರಪ್ರಪಂಚಕ್ಕೆ ಕೊಟ್ಟ ಕಾಣಿಕೆ. "ಹೊಲೆ ಹೊಲೆಯರ ಮನೆಯ ಹೊಕ್ಕು, ಸಲೆ ಕೈಕೂಲಿಯ ಮಾಡಿಯಾದರೆಯೂ ನಿಮ್ಮ ನೆಲವಿಂಗೆ ಕುದಿವೆನಲ್ಲದೆ, ಎನ್ನೊಡಲವಸರಕ್ಕೆ ಕುದಿದೆನಾದೊಡೆ, ತಲೆದಂಡ"— ಎಂಬ ಮಾತಿನಲ್ಲಿ ಕಾಯಕದ ಅರ್ಥ ಸೂಚಿತವಾಗಿದೆ. ಜಗತ್ತಿನ ಹಿತಕ್ಕಾಗಿ "ಕುದಿ"ಯುತ್ತಾ ಯಾವ ಉದ್ಯೋಗವನ್ನು ಕೈಕೊಂಡರೂ ಅದು ಕಾಯಕವಾಗು ತ್ತದೆ. ಕೈಕೊಂಡ ಉದ್ಯೋಗ ಸಮಾಜಕ್ಕೆ ಹಾನಿಕಾರಕವಾಗಿರದು. ಸಮಾಜದ ಆವಶ್ಯಕತೆಗಳನ್ನು ಪೂರೈಸುವಂತಿರಬೇಕು. ಅದರ ಫಲ ತನಗೆ ಮಾತ್ರವೇ ಅಲ್ಲದೆ ಸಮಾಜಕ್ಕೂ ದೊರೆಯಬೇಕು. ಆಗ ಸ್ವಾರ್ಥ ಅಳಿದು ವಿಶ್ವಶಕ್ತಿ ಅಂತರಂಗದೊ ಳಕ್ಕೆ ಇಳಿಯುತ್ತದೆ. ಈ ಅರ್ಥದಲ್ಲಿಯೇ ಬಸವಣ್ಣ "ಕಾಯಕವೇ ಕೈಲಾಸ" ಎಂದುದು.

ಸಮಾಜ ಸ್ವಯಂಪೂರ್ಣವಾಗಬೇಕಾದರೆ ಮತ್ತು ಸುಖಮಯವಾಗಬೇಕಾದರೆ ಎಲ್ಲರೂ ಉದ್ಯೋಗಶೀಲರಾಗಲೇಬೇಕು. ದುಡಿಯದೆ ತಿನ್ನುವ ಹಕ್ಕು ಯಾರಿಗೂ ಇಲ್ಲ. ಭಿಕ್ಷೆ ಬೇಡುವುದನ್ನು ಅವರು ಖಂಡಿಸಿದರು. ಗುರುವಾದರೂ ಕಾಯಕದಿಂದಲೇ ಮುಕ್ತಿ. ಕಾಯಕದಲ್ಲಿ ತೊಡಗಿದ್ದರೆ ಲಿಂಗಪೂಜೆಯ ಹಂಗನ್ನಾದರೂ ತೊರೆಯಬೇಕು–ಎಂಬ ಮುಂತಾದ ಮಾತುಗಳಲ್ಲಿ ಕಾಯಕದ ಮಹತ್ವವನ್ನು ಎತ್ತಿ ಹಿಡಿದರು.

ಕಾಯಕದ ಇನ್ನೊಂದು ಮುಖ್ಯವಾದ ಅಂಶವೆಂದರೆ ' ಅಂದಂದಿನ ಕಾಯಕವ ಅಂದಂದು ಮಾಡಿ ಶುದ್ಧರಾಗಬೇಕು ' ಎಂಬುದು. ಅಂದರೆ ತನಗೆ ಅಗತ್ಯವಾದುದಕ್ಕಿಂತ ಹೆಚ್ಚಾಗಿ ಶೇಖರಿಸಿಕೊಳ್ಳಬಾರದು. ಆಯ್ದಕ್ಕಿ ಮಾರಯ್ಯ ಒಮ್ಮೆ ತನಗೆ ಅಗತ್ಯವಾದುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅಕ್ಕಿಯನ್ನು ಆಯ್ದು ಕಟ್ಟಿಕೊಂಡು ಬರುತ್ತಾನೆ. ಅದನ್ನು ಕಂಡು ಅವನ ಪತ್ನಿ ಲಕ್ಕಮ್ಮ ಹೇಳುವ ಮಾತು ಮನನೀಯವಾಗಿವೆ. " ಆಶೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗೆ ಉಂಟೇ ಅಯ್ಯ ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೇ ಅಯ್ಯ ? ಈಸಕ್ಕೆಯ ಆಸೆ ನಿಮಗೇಕೆ ? " – ಎಂದು ಹೆಚ್ಚಾದ ಅಕ್ಕಿಯನ್ನು ಅಲ್ಲಿಯೇ ಸುರಿದುಬರುವಂತೆ ಬಿನ್ನವಿಸುತ್ತಾಳೆ. ಇದರ ಹಿಂದಿರುವ ಅರ್ಥ ಉದಾತ್ತವಾದುದು : ಮಹಾತ್ಮಾ ಗಾಂಧೀಜಿಯವರು ಹೇಳುವ ಒಂದು ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. We are all thieves in a way. If we possess anything that we donot require for our immediate use, we thieve it from others." ಪ್ರತಿಯೊಬ್ಬರೂ ತಮಗೆ ಆವಶ್ಯಕವಾದಷ್ಟನ್ನು ತೆಗೆದುಕೊಂಡರೆ ಲೋಕದಲ್ಲಿ ಯಾರಿಗೂ ಯಾವ ಅವಶ್ಯಕತೆಗಳಿಗೂ ಕೊರತೆ ಬರುವುದಿಲ್ಲ. ಪ್ರಕೃತಿ ಎಲ್ಲರ ಆವಶ್ಯಕತೆಗಳನ್ನು ಪೂರೈಸುವಷ್ಟು ಉತ್ಪಾದಿಸುತ್ತಾಳೆ. ಆದರೆ ಮನುಷ್ಯ ದುರಾಶೆಯಿಂದ ಶೇಖರಿಸಿಟ್ಟುಕೊಂಡು ಅಸಮತೆಯನ್ನು ವಿರಸವನ್ನು ಉಂಟುಮಾಡುತ್ತಾನೆ. ಈ ಅಭಿಪ್ರಾಯವನ್ನು ಬಸವಣ್ಣನವರ ಕಾಯಕತತ್ವ ಒಳಗೊಂಡಿವೆ. ಇಂತಹ ಆದರ್ಶವನ್ನು ಲಕ್ಕಮ್ಮನಂತಹ ಒಬ್ಬ ಸ್ತ್ರೀ ಪ್ರತಿಪಾದಿಸುವಷ್ಟರಮಟ್ಟಿಗೆ ಅವರ ಕಾರ್ಯಕ್ಷೇತ್ರದ ಪ್ರಭಾವ ವ್ಯಾಪಿಸಿತ್ತು.

ಇಲ್ಲಿ ಇನ್ನೊಂದು ಮುಖ್ಯವಾದ ಅಂಶವನ್ನು ಗಮನಿಸಬೇಕು. ಸ್ತ್ರೀಯರೂ ಆಧ್ಯಾತ್ಮಿಕ ಮಾರ್ಗದಲ್ಲಿ ಎಂತಹ ಉನ್ನತವಾದ ಮಟ್ಟಕ್ಕೇರಿದ್ದರೆಂಬುದನ್ನು ಲಕ್ಕಮ್ಮನ ಮಾತುಗಳಲ್ಲಿ ಕಂಡುಕೊಳ್ಳಬಹುದು. ಇದು ಬಸವಣ್ಣನವರ ಸಾಧನೆಯ ಮಹತ್ವಪೂರ್ಣವಾದ ಅಂಶ. ಆ ಯುಗದಲ್ಲಿ ಸ್ತ್ರೀಯರು ಬಹುಮಟ್ಟಿಗೆ ಧರ್ಮಕ್ಕೆ ಅನಧಿಕಾರಿಗಳಾಗಿ ಪರಿಣಮಿಸಿದ್ದರು. ಮೈತ್ರೇಯಿ, ಗಾರ್ಗಿ ಇವರ ಕಾಲ ಎಂದೋ ಮುಗಿದುಹೋಗಿ ಸ್ತ್ರೀಯರಿಗೂ ಶೂದ್ರರಿಗೂ ವೇದವನ್ನು ಓದುವ ಹಕ್ಕಿಲ್ಲ ಎನ್ನುವ

ಮಟ್ಟಕ್ಕೆ ಇಳಿದಿದ್ದ ಕಾಲವದು. ಆಗ ಬಸವಣ್ಣನವರು ಆಧ್ಯಾತ್ಮಿಕ ಮಾರ್ಗದಲ್ಲಿ ಸ್ತ್ರೀಪುರುಷರೆಂಬ ಭೇದವಿಲ್ಲವೆಂಬುದನ್ನು ಸಾರಿ ಅವರಿಗೂ ಸಮಾನ ಅವಕಾಶ ಗಳನ್ನು ಕಲ್ಪಿಸಿಕೊಟ್ಟರು. ಅಕ್ಕಮಹಾದೇವಿ, ಮಹಾದೇವಮ್ಮ, ಲಿಂಗಮ್ಮ, ಕಾಳವ್ವೆ ಮೊದಲಾದ ಅನೇಕ ಶರಣೆಯರು ಆಧ್ಯಾತ್ಮದಲ್ಲಿ ಅನುಪಮವಾದ ಸಾಧನೆ ಯನ್ನು ಮಾಡಿರುವುದು ಕಂಡುಬರುತ್ತದೆ.

ಬಸವಣ್ಣನವರ ಸಾಮಾಜಿಕ ಸಮತೆ, ಧಾರ್ಮಿಕ ಸಮತೆಗೆ ತಳಹದಿಯಾಯಿತು. ಸಾಮಾಜಿಕ ಆಚಾರ ವ್ಯವಹಾರಗಳಲ್ಲಿ ಎಲ್ಲವೂ ಸಮಾನವಾಗಿರುವಂತೆಯೇ ಧಾರ್ಮಿಕ ಆಚರಣೆಗಳಲ್ಲಿಯೂ ಎಲ್ಲರೂ ಸಮಾನರು. ಅವರವರ ಪೂಜೆಯನ್ನು ಅವರೇ ಮಾಡ ಬೇಕು. ತಮ್ಮ ಉದ್ಧಾರವನ್ನು ತಾವೇ ಕಂಡುಕೊಳ್ಳಬೇಕು. 'ದುಡಿಮೆ' 'ವಿಶ್ರಾಂತಿ' 'ಉಪಾಸನೆ' ಇವು ಎಲ್ಲರ ಕರ್ತವ್ಯಗಳು. ಸಮಾಜದಲ್ಲಿ ಹಲವರ ಹಣೆಯ ಬರಹ ದುಡಿಯುವುದು ಮಾತ್ರವೆ ಆಗಿ, ಕೆಲವರು ಆ ದುಡಿಮೆಯ ಫಲ ವನ್ನು ಉಣ್ಣುವಂತಾಗಬಾರದು. ಹಾಗೆಯೇ ಸಮಾಜದ ಬಹುಜನರ ಪರವಾಗಿ ಉಪಾಸನೆಯನ್ನು ಕೆಲವು ಪುರೋಹಿತವರ್ಗದವರು ಗುತ್ತಿಗೆ ಹಿಡಿಯಬಾರದು. ಅದು ಧರ್ಮದ ದುರುಪಯೋಗಕ್ಕೆ ಕಾರಣವಾಗುತ್ತದೆ. ಅಲ್ಲದೆ ನನ್ನಪರವಾಗಿ ಇನ್ನಾರೋ ಪೂಜೆಯನ್ನು ಮಾಡಿ ನನ್ನನ್ನು ಉದ್ಧರಿಸುತ್ತಾರೆಂಬುದು ಹಾಸ್ಯಾಸ್ಪದ. "ತಾನುಂಬ ಊಟವನು, ತನ್ನಾಶ್ರಯದ ರತಿಸುಖವನು, ಬೇರೆ ಮತ್ತೊಬ್ಬರ ಕೈಯಲಿ ಮಾಡಿಸ ಬಹುದೆ ?" ಎಂದು ಕಠಿಣವಾಗಿ ಕೇಳುತ್ತಾರೆ ಬಸವಣ್ಣ.

ಹಾಗೆಯೇ ಅರ್ಥರಹಿತವಾದ ಕರ್ಮಗಳನ್ನು ಕಿತ್ತುಹಾಕಿದರು. ಪ್ರಾಣಿವಧೆಗೆ ಕಾರಣವಾದ ಯಜ್ಞಯಾಗಾದಿಗಳನ್ನು ಖಂಡಿಸಿದರು. 'ದಯೆಯೇ ಧರ್ಮದ ಮೂಲವಯ್ಯ' ಎಂದು ಧರ್ಮದ ಸಾತ್ವಿಕ ಸ್ವರೂಪವನ್ನು ಎತ್ತಿಹಿಡಿದರು. ಧರ್ಮದ ಹೆಸರಿನಲ್ಲಿ ರೂಪುಗೊಂಡಿದ್ದ ಕರ್ಮವಾದವನ್ನೂ ಅಂಧಶ್ರದ್ಧೆಯನ್ನೂ ಬಯಲಿಗೆಳೆದರು. ಮಾರಿ ಮಸಣಿಗಳನ್ನು ನಂಬುವುದು, ತಿಥಿ ವಾರ, ನಕ್ಷತ್ರ, ಶುಭ, ಅಶುಭ ಇತ್ಯಾದಿ ಗಳನ್ನು ನೋಡುವುದನ್ನು ಒಪ್ಪಲಿಲ್ಲ. "ತೃಣಮಪಿ ನ ಚಲತಿ ತೇನ ವಿನಾ" ಎಂಬ ನಿಷ್ಠೆ ಯಿಂದ ಒಂದೇ ಶಕ್ತಿಯನ್ನು ನಂಬಬೇಕು. ಇಲ್ಲವಾದರೆ ಸೃಷ್ಟಿಕರ್ತನ ಸರ್ವಶಕ್ತಿತ್ವ ದಲ್ಲಿಯೇ ಅಪನಂಬಿಕೆಯನ್ನಿಡುವ ಧರ್ಮದ್ರೋಹಕ್ಕೆ ಗುರಿಯಾಗುತ್ತೇವೆ. ಎಲ್ಲದಿನ ಗಳೂ ಶುಭ ದಿನಗಳು, ಎಲ್ಲ ಶಕುನಗಳೂ ಶುಭಶಕುನಗಳು. "ಎಮ್ಮವರೊಲಿದುದೇ ಶುಭಲಗ್ನವೆನ್ನಿರಯ್ಯ" ಎಂಬುದು ಅವರ ನಿಲವು.

ಅರಿತು ಆಚರಿಸುವ ನೈತಿಕ ಆಚರಣೆ ಮತ್ತು ಹೃದಯ ಶುದ್ಧಿ—ಇವುಗಳಿಂದ ಮುಂದೆ ನಡೆದ ಸಾಧಕ, ನಡೆದುದೇ ಮಾರ್ಗವಾಗುತ್ತದೆ; ನುಡಿದುದೇ ಧರ್ಮವಾಗು ತ್ತದೆ—ಎಂದ ಬಸವಣ್ಣನವರು ಹಾಗೆ ನಡೆದು ನುಡಿದು ತೋರಿಸಿದರು. ನೂರಾರು ಜನರನ್ನು ಆ ಮಾರ್ಗದಲ್ಲಿ ನಡೆಸಿದರು.

ಅನುಭವ ಮಂಟಪದಲ್ಲಿದ್ದ ವಿವಿಧ ಕಾಯಕಗಳ ಶರಣರನ್ನು ಅವರು ಏರಿದ ನಿಲವನ್ನೂ ಅವರ ವಚನಗಳನ್ನೂ ನೋಡಿದರೆ ಬಸವಣ್ಣನವರ ಮಹತ್ಸಾಧನೆಯ ಅರಿವಾಗುತ್ತದೆ. ಅನುಭವಮಂಟಪ ಅವರ ಸಾಧನೆಗೆ ಸಾರ್ವಕಾಲಿಕ ಸಂಕೇತವಾಗಿ ನಿಂತಿದೆ. ಹರಳಯ್ಯನಿಂದ ಹಿಡಿದು, ಮಂತ್ರಿ ಬಸವೇಶ್ವರನವರೆಗೂ ಎಲ್ಲರೂ ಸಮಾನ ಸ್ಕಂಧರಾಗಿ ಕುಳಿತು ತತ್ವಜಿಜ್ಞಾಸೆಯಲ್ಲಿ ತೊಡಗುತ್ತಿದ್ದರು. ಆ ಸರ್ವಸಮಾನತೆಯ ಸಾಧನೆ ಇಂದಿನ ಜಗತ್ತಿನಲ್ಲಿಯೇ ಸಂಪೂರ್ಣವಾಗಿ ಸಿದ್ಧಿಸಿಲ್ಲವೆಂದರೆ ಬಸವಣ್ಣನವರ ಕರ್ತೃತ್ವ ಶಕ್ತಿಯ ಅರಿವು ಆಗದಿರದು.

ಒಟ್ಟಿನಲ್ಲಿ ಬಸವಣ್ಣನವರು ಯುಗಪ್ರವರ್ತಕಶಕ್ತ ಕಾಲದ ಪರಿಮಿತ ಬಂಧನವನ್ನು ಮೀರಿ ಉಳಿಯುವ ಮತ್ತು ಬೆಳೆಯುವ ತತ್ವಗಳನ್ನು ಅವರು ಸಾರಿದರು—ಅವರ ಸರ್ವ ಸಮತಾಭಾವನೆ, ಸ್ವಯಂಪೂರ್ಣ ಸಮಾಜದ ಕಲ್ಪನೆ, ಕಾಯಕತತ್ವ–ಮೊದಲಾದುವು ಅಂದಿನ ಜನಾಂಗಕಿಂತ ಹೆಚ್ಚು ಅರ್ಥವತ್ತಾಗಿ ಇಂದಿನ ವಿಚಾರವಂತ ಮನಸ್ಸನ್ನು ಸೆರೆಹಿಡಿಯುತ್ತವೆ. ಇಂದಿನ ತೊಡಕುಗಳಮೇಲೂ ಬೆಳಕನ್ನು ಬೀರಲು ಸಮರ್ಥವಾಗಿವೆ. ಅವರ ವ್ಯಕ್ತಿತ್ವದಿಂದ ಕನ್ನಡಸಂಸ್ಕೃತಿ ಮತ್ತು ಸಾಹಿತ್ಯಗಳು ಭರತಖಂಡದ ಇತಿಹಾಸದಲ್ಲಿ ಒಂದು ವಿಶಿಷ್ಟತೆಯನ್ನು ಶ್ರೀಮಂತಿಕೆಯನ್ನೂ ಪಡೆದುವು. ಅವರ ಆ ಸಂದೇಶ ಪ್ರಾದೇಶಿಕ ಮಿತಿಯನ್ನು ಮೀರಿ ಆಧುನಿಕ ಜಗತ್ತಿನ ವಿಶಾಲಕ್ಷೇತ್ರಕ್ಕೆ ಹರಿಯುವುದು ಅಗತ್ಯವಾಗಿದೆ.





# ಗಾಂಧೀ ದರ್ಶನ–ಮೂಲತತ್ವಗಳು

## ಶ್ರೀ ಯಾಮುನಾಚಾರ್ಯ

ಗಾಂಧೀಜೀಯವರ ದರ್ಶನವನ್ನು 'ಪ್ರಯೋಗಾತ್ಮಕ ಧ್ಯೇಯ'ವಾದವೆಂದು ನಾಮಕರಣಮಾಡಬಹುದು. ಅವ್ಯವಹಾರ್ಯವಾದ ನೀತಿ ಸಿದ್ಧಾಂತದಲ್ಲಾಗಲಿ ಅನುಷ್ಠಾನಕ್ಕೆ ತರಲಾಗದ ಪಾರಮಾರ್ಥಿಕ ತತ್ವದಲ್ಲಾಗಲಿ ಗಾಂಧೀಜೀಗೆ ಆಸಕ್ತಿ ಇರಲಿಲ್ಲ. ಇವರ ದರ್ಶನ ಪುಸ್ತಕ ಲಭ್ಯವಾದುದಾಗಿರಲಿಲ್ಲ. ಇದು ಜೀವನದರ್ಶನವಾಗಿತ್ತು. ಸಮಗ್ರ ದರ್ಶನವಾಗಿತ್ತು. ಜೀವನದ ಯಾವ ಅಂಶವೂ ಈ ದರ್ಶನಕ್ಕೆ ಹೊರತಾಗಿರಲಿಲ್ಲ. ಜ್ಞಾನ ಅನುಷ್ಠಾನಗಳು ಒಂದರೊಡನೆ ಒಂದು ಹೊಂದಿಕೊಂಡಿದ್ದ ದರ್ಶನವಾಗಿತ್ತು. ಯಾವ ಜ್ಞಾನ ಅನುಷ್ಠಾನದಲ್ಲಿ ಪರ್ಯವಸಾನಗೊಳ್ಳುವುದಿಲ್ಲವೋ ಆ ಜ್ಞಾನಕ್ಕೆ ಗಾಂಧೀ ಬೆಲೆ ಕೊಡುತ್ತಿರಲಿಲ್ಲ. ಯಾವೊಂದು ಧ್ಯೇಯವನ್ನಾಗಲಿ ಸತ್ಯ ಅಥವಾ ಧರ್ಮ ಎಂದು ನಂಬುವುದಾದರೆ ಅದನ್ನು ಅನುಷ್ಠಿಸಿಯೇ ತೀರಬೇಕು. ಇಲ್ಲವಾದರೆ ಆ ಧ್ಯೇಯ ಬರಿಯ ಹಗಲುಗನಸು ಎಂದು ಗಾಂಧೀಜೀ ಭಾವಿಸಿದ್ದರು. ಗಾಂಧೀಜಿ ತಮ್ಮ ಪ್ರಾಯೋಗಿಕ ಧ್ಯೇಯವಾದವನ್ನು ಕುರಿತು ಹೀಗೆ ಹೇಳುತ್ತಾರೆ: "ನಾನು ಕನಸು ಕಾಣುವವನಲ್ಲ. ನಾನೊಬ್ಬ ವ್ಯಾವಹಾರ್ಯ ಧ್ಯೇಯವಾದಿ ಎಂದು ಹೇಳಬಯಸುತ್ತೇನೆ. ಅಹಿಂಸಾಧರ್ಮ ಋಷಿಗಳಿಗೆ, ಸಂತರಿಗೆ ಮಾತ್ರ ಅನ್ವಯಿಸಬೇಕೆಂದು ಅರ್ಥವಲ್ಲ. ಸಾಮಾನ್ಯಜನಕ್ಕೂ ಅದು ಅನ್ವಯಿಸಬೇಕೆಂಬುದೇ ಇವರ ತಾತ್ಪರ್ಯ. ಹಿಂಸೆ ಮೃಗಜಾತಿಯ ನಿಯಮವಾಗಿರುವಂತೆ ಅಹಿಂಸೆ ನಮ್ಮ ಮಾನವಜಾತಿಯ ನಿಯಮವಾಗಿದೆ".

ಗಾಂಧೀಜೀ ದರ್ಶನದ ಮೂಲತತ್ವಗಳು ಸತ್ಯ ಮತ್ತು ಅಹಿಂಸೆ. ಸತ್ಯ ಸಾಧ್ಯ; ಅಹಿಂಸೆ ಸಾಧನ. ಗಾಂಧೀಜೀ ಹೇಳಿದರು: "ಸತ್ಯ ನನ್ನ ದೇವರು. ಅಹಿಂಸೆ ಅವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಸಾಧನ". ದೇವರು ಸತ್ಯ ಎನ್ನುವುದಕ್ಕಿಂತಲೂ ಸತ್ಯವೇ ದೇವರು ಎಂಬ ನಿಲುವಿಗೆ ಗಾಂಧೀ ಬಂದರು. ಎಲ್ಲಿ ಸತ್ಯವಿರುವುದೋ ಅಲ್ಲಿ ದೇವರಿರುವನೆಂದು ನಂಬಿದರು. ಅಹಿಂಸೆಗೆ ಸಾಮಾನ್ಯವಾಗಿ

ನಾವು ಕೊಡುವ ಅರ್ಥಕ್ಕಿಂತಲೂ ವಿಶಾಲವಾದ ಅರ್ಥಕೊಟ್ಟಿದ್ದಾರೆ ಗಾಂಧೀ. ಕೊಲ್ಲ ದಿದ್ದರೆ ಸಾಕು ಅಹಿಂಸೆಯ ಪರಿಪಾಲನೆ ಆಯಿತೆಂದು ಭಾವಿಸುವವರಿಗೆ ಈ ಒಂದು ಎಚ್ಚರಿಕೆಯ ಮಾತನ್ನು ಹೇಳಿದ್ದಾರೆ: "ಅಹಿಂಸೆ ಎಂದರೆ ಕೊಲ್ಲದಿರುವುದಲ್ಲ. ಕ್ರಿಮಿಕೀಟಗಳನ್ನು ಕೊಲ್ಲದೇ ಇದ್ದ ಮಾತ್ರದವನಾಗಿದ್ದು ಎಲ್ಲ ಪ್ರಾಣಿಗಳ ವಿಷಯ ದಲ್ಲಿ ಹೃದಯದಲ್ಲಿ ಪ್ರೇಮ ತಾಳದವನಾದರೆ ಅವನಿಗೆ ಪರಲೋಕದಲ್ಲಿ ಮನ್ನಣೆ ಇರು ವುದಿಲ್ಲ. ನಿಜವಾದ ಪ್ರೀತಿ ಸಾಗರದಂತೆ ಅನಂತವಾದದ್ದು ಮತ್ತು ತನ್ನಲ್ಲಿಯೇ ಉಕ್ಕಿ ಬಂದು ಎಲ್ಲ ಗಡಿ ಮೇರೆಗಳನ್ನು ದಾಟಿ ಇಡೀ ಜಗತ್ತನ್ನು ಆವರಿಸುವುದು". ಗಾಂಧೀ ಜಿಯವರ ದೃಷ್ಟಿಯಲ್ಲಿ ಅಹಿಂಸೆ ಎಂದರೆ ಪ್ರೇಮ, ದಯೆ, ಕರುಣೆ. ಸತ್ಯ ಸಾಕ್ಷಾ ತ್ಕಾರ ಪ್ರೇಮದಿಂದಲೇ ಸಾಧ್ಯ. ಪ್ರೇಮಸ್ವರೂಪಿಯೇ ಭಗವಂತ. ಅವನನ್ನು ಒಲಿಸಿಕೊಳ್ಳುವುದು ಪ್ರೇಮದಿಂದಲೇ ಸಾಧ್ಯ. ಮಾನವನನ್ನು ಒಲಿಸಿಕೊಳ್ಳುವುದೂ ಪ್ರೇಮದಿಂದಲೇ. ಗಾಂಧೀಜೀಗೆ ಸಾಧ್ಯ ಮಾತ್ರ ಒಳ್ಳೆಯದಾಗಿದ್ದರೆ ಸಾಲದು. ಅದನ್ನು ಸಾಧಿಸಲು ಅವಲಂಬಿಸುವ ಸಾಧನವೂ ಶುದ್ಧವಾಗಿರಬೇಕು. ಈ ನೀತಿ ಯನ್ನು ಗಾಂಧೀ ರಾಜಕೀಯ ಕ್ಷೇತ್ರದಲ್ಲಿ ಯಶಸ್ವಿಯಾಗಿ ಪ್ರಯೋಗಮಾಡಿ ತೋರಿ ಸಿದರು.

ಗಾಂಧೀಜೀಯ ದರ್ಶನದಲ್ಲಿ ಕಾಯಕಕ್ಕೆ ಪ್ರಧಾನಸ್ಥಾನವಿದೆ. 'ಕಾಯಕವೇ ಕೈಲಾಸ'ವೆಂಬ ಶರಣರ ಸಂದೇಶವನ್ನು ಕಾರ್ಯಗತ ಮಾಡಿದರು. ದುಡಿಯುವವರು ಕೆಲವರು, ಅವರ ದುಡಿಮೆಯ ಫಲವನ್ನು ಅನುಭವಿಸುವವರು ಇತರರು ಅನ್ನುವ ಅಸ್ತ ವ್ಯಸ್ತವಾದ ಸಾಮಾಜಿಕ ಪರಿಸ್ಥಿತಿಯನ್ನು ಗಾಂಧೀಜೀ ಎಂದೂ ಒಪ್ಪಲಿಲ್ಲ. ಮಾನವ ರಲ್ಲಿ ಬುದ್ಧಿಜೀವಿಗಳು ಶ್ರಮಜೀವಿಗಳು ಎಂಬ ವರ್ಗಭೇದ ಇವರಿಗೆ ಹಿಡಿಸಲಿಲ್ಲ. ಬುದ್ಧಿಜೀವಿಗಳು ಶ್ರಮಜೀವಿಗಳಾಗಿರಬೇಕು, ಶ್ರಮಜೀವಿಗಳು ಬುದ್ಧಿಜೀವಿಗಳಾಗಿ ಇರ ಬೇಕು ಎಂಬುದೇ ಇವರ ಅಭಿಮತ. ಗಾಂಧೀಜಿಯ ದೃಷ್ಟಿಯಲ್ಲಿ ಶರೀರ ಶ್ರಮ ದೈಹಿಕ ಮತ್ತು ಮಾನಸಿಕ ಆರೋಗ್ಯಕ್ಕೆ ಅವಶ್ಯಕವಾದ ಸಿದ್ಧೌಷಧಿ. ಹೀಗೆ ಮಾಡಿದ ಶರೀರ ಶ್ರಮ ಉತ್ಪಾದಕವಾದುದಷ್ಟೇ ಆಗಿರದೆ ಬುದ್ಧಿಪೂರ್ವಕವಾಗಿ ಮಾಡಿದ ಶರೀರ ಶ್ರಮವಾಗಿರಬೇಕು. ಯಂತ್ರವತ್ತಾಗಿ ಮಾಡಿದ ಶರೀರಶ್ರಮವಾಗಿರಬಾರದೆಂದು ಅವರ ನಂಬಿಕೆ ಆಗಿತ್ತು. ಈ ವಿಷಯದಲ್ಲಿ ಗಾಂಧೀಜೀಗೆ ಸ್ಫೂರ್ತಿ ಕೊಟ್ಟ ಟಾಲ್‌ಸ್ಟಾಯ್ 'ಆನ್ನಾ ಕರೆನೀನಾ' ಅನ್ನುವ ಕಾದಂಬರಿಯಲ್ಲಿ ಲೆವ್ಹಿನ್ ಎಂಬ ಪಾತ್ರದ ಮೂಲಕ ಈ ಮಾತು ಹೇಳುತ್ತಾನೆ: 'ನಾನು ವೈದ್ಯಶಾಸ್ತ್ರಕ್ಕೆ ಒಂದು ಹೊಸ ಮಾತನ್ನು ಕೊಟ್ಟು ಅದನ್ನು ಪುಷ್ಟಿಗೊಳಿಸುತ್ತೇನೆ—ಅದು ಶರೀರ ಶ್ರಮ ಎಂಬ ಚಿಕಿತ್ಸೆ. ನರ ಸಂಬಂಧವಾದ ದೌರ್ಬಲ್ಯಗಳೆಲ್ಲಕ್ಕೂ ಇದು ಸರ್ವೋತ್ಕೃಷ್ಟ ಔಷಧ.' ಗಾಂಧೀಜೀಗೆ ಇದರಲ್ಲಿ ಸಂಪೂರ್ಣ ನಂಬಿಕೆ ಇತ್ತು. ಆದರೆ ಶರೀರ ಶ್ರಮದೊಡನೆ ಮಾನಸಿಕ, ನೈತಿಕ, ಆಧ್ಯಾತ್ಮಿಕ ವ್ಯವಸಾಯ ಅತ್ಯಾವಶ್ಯವೆಂದು ಭಾವಿಸಿದರು. ಶರೀರಶ್ರಮ

ಜೊಡನೆ ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ವಾದ, ಭಯವರ್ಜನ ಮೊದಲಾದ ದೈಹಿಕ ಮತ್ತು ಮಾನಸಿಕ ನಿಷ್ಠೆಗಳನ್ನೂ ಜೋಡಿಸಿದರು. ಶರೀರ ಶ್ರಮ ಗಾಂಧೀಜಿಯ ಏಕಾದಶವ್ರತಗಳಲ್ಲಿ ಒಂದು ವ್ರತವಾಯಿತು.

ಗಾಂಧೀಜಿ ಅನುಷ್ಠಿಸಿದ ವ್ರತಗಳಲ್ಲಿ ಅಪರಿಗ್ರಹ ಎಂಬುದು ಇತರ ವ್ರತಗಳಷ್ಟೇ ಮುಖ್ಯವಾದದ್ದು. ಇದು ಗಾಂಧೀಜೀಯವರ ಸೊತ್ತಿನ ಧರ್ಮದರ್ಶಿತ್ವ ಸಿದ್ಧಾಂತದಲ್ಲಿ ಪರ್ಯವಸಾನಗೊಂಡಿತು. ನಮ್ಮಲ್ಲಿರುವುದನ್ನು ಇತರರೊಡನೆ ಹಂಚಿಕೊಂಡು ಬಾಳುವುದು ಒಂದು ಜೀವನಮಾರ್ಗವೆನಿಸಿತು. ಧನಿಕರು ತಮ್ಮ ಧನದಲ್ಲಿ ಆದಷ್ಟು ಕಡಿಮೆ ತಮಗಾಗಿ ಬಳಸಿ ಉಳಿದುದಕ್ಕೆ ತಾವು ಧರ್ಮದರ್ಶಿಗಳೆಂದು ಭಾವಿಸಿ ಸಾರ್ವಜನಿಕ ಹಿತಕ್ಕಾಗಿ, ದಾನ ಧರ್ಮಗಳಿಗಾಗಿ ವಿನಿಯೋಗಿಸಬೇಕೆಂದು ಇಚ್ಛಿಸಿದರು. ಇಂತಹ ಜೀವನದ ನೀತಿಯಿಂದ ಗಾಂಧೀಜೀ ಧನಿಕ ಮತ್ತು ದರಿದ್ರ ವರ್ಗಗಳಲ್ಲಿ ವೈಮನಸ್ಯ ಹುಟ್ಟಿ ವರ್ಗಕಲಹದ ವಿಷ ಬೀಜಾವ್ಯಾಪನೆ ಆಗಬಾರದೆಂದು ಬಯಸಿದರು. ಈ ವಿಷಯದಲ್ಲಿ ಗಾಂಧೀ ಮಾರ್ಗಕ್ಕೂ ಮತ್ತು ಕಮ್ಯೂನಿಸಂ ಮಾರ್ಗಕ್ಕೂ ಇರುವ ಅಂತರ ಸ್ಪಷ್ಟವಾಗಿದೆ. ‘ ನರಕಕ್ಕೆ ಒಯ್ಯುವ ಮೂರು ದಾರಿಗಳಲ್ಲಿ ‘ ಲೋಭ ’ ಎಂಬುದೊಂದು ಅನ್ನುವ ಭಗವದ್ಗೀತೆಯ ತತ್ವವನ್ನು ಇಂದಿನ ಜೀವನದ ಒರೆಗಲ್ಲಿಗೆ ಒರೆಹಚ್ಚಿ ನೋಡಿದರು.

ನರಕದ ಮತ್ತೊಂದು ದಾರಿ ಕಾಮವೆಂದು ಗೀತೆ ಸಾರುತ್ತದೆ. ಧರ್ಮಕ್ಕೆ ವಿರುದ್ಧವಲ್ಲದ ಕಾಮ ಕುಟುಂಬ ಜೀವನದ ತಳಹದಿ, ಗೃಹಸ್ಥಾಶ್ರಮದ ತತ್ವ. ಈ ದೃಷ್ಟಿಯಿಂದ ಗಾಂಧೀಜಿ ಸ್ತ್ರೀ ಪುರುಷ ಸಂಬಂಧದ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸಿದರು. ಕಾಮದ ವಿಷಯದಲ್ಲಿ ಸ್ವಯಂಪ್ರೇರಿತ ಸಂಯಮ ತಾಳುವುದು ಮಾನವ ಸ್ವಭಾವದ ವೈಶಿಷ್ಟ್ಯವೆಂದು ಗಾಂಧೀಜೀ ಅಭಿಪ್ರಾಯಪಟ್ಟರು. ‘ ಬ್ರಹ್ಮಚರ್ಯೆಯೋ ಅಥವಾ ಕಾಮಸಾಧನೆಯೋ ’ ಅನ್ನುವ ಗ್ರಂಥದಲ್ಲಿ ಈ ಸಮಸ್ಯೆಯನ್ನು ಸವಿಸ್ತಾರವಾಗಿ ವಿಮರ್ಶಾತ್ಮಕವಾಗಿ ಬಿಡಿಸಿದ್ದಾರೆ. ಸ್ತ್ರೀಯು ಪುರುಷನ ಬೇಟೆ ಕೂಟಗಳಿಗಾಗಿ ಏರ್ಪಟ್ಟ ಕಾಮಪುತ್ಥಳಿಯಲ್ಲ. ಅವಳೂ ಒಂದು ಆತ್ಮ; ಅವಳಿಗೂ ವಿಶಿಷ್ಟವಾದ ವ್ಯಕ್ತಿತ್ವವಿದೆ. ಅವಳು ಪುರುಷನ ದಾಸಿಯೂ ಅಲ್ಲ, ಆಟಿಗೆಯೂ ಅಲ್ಲ. ಇದನ್ನು ಯುವಕ ಯುವತಿಯರಿಬ್ಬರಿಗೂ ಬೋಧಿಸಿದರು. ಯುವತಿಯರನ್ನು ಕುರಿತು ಈ ರೀತಿ ಹೇಳಿದ್ದಾರೆ : ‘ ನವಯುಗದ ಯುವತಿ ಸಾಲ್ವರು ರೋಮಿಯೋಗಳಿಗೆ ಜೂಲಿಯಟ್ ಆಗಲು ಬಯಸುತ್ತಿರುವಳೆಂದು ನಾನು ಅಂಜುತ್ತೇನೆ. ಭ್ರಷ್ಟತನದ ಕಡೆಗೆ ಅವಳ ಮನಸ್ಸು ಒಲಿದಿದೆ. ಗಾಳಿ, ಮಳೆ, ಬಿಸಿಲುಗಳಿಂದ ದೇಹವನ್ನು ಕಾಪಾಡಲು ಯೋಗ್ಯವಾದ ಉಡುಪನ್ನು ಇವಳು ಧರಿಸುತ್ತಿಲ್ಲ. ಯುವಕರ ಮನಸ್ಸನ್ನು ಸೆಳೆಯಲು ಪ್ರಯತ್ನಿಸುತ್ತಾಳೆ. ಪ್ರಕೃತಿದತ್ತವಾದ ಸೌಂದರ್ಯವನ್ನು ಅಲ್ಲಗಳೆಯಲು ಮುಖಕ್ಕೆ ವರ್ಣ ಮೆತ್ತಿ ಅಸಾಮಾನ್ಯಳಾಗಿ ಕಾಣಲು ಬಯಸುತ್ತಾಳೆ;

ನನ್ನ ದಾರಿ ಇಂತಹ ತರುಣಿಯರಿಗೆ ಸಲ್ಲದು'. ಹೀಗೆಂದು ಕಾಲೇಜ್ ಹುಡುಗಿಯೊಬ್ಬಳು ಬರೆದ ಕಾಗದಕ್ಕೆ ಪ್ರತ್ಯುತ್ತರವಿತ್ತರು. ಕಾಲೇಜಿನ ಯುವಕ ವೃಂದವನ್ನು ಕುರಿತು ಹೀಗೆ ಹೇಳಿದ್ದಾರೆ : 'ಯುವಕರಲ್ಲಿ ಒಳ್ಳೆ ನಡತೆ ಇರಬಾರದೇಕೆ ? ಸಾಧ್ವೀಮಣಿಯರಾದ ಯುವತಿಯರು ಇವರನ್ನು ನೋಡಿ ಅಂಜುವಂತಾಗಬೇಕಾಗಿರುವುದು ಏಕೆ ಅನ್ನುವುದು ಒಂದು ದೊಡ್ಡ ಪ್ರಶ್ನೆ. ಅನೇಕ ಯುವಕರಲ್ಲಿ ಸತ್ಪುರುಷರ ಸೌಜನ್ಯವಿಲ್ಲದಿರುವುದು ನನಗೆ ದುಃಖವನ್ನುಂಟು ಮಾಡಿದೆ. ವಿದ್ಯಾರ್ಥಿ ವರ್ಗದವರು ತಮ್ಮ ವರ್ಗದ ಮಾನ ಗೌರವಗಳನ್ನು ಕಾಪಾಡಿಕೊಳ್ಳುವುದಾದರೆ ಅಸಭ್ಯವರ್ತನೆಗೆ ತಮ್ಮಲ್ಲಿ ಯಾರೂ ತೊಡಗದಂತೆ ನೋಡಿಕೊಳ್ಳಬೇಕು. ತನ್ನ ಅಕ್ಕತಂಗಿಯರ ಮತ್ತು ತಾಯಂದಿರ ಮಾನರಕ್ಷಣೆ ಎಷ್ಟು ಮುಖ್ಯವೋ ಇತರರ ಅಕ್ಕತಂಗಿಯರ ತಾಯಂದಿರ ಮಾನರಕ್ಷಣೆ ಇಷ್ಟೇ ಮುಖ್ಯವೆಂಬುದನ್ನು ನೆನಪಿನಲ್ಲಿಡಬೇಕು. ಈ ವಿಷಯದಲ್ಲಿ ಒಳ್ಳೆಯ ನಡತೆ ಇಲ್ಲದ ವಿದ್ಯಾರ್ಥಿಗಳು ಎಷ್ಟು ವಿದ್ಯೆ ಕಲಿತರೂ ಅವೆಲ್ಲವೂ ವ್ಯರ್ಥ'.

ಗಾಂಧೀ ದೃಷ್ಟಿಯಲ್ಲಿ ಆತ್ಮಸಂಯಮ ಮಾನವನ ಬಾಳಿನ ಪ್ರಧಾನ ನಿಯಮ. ಅವನ ಮಾನವತ್ವ ಸಿದ್ಧಿಯ ಸಾಧನ. ಆತ್ಮಸಂಯಮದ ಬಾಳನ್ನು ಕುರಿತು ಗಾಂಧೀಜಿ ಹೀಗೆ ಹೇಳುತ್ತಾರೆ: 'ಆತ್ಮಸಂಯಮದ ಬಾಳಿಗೆ ಅನ್ವಯಿಸುವ ನಿಯಮಗಳು ವಿಷಯಲೋಲುಪತೆಯ ಬಾಳಿಗಿಂತಲೂ ತೀರ ಭಿನ್ನವಾಗಿರಬೇಕು. ಆದ್ದರಿಂದ ನಿಮ್ಮ ಸಹವಾಸ, ನಿಮ್ಮ ಓದು, ನಿಮ್ಮ ವಿಹಾರಸ್ಥಾನಗಳು, ನಿಮ್ಮ ಆಹಾರ ಇವುಗಳೆಲ್ಲವನ್ನೂ ಸರಿಹೊಂದಿಸಿಕೊಳ್ಳಬೇಕು. ಸಜ್ಜನರ ಮತ್ತು ನಿಷ್ಕಳಂಕ ಸಹವಾಸವನ್ನು ಆರಿಸಬೇಕು. ಭಾವೋದ್ರೇಕಗೊಳಿಸುವ ಕಾದಂಬರಿಗಳು ಮತ್ತು ಲೇಖನ ಸಂಗ್ರಹಗಳನ್ನು ಓದುವ ಗೊಡವೆಗೆ ಹೋಗದಂತೆ ದೃಢಸಂಕಲ್ಪ ಮಾಡಿಕೊಳ್ಳಬೇಕು.'

ದಾಂಪತ್ಯಜೀವನದಲ್ಲಿಯೂ ಸಹ ಸಂಯಮ ನಿಯಮಗಳಿಂದ ಸ್ತ್ರೀಪುರುಷರೀರ್ವರೂ ಸಹಧರ್ಮಚರ್ಯದಿಂದ ವರ್ತಿಸುವುದು ಹೇಗೆಂದು ತಮ್ಮ ಮತ್ತು ತಮ್ಮ ಸಹಧರ್ಮಚಾರಿಣಿಯಾದ ಕಸ್ತೂರಿಬಾ ಅವರ ಆದರ್ಶ ವ್ಯಕ್ತಿತ್ವದಿಂದ ಪ್ರಕಾಶ ಪಡಿಸಿದ್ದಾರೆ. 'ವಿವಾಹ ಒಂದು ಸಂಸ್ಕಾರವೆಂದು ನಾವು ಬಯಸುವುದಾದರೆ ಅದರಲ್ಲಿ ಏಕಸಂತಾನೋತ್ಪತ್ತಿಗೆ ಮಾತ್ರ ಅವಕಾಶವುಂಟು. ಆದ್ದರಿಂದಲೇ ನಮ್ಮ ಶಾಸ್ತ್ರಗಳಲ್ಲಿ ಮೊದಲನೆಯ ಸಂತಾನಕ್ಕೆ 'ಧರ್ಮಜ' ಎಂದು ಹೆಸರು. ತದನಂತರದ ಸಂತಾನವೆಲ್ಲವೂ 'ಕಾಮಜ' ಎಂದು ಕರೆಯಲ್ಪಟ್ಟಿದೆ. ಮಗ, ಮಗಳು ಅನ್ನುವ ಭೇದಭಾವ ನನಗಿಲ್ಲ. ನನ್ನ ಅಭಿಪ್ರಾಯದಲ್ಲಿ ಈ ವಿಷಯದಲ್ಲಿ ಮಾಡುವ ಪಕ್ಷಪಾತ ಸಲ್ಲದು, ಸರ್ವಥಾ ಅನುಚಿತ' ಹೀಗೆನ್ನುತ್ತಾರೆ ಗಾಂಧೀಜಿ.

ಅಶ್ಲೀಲವಾದ ಗ್ರಂಥಪಠನದಿಂದ, ಚಲನಚಿತ್ರಾವಲೋಕನದಿಂದ, ಪರಸ್ಪರ ಕಾಮಪ್ರಚೋದಕವಾದ ಸಂಭಾಷಣೆಯಿಂದ ಮನಸ್ಸಿನಮೇಲೆ ಆಗುವ ದುಷ್ಪರಿಣಾಮ

